


# ಹೊಸತು

ನೆಮ್ಮದಿಯ ನಾಳೆ ನಮ್ಮದು

ಅಕ್ಟೋಬರ್ ೨೦೧೦
ಬೆಲೆ : ರೂ. ೧೨

# Are you holding or looking for ISO 9001/ ISO 14001 Certification ?

# BEWARE

**There is an international system for ensuring acceptability of ISO 9001/14001 certificates worldwide operated by the International Accreditation Forum.**

**Be sure you choose a certification body (CB) which can provide an accredited certificate recognized within the international system of equivalence.**

## BECAUSE

- There are CBs accredited by bodies ***not*** members of IAF
- There are CBs accredited by bodies ***not*** members of IAF Multi-Lateral arrangement for mutual recognition
- There are CBs accredited by members of IAF arrangement but ***not*** accredited for technical areas of your operations

**Save yourself from all headaches**
**Rely on NABCB accredited certificates**




*For any information, contact*

**NATIONAL ACCREDITATION BOARD FOR CERTIFICATION BODIES (NABCB)**
**Quality Council of India**
2nd Floor, Institution of Engineers Building, 2, Bahadur Shah Zafar Marg, New Delhi-110002, India
Tel: +91-11-2337-8056/57,9321,9260, Fax: +91-11-23379621, Email: nabcb@qcin.org

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ
ಮುಖಪುಟ : ಪಂಡಿತ ರಾಜೀವ್ ತಾರಾನಾಥ  ವರ್ಣಚಿತ್ರ : ಅನನ್ಯ ರಾಘವೇಂದ್ರ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಈವರೆಗೆ ಸಮಗ್ರವಾದ ಪುಸ್ತಕನೀತಿಯೊಂದನ್ನು ರೂಪಿಸುವುದಕ್ಕೆ ಸರಕಾರಕ್ಕೆ ಇನ್ನೂ ಕಾಲ ಕೂಡಿಬಂದಿಲ್ಲ. ಗ್ರಂಥಾಲಯಗಳಿಗೆ ಪುಸ್ತಕ ಖರೀದಿಯಂತೂ ಭ್ರಷ್ಟಾಚಾರದ ಹಂದರ, ಹಗರಣಗಳ ಆಗರ. ಇತ್ತೀಚೆಗೆ ಸಚಿವರೊಬ್ಬರ ಬಂಧುವಿನ ಪುಸ್ತಕಗಳ ಖರೀದಿಗೆ ಗ್ರಂಥಾಲಯ ಇಲಾಖೆ ಒಂದು ಕೋಟಿ ರೂಪಾಯಿ ವಿನಿಯೋಗಿಸಿತು ಎಂಬ ವರದಿ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಅಮೆರಿಕಾ ಪ್ರವಾಸಕ್ಕೆ ಐವತ್ತು ಅರವತ್ತು ಲಕ್ಷ ರೂಪಾಯಿಗಳನ್ನು ಖರ್ಚು ಮಾಡುವ ಸರಕಾರದ ಸಂಸ್ಕೃತಿ ಇಲಾಖೆಗೆ ಒಳ್ಳೆಯ ಪುಸ್ತಕ ಪ್ರಕಟಣೆಗೆ ಬೆಂಬಲಿಸಲು, ಅಂಥ ಪುಸ್ತಕ ಖರೀದಿಸಲು ಮಾತ್ರ ಮನಸ್ಸು ಬರುವುದಿಲ್ಲ. ಈಗಂತೂ ಅಮೆರಿಕಾ ಪ್ರವಾಸಕ್ಕೆ ಎರಡೆರಡು ಅವಕಾಶ – ಒಂದು ಕಡೆ 'ನಾವಿಕ', ಇನ್ನೊಂದು ಕಡೆ – 'ಅಕ್ಕ'. ಸರಕಾರಿ ಖರ್ಚಿನಲ್ಲಿ ಅಮೆರಿಕಾ ಪ್ರವಾಸ ಯಾರಿಗೆ ಬೇಡ !

ಹೀಗೊಂದು ಪ್ರಕರಣ. ನವಕರ್ನಾಟಕ ಪ್ರಕಾಶನ ಸಂಸ್ಥೆ ತನ್ನ ಐವತ್ತನೇ ವರ್ಷಾಚರಣೆಯ ಸಂದರ್ಭದಲ್ಲಿ 'ಕರ್ನಾಟಕ ಕಲಾದರ್ಶನ' ಎಂಬ ಬೃಹತ್ ಗ್ರಂಥವನ್ನು ಪ್ರಕಟಿಸಲು ಸಜ್ಜಾಗಿತ್ತು. ೧೨೦೦ ಪುಟಗಳ, ೪೩೦೦ ವರ್ಣಚಿತ್ರಗಳನ್ನು ಒಳಗೊಂಡ ಈ ಪುಸ್ತಕ ಕರ್ನಾಟಕದ ಎಲ್ಲ ಕಲೆಗಳನ್ನು ಪರಿಚಯಿಸುವ ಗ್ರಂಥ. ಓದುಗರಿಗೆ ಆದಷ್ಟು ಕಡಿಮೆ ಬೆಲೆಯಲ್ಲಿ ಒದಗಿಸುವ ಅಪೇಕ್ಷೆಯಿಂದ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳನ್ನು ಪ್ರಕಾಶಕರು, ಸಂಪಾದಕರು ಖುದ್ದಾಗಿ ಭೆಟ್ಟಿಯಾಗಿ ಸಹಾಯಧನ ಕೋರಿ ಅರ್ಜಿ ಸಲ್ಲಿಸಿದರು. ಎರಡು ಮೂರು ತಿಂಗಳಾದರೂ ಯಾವುದೇ ಉತ್ತರವಿಲ್ಲ. ಕನ್ನಡ ಭವನದಲ್ಲಿರುವ ಇಲಾಖೆಯ ನಿರ್ದೇಶಕರನ್ನು ಭೆಟ್ಟಿಯಾಗಿದ್ದಾಯಿತು. ಮತ್ತೆ ಒಂದು ತಿಂಗಳಾದ ಮೇಲೆ ಪುಸ್ತಕದ ಲೋಕಾರ್ಪಣೆಗೆ ಮೂರು ವಾರಗಳ ಮುಂಚೆ ಪ್ರಕಟಣಾಪೂರ್ವ ಬೆಲೆಯಲ್ಲಿ ಪುಸ್ತಕ ಕೊಳ್ಳಲು ಎರಡು ಲಕ್ಷ ರೂಪಾಯಿಗಳನ್ನು ಕೊಡುವುದಾಗಿ ಪ್ರಕಾಶಕರಿಗೆ ಒಂದು ಪತ್ರ ಬಂತು, ಅಷ್ಟೆ. ಕನ್ನಡ ಸಂಸ್ಕೃತಿ ಇಲಾಖೆಯ ಈ ಪತ್ರ ೨೮-೦೬-೨೦೧೦ರಂದು ಸಹಿಯಾಗಿದ್ದು, ಅಂಚೆಗೆ ಹಾಕಿದ ದಿನ ೦೨-೦೮-೨೦೧೦. ಒಂದು ತಿಂಗಳ ಕಾಲ ಪತ್ರ ಇಲಾಖೆಯಲ್ಲೇ ಮುದುರಿಬಿದ್ದಿತ್ತು. ಹೀಗಿದೆ ಇಲಾಖೆಯ ಕಾರ್ಯವೈಖರಿ. ಮುಂಗಡ ಹಣ ಪಾವತಿಸಲಿಲ್ಲ. ಹೇಗಿದೆ ನೋಡಿ ಇಲಾಖೆಯ ವ್ಯವಹಾರ ! ಇನ್ನು ಗ್ರಂಥಾಲಯ ಇಲಾಖೆಯೋ ಶೇಕಡ ೩೩ ರಿಯಾಯಿತಿ ದರದಲ್ಲಿ ೫೦ ಪ್ರತಿ ಕೊಳ್ಳಲು ಮುಂದಾಯಿತು. ಇದು ಸರಕಾರಿ ಸಂಸ್ಥೆಯ ವೈಖರಿ. ಓದುಗರು ಮಾತ್ರ ಪ್ರಕಾಶಕರ ಕೈಬಿಟ್ಟಿಲ್ಲ. ಪ್ರಕಟಣೆಗೆ ಪೂರ್ವದಲ್ಲಿ ೮೦೦ಕ್ಕೂ ಹೆಚ್ಚು ಓದುಗರು ಹಣಪಾವತಿ ಮಾಡಿ ಪುಸ್ತಕ ಖರೀದಿಸಿದರು. ನಾವವರಿಗೆ ಋಣಿಗಳು. ಪುಸ್ತಕ ಬೇಕಾದ್ದು ಅವರಿಗೆ ತಾನೆ.

* * *

'ಅಕ್ಕ'ನ ಆತಿಥ್ಯ ನಿಶ್ಚಯವಾಗಿಯೂ ಅತಿಮಧುರವಾಗಿರುತ್ತದೆಂಬ ಆಸೆ ಹೊತ್ತು ನಮ್ಮ ರಾಜ್ಯದ ಹಲವು ಸಾಂಸ್ಕೃತಿಕ ರಾಯಭಾರಿಗಳು ಕರ್ನಾಟಕದ ಜನರ ಖರ್ಚಿನಲ್ಲಿ ಅಮೆರಿಕಾಕ್ಕೆ ತೆರಳಿದ್ದರು. ಅಮೆರಿಕಾದಲ್ಲಿರುವ 'ಅನಿವಾಸಿ ಕರ್ನಾಟಕಿ'ಗಳು ಇವರನ್ನು ಕಣ್ಣೆತ್ತಿ ನೋಡಲಿಲ್ಲ. ರಾಜ್ಯದ ಸಂಸ್ಕೃತಿ ಕಾರ್ಯದರ್ಶಿ ಅರಸ್ ನೇತೃತ್ವದಲ್ಲಿ ಇವರೆಲ್ಲಾ ಅಲ್ಲೇ ಕಣ್ಣೀರು ಸುರಿಸಿದರು. ಈಗ ಇಲ್ಲಿ ಮತ್ತೆ ಕಣ್ಣೀರ ಹೊಳೆ ಹರಿಸುತ್ತಿದ್ದಾರೆ. ಅರಸ್ ಮಹನೀಯರಿಗೆ ಈಗಾಗಲೆ ಒಂದು ಪರಿಹಾರ ವಿಧಾನ ಹೊಳೆದಿದೆ. ಅದೇನೆಂದರೆ ಇನ್ನು ಮುಂದೆ ಆತಿಥೇಯರಿಗೆ ಮುಂಗಡ ಹಣ ಕೊಡುವ ಬದಲು ಅತಿಥಿ ಸತ್ಕಾರವು ಯಥಾವತ್ತಾಗಿ ಪೂರ್ಣಗೊಂಡಾದ ಮೇಲೆ ಅದನ್ನು ನೀಡಬೇಕು, ಎಂಬುದು. ಈ ಹಿನ್ನೆಲೆಯಲ್ಲಿ ವಿಚಾರ ಮಾಡಬೇಕಾದ ಅಂಶಗಳನ್ನು, ಭಾವುಕತೆಯನ್ನು ದೂರವಿಟ್ಟು ಪರಿಶೀಲಿಸಬೇಕು : (ಅ) ಅತ್ತು ಕರೆದು ಔತಣ ಮಾಡಿಸಿಕೊಳ್ಳಬೇಕಾದ ಜರೂರು ನಮ್ಮ ಸಾಹಿತಿ-ಕಲಾವಿದರಿಗಿದೆಯೆ ? (ಆ) ಅವರು ಕರೆಯುತ್ತಾರೆಂದು ಇಷ್ಟೊಂದು ಮಂದಿ ಪ್ರತಿವರ್ಷ ಎರಡು ಅಮೆರಿಕಾ ಕನ್ನಡ ಸಮ್ಮೇಳನಗಳಿಗೆ ದೌಡಾಯಿಸಬೇಕೆ ? (ಇ) ಅಮೆರಿಕಾದಲ್ಲಿರುವ ಕನ್ನಡಿಗರು ನಿರುದ್ಯೋಗಿಗಳಲ್ಲ. ಬೇಕಾದ ಕಲಾವಿದರನ್ನು ಅವರೇ ಸ್ವಂತ ಹಣ ಕೊಟ್ಟು ಕರೆಯಿಸಿಕೊಳ್ಳುವ ಯೋಗ್ಯತೆ ಅವರಿಗಿಲ್ಲವೆ ? (ಈ) ಸರ್ಕಾರದಿಂದ ಹಣ ಪಡೆದು ಇಷ್ಟು ಸಾಹಿತಿ-ಕಲಾವಿದರನ್ನು ಬರಮಾಡಿಕೊಳ್ಳಲು ಒಪ್ಪಿಗೆ ನೀಡಿದ್ದಾದ ನಂತರ ಅವರನ್ನೆಲ್ಲಾ ಯೋಗ್ಯವಾಗಿ ನಡೆಸಿಕೊಳ್ಳಲಾಗದಷ್ಟು ನಮ್ಮ 'ಅಮೆರಿಕನ್ನಡರು' ಸೌಜನ್ಯಹೀನ ಕುಸಂಸ್ಕೃತರಾಗಿದ್ದು ಹೇಗೆ ಮತ್ತು ಏಕೆ ?

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೨ ಸಂಚಿಕೆ - ೩ ಅಕ್ಟೋಬರ್ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com


# ಪರಮಾಣು ಶಕ್ತಿಗಾಗಿ ಜೀವಬಲಿ

**ಸಂಪಾದಕೀಯ**

**ಭೋ**ಪಾಲ್ ದುರಂತದಲ್ಲಿ ಜೀವಹಾನಿ ನಡೆದುಹೋದ ಸಂಗತಿ. ಆದರೆ ನಡೆಯಲಿರುವ ಮುಂದಿನ ಸಂಗತಿಗಳು ಭೋಪಾಲನ್ನು ಮೀರುತ್ತವೆ. ನಮ್ಮ ದೇಶದ ಜನರ ಜೀವದ ಬೆಲೆಯನ್ನು ಕಟ್ಟುವವರು ನಾವಲ್ಲ; ಬದಲಾಗಿ, ಅದನ್ನು ಅಮೆರಿಕಾದ ಅಧಿಕಾರಿಗಳು ಮತ್ತು ಖಾಸಗಿ ಉದ್ಯಮಿಗಳು ಅದನ್ನು ಮಾಡುತ್ತಿದ್ದಾರೆ. ಅದಕ್ಕೆ ಬೆಂಬಲವಾಗಿ ನಿಂತವರು ನಮ್ಮ ನಾಚಿಕೆಗೆಟ್ಟ ಪ್ರಧಾನಿ ಮನಮೋಹನ ಸಿಂಗ್. ದೇಶಕ್ಕೆ ಅಪಾರ ಪರಿಮಾಣದ ಪರಮಾಣು ಶಕ್ತಿ ಒದಗಿಸುವುದಾಗಿ ಹೇಳುವ ಕೇಂದ್ರ ಸರ್ಕಾರವು ಅದಕ್ಕಾಗಿ ಇಂಧನ, ಯಂತ್ರ, ತಂತ್ರಜ್ಞಾನ ಮತ್ತು ಬಂಡವಾಳ ಹೂಡಿಕೆಗಾಗಿ ಅಮೆರಿಕಾದ ಮೇಲೆ ಭರವಸೆಯನ್ನಿರಿಸಿದೆ. ಈಗ ತಿಂಗಳ ಹಿಂದೆ ಪಾರ್ಲಿಮೆಂಟ್ ಒಂದು ಶಾಸನಕ್ಕೆ ಅನುಮೋದನೆ ನೀಡಿತು. ಪರಮಾಣು ಶಕ್ತಿ ಸ್ಥಾವರಗಳನ್ನು ಸ್ಥಾಪಿಸಿದ ತರುವಾಯದಲ್ಲಿ ಅಪಘಾತಗಳುಂಟಾಗಿ ಸಾವು-ನೋವು ಉಂಟಾದರೆ ಅದಕ್ಕೆ ಸ್ಥಾವರವನ್ನು ಸ್ಥಾಪಿಸಿದ ಖಾಸಗಿ ಮಾಲಿಕ ಸರ್ವಥಾ ಬಾಧ್ಯನಲ್ಲವೆಂಬುದು ಅದರ ಸಾರ. ಖಾಸಗಿ ಕಂಪನಿಯು ಸ್ವದೇಶದ್ದಾಗಿರಲಿ, ವಿದೇಶದ್ದಾಗಿರಲಿ, ಹೇರಳವಾಗಿ ಲಾಭ ಮಾಡಿಕೊಳ್ಳುತ್ತಿರಲಿ, ಕಳಪೆ ಯಂತ್ರಗಳನ್ನು ಜೋಡಿಸಿರಲಿ, ಸ್ಥಾವರ ರಚನೆಯಲ್ಲಿ ಬೇರೇನಾದರೂ ನ್ಯೂನತೆಗೆ ಕಾರಣವಾಗಿರಲಿ, ಸಾವು-ನೋವು ಸಂಭವಿಸಿದಾಗ ಪರಿಹಾರ ನೀಡುವುದು ಸರ್ಕಾರದ ಜವಾಬ್ದಾರಿಯೇ ವಿನಾ ಖಾಸಗಿ ಕಂಪನಿಯದಲ್ಲ. ಆ ಪರಿಹಾರ ಸಹ ಅತ್ಯಲ್ಪ. ಅಮೆರಿಕಾದಲ್ಲಿ ಇಂಥದೇ ಆಕಸ್ಮಿಕ ಘಟಿಸಿದರೆ ನೀಡಲಾಗುವ ಪರಿಹಾರದ ಇಪ್ಪತ್ತಮೂರನೆಯ ಒಂದು ಭಾಗದಷ್ಟು ಪರಿಹಾರವನ್ನು ನಮ್ಮ ದೇಶದಲ್ಲಿ ನೀಡಲಾಗುತ್ತದೆ. ಎಂತಹ ಅದ್ಭುತ ಔದಾರ್ಯ! ಅಂದರೆ, ಒಂದು ಅಮೆರಿಕಾ ಪ್ರಜೆಯ ಜೀವವು ಭಾರತದ ಇಪ್ಪತ್ತಮೂರು ಜೀವಗಳಿಗೆ ಸಮ ಎಂದರ್ಥ. ಇದನ್ನು ಘೋಷಿಸಿರುವ ಪ್ರಧಾನಿಗೆ ಭಾರತದ ಜನ ಧಿಕ್ಕಾರ ಹೇಳುತ್ತಾರೆ. ದೇಶದ ಘನತೆಯನ್ನು ಗಾಳಿಗೆ ತೂರದೆ ಬೇರೆ ದೇಶಗಳ ಜೊತೆ ವ್ಯವಹರಿಸಲು ಅಸಮರ್ಥರಾದ ಪ್ರಧಾನಿಯನ್ನು ಹೊಂದಿರುವುದು ನಮ್ಮ ದುರಂತ. ಈಗ ತಾನೆ ಅಂಗೀಕರಿಸಲಾದ ಶಾಸನಕ್ಕೆ ಭಾರತೀಯ ಜನತಾ ಪಕ್ಷ ಬೆಂಬಲವನ್ನು ನೀಡಿತು. ''ಅದರಲ್ಲಿರುವ ನಿಬಂಧಗಳನ್ನೆಲ್ಲಾ ನಾವು ಒಪ್ಪುವುದಿಲ್ಲ, ಆದರೆ ನಾವು ಸೂಚಿಸಿದ ಕೆಲವು ತಿದ್ದುಪಡಿಗಳನ್ನು ಕಾಂಗ್ರೆಸ್ ಸರ್ಕಾರ ಒಪ್ಪಿತು, ಆದ್ದರಿಂದ ಮಸೂದೆಗೆ ನಾವು ಬೆಂಬಲ ನೀಡಿದ್ದೇವೆ'' ಎಂದು ಭಾಜಪ ನಾಯಕ ಅರುಣ್ ಜೇಟ್ಲಿ ಹೇಳಿದ್ದಾರೆ. ದೇಶದ ಹಿತಕ್ಕೆ ಮಾರಕವಾದ ಮಸೂದೆಗೆ ಜೇಟ್ಲಿ ಸೂಚಿಸಿದ ಒಂದೆರಡು ಬದಲಾವಣೆಗಳನ್ನು ಮನಮೋಹನ ಸಿಂಗ್ ಸ್ವೀಕರಿಸಿದರೆಂದು ಇಡೀ ಮಸೂದೆಗೆ ಬೆಂಬಲ ನೀಡಿದ ಭಾಜಪಕ್ಕೆ ಎರಡು ನಾಲಿಗೆಗಳು : ಒಂದು ಸ್ವಂತದ್ದು, ಇನ್ನೊಂದು ಅಮೆರಿಕಾದ್ದು. ಭಾರತದ ಬಗೆಗಿನ ಅದರ ನಿಲುವು, ನಮ್ಮ ದೇಶದ ಜನರ ಬಗೆಗಿನ ಕಾಳಜಿಯಿಲ್ಲದ ಅದರ ಮನೋಭಾವ, ಇವಕ್ಕೆ ಬೇರೆ ಪುರಾವೆ ಬೇಕಿಲ್ಲ. ಕೇಂದ್ರ ತನಿಖಾ ವಿಭಾಗ (ಸಿ.ಬಿ.ಐ.) ಗುಜರಾತಿನ ನರೇಂದ್ರ ಮೋದಿಯವರಿಗೆ ಗಾಳ ಹಾಕುವುದಿಲ್ಲವೆಂಬ ಭರವಸೆ ನೀಡಿದರೆ ಮಸೂದೆಗೆ ಬೆಂಬಲ ನೀಡುವುದಾಗಿ ಭಾಜಪ ತಿಳಿಸಿತೆಂದು ಬಲ್ಲ ಮೂಲಗಳು ವರದಿ ಮಾಡಿವೆ. ಮೋದಿಯವರ ಹಿತವೇ ದೇಶದ ಜನರ ಹಿತವೆಂಬ ಧೋರಣೆ ಭಾಜಪಕ್ಕೆ ಯೋಗ್ಯವಾದುದಲ್ಲ. ಕಾಂಗ್ರೆಸ್ ಮತ್ತು ಭಾಜಪ ಹೆಸರಿಗೆ ಬೇರೆಬೇರೆ ಪಕ್ಷಗಳು, ದೇಶದ ಜನರ ಪ್ರಶ್ನೆ ಬಂದರೆ ಎರಡು ಪಕ್ಷಗಳಿಗೂ ಅಸಡ್ಡೆಯ ಪ್ರತಿಕ್ರಿಯೆಯೇ ಅವನ್ನು ಒಂದಾಗಿಸುತ್ತದೆ. ಭಾಜಪದ ಇನ್ನೊಬ್ಬ ನಾಯಕ ಯಶವಂತ್ ಸಿನ್ಹ ಅಭಿಪ್ರಾಯದಲ್ಲಿ ಈ ಪರಮಾಣು ಶಕ್ತಿ ಸಂಬಂಧಿ ಹೊಣೆಗಾರಿಕೆಯ ಶಾಸನವು ದೇಶದ ವಿದೇಶಾಂಗ ಮತ್ತು ಪರಮಾಣು ನೀತಿಗಳನ್ನು ಅಮೆರಿಕಾಕ್ಕೆ ಅಧೀನಗೊಳಿಸಿದಂತಾಗಿದೆ. ಹಾಗಿದ್ದರೆ ಅದನ್ನೇಕೆ ಅವರು ತಮ್ಮ ಪಕ್ಷಕ್ಕೆ ಮನವರಿಕೆ ಮಾಡಿಕೊಡಲಿಲ್ಲ? ಪಾರ್ಲಿಮೆಂಟ್ ಒಳಗೆ ಒಂದು ನಿಲುವು, ಹೊರಗೆ ಬೇರೊಂದು, ಎಂದಾದರೆ ಸಿನ್ಹ ಪಕ್ಷವು ರಾಷ್ಟ್ರೀಯ ಪಕ್ಷವೆನಿಸಿಕೊಳ್ಳಲು ಮನ್ನಣೆ ಕಳೆದುಕೊಳ್ಳುತ್ತದೆ.

ಜೀವಹಾನಿಯ ಹಿಂದಿನ ಹುನ್ನಾರವು ವ್ಯಾಪಾರ ಮತ್ತು ಲಾಭಕೇಂದ್ರಿತವಾಗಿದೆ. ಮನಮೋಹನ ಸಿಂಗ್ ಸರ್ಕಾರ ಹೇಳಿದ್ದುದನ್ನು ಮರೆಯಬಾರದು. ಅದು ಬುಷ್‌ಮನ್ ಬುಷ್ ಅಧ್ಯಕ್ಷನಾಗಿದ್ದ ಕಾಲದ್ದು: ''ಭಾರತದ ಪರಮಾಣು ಶಕ್ತಿ ಉದ್ಯಮವು ಅಮೆರಿಕಾದ ಕಂಪನಿಗಳಿಗೆ ನೂರೈವತ್ತು ಬಿಲಿಯನ್ ಡಾಲರುಗಳ ಹೂಡಿಕೆಗೆ ಅವಕಾಶವನ್ನೀಯುತ್ತದೆ.'' ಅಮೆರಿಕಾದ ಕಂಪನಿಗಳ ಹೊಣೆಗಾರಿಕೆಯನ್ನು ಸಡಿಲಿಸಿ ಭಾರತದಲ್ಲಿ ಬಂಡವಾಳ ಹೂಡಲು ಭಾರತ ಸರ್ಕಾರ ಅನುವು ಮಾಡಿಕೊಡುತ್ತದೆಂಬ ಭರವಸೆ ತನಗಿದೆಯೆಂದು ರಾಬರ್ಟ್ ಬ್ಲೇಕ್ ಎಂಬ ಅಧಿಕಾರಿ ಹೇಳಿದ್ದ. ಈಗ ಅದು ಕಾರ್ಯಗತವಾಗಿದೆ. ಮಸೂದೆಯಲ್ಲಿ ದಿನದಿಂದ ದಿನಕ್ಕೆ ತೂರಿಸಲಾದ ಬದಲಾವಣೆಗಳನ್ನೆಲ್ಲಾ ಆಗಿಂದಾಗ್ಗೆ ಅಮೆರಿಕಾದ ಪ್ರತಿನಿಧಿಗಳೊಂದಿಗೆ ಚರ್ಚಿಸಿಯೇ ಮಾಡಲಾಗುತ್ತಿತ್ತೆಂದು ಈಚಿನ ವರದಿಗಳು ಬಹಿರಂಗಗೊಳಿಸಿವೆ. ಭಾರತವನ್ನು ಹೀಗೆ 'ಬನಾನಾ ರಿಪಬ್ಲಿಕ್' ಮಾಡಿದ ಖಂಡನೀಯ ಅಪಕೀರ್ತಿ ಮನಮಮೋಹನ ಸಿಂಗ್ ಸರ್ಕಾರದ್ದು. ಒಬಾಮ ಎಂಬ ದಿವ್ಯ ಪುರುಷ ಭಾರತದ ನೆಲದ ಮೇಲೆ ಕಾಲಿರಿಸುವ ಮುನ್ನ ಎಲ್ಲವೂ ಅಮೆರಿಕಾ ಪರವಾಗಿ ತೀರ್ಮಾನವಾಗಬೇಕೆಂಬುದಕ್ಕೆ ಮನಮೋಹನ್ ಬದ್ಧರಾಗಿದ್ದರು ಮತ್ತು ಆ ಬದ್ಧತೆಯನ್ನು ಈಗ ಕಾರ್ಯತಃ ಪ್ರಕಟಿಸಿದ್ದಾರೆ. ಅಮೆರಿಕಾದ ಒಬ್ಬ ವ್ಯಾಖ್ಯಾನಕಾರ ಬೇಸಿಲ್ ಜೇಮ್ಸ್ ಹೇಳಿದ್ದಾನಂತೆ, ಈ ಶಾಸನದಿಂದಾಗಿ ಅಪರಾಧಿಯು ಸಂಪೂರ್ಣವಾಗಿ ನುಣುಚಿಕೊಂಡು ಪಾರಾಗಲು ಸಾಧ್ಯವಾಗಿದೆ, ಎಂದು. ಏನಂತಹ ನಿಬಂಧ ? ಶಾಸನದಲ್ಲಿ ೧೭(ಬಿ) ಎಂಬ ನಿಬಂಧವಿದೆ. ಅದರಂತೆ ಪರಮಾಣು ಶಕ್ತಿ ಸ್ಥಾವರಗಳಲ್ಲೇನಾದರೂ ಅಪಘಾತವಾದರೆ ಸ್ಥಾವರ ನಿರ್ಮಿಸಿದವರ ಮತ್ತು ಖಾಸಗಿಯಾಗಿ ಲಾಭ ದೋಚುತ್ತಿರುವ ಅಮೆರಿಕಾದ ಕಂಪನಿಯ ಬಾಧ್ಯತೆ ಕನಿಷ್ಠವಾದ್ದು. ನಮ್ಮ ದೇಶದಲ್ಲಿ ಅಪಘಾತ ಉಂಟುಮಾಡಲೆಂದೇ ದೋಷಪೂರಿತ ಯಂತ್ರಗಳ ಸರಬರಾಜು ಮಾಡಲಾಗಿದ್ದಿತೆಂದು ಸಂಬಂಧಿತ (ಅಮೆರಿಕಾದ) ಖಾಸಗಿ ಕಂಪನಿಗೆ ನಮ್ಮ ದೇಶವು ಪುರಾವೆ ಸಹಿತ ಸಾಧಿಸಿ ತೋರಿಸಬೇಕಂತೆ. ಹಾಗೆ ತೋರಿಸಿದರೆ ಮಾತ್ರ ಸಾವು-ನೋವುಗಳಿಗೆ ಒಂದಷ್ಟು ಜುಜುಬಿ ಪರಿಹಾರವನ್ನು ಕಂಪನಿ ನೀಡಬೇಕು. ಇಲ್ಲದಿದ್ದರೆ ಜವಾಬ್ದಾರಿಯೆಲ್ಲಾ ಭಾರತ ಸರ್ಕಾರದ್ದು. ಲಾಭ ಗಳಿಸಿದ ಅಮೆರಿಕಾದ ಕಂಪನಿಗೆ ಇದಕ್ಕಿಂತ ಇನ್ನೇನು ಬೇಕು ! ಅವನು ಜೇಬು ತುಂಬಿಕೊಂಡು ಗರ್ವದಿಂದ ಹೊರನಡೆಯಬಹುದು, ನಮ್ಮ ದೇಶದ ಪ್ರಜೆಗಳ ತೂತು ಜೇಬುಗಳು ಸಂಪೂರ್ಣ ಹರಿದುಹೋಗಬೇಕು ! ಯಾವುದೇ ಸಂದರ್ಭದಲ್ಲೂ ''ಬೇಕೆಂದೇ'' ನ್ಯೂನತೆಯುಳ್ಳ ಯಂತ್ರ ಸರಬರಾಜು ಮಾಡಲಾಗಿತ್ತೆಂದು ಎಂದೆಂದೂ ಸಾಧಿಸಿ ತೋರಿಸಲಾಗುವುದಿಲ್ಲವಾದ್ದರಿಂದ ಆ ನಿಬಂಧವು ಅಮೆರಿಕಾದ ಕಂಪನಿಗಳಿಗೆ ಚಿರ ತಾರಕ ಮಂತ್ರವಾಗುತ್ತದೆ, ಶ್ರೀರಕ್ಷೆಯಾಗುತ್ತದೆ. ಮೊದಲಿಗೆ

೧೭ (ಎ) ಮತ್ತು (ಬಿ) ನಡುವೆ ಒಂದು ''ಮತ್ತು'' ಎಂಬ ಪದವಿತ್ತು, ಎಡಪಕ್ಷಗಳ ಪರವಾಗಿ ಗುರುದಾಸ್ ದಾಸ್‌ಗುಪ್ತ ಪಟ್ಟುಹಿಡಿದು ಅದನ್ನು ಕಿತ್ತುಹಾಕಿಸಿದರು. ಮಾರನೆಯ ದಿನವೇ ಎಲ್ಲಿಂದಲೋ ಧೊಪ್ಪನೆ ಈಗಿರುವ ''ಬೇಕೆಂದೇ'' (ಹಾನಿಯುಂಟುಮಾಡಲು) ಎಂಬ ಷರತ್ತು ತೂರಿಬಂದಿತು. ಅಂದರೆ, ಅಮೆರಿಕಾದ ರಾಯಭಾರ ಕಚೇರಿ ಕ್ಷಣಕ್ಷಣವೂ ಕಣ್ಣಲ್ಲಿ ಕಣ್ಣಿಟ್ಟು ತನ್ನ ದೇಶದ ಕಂಪನಿಗಳಿಗೆ ಗಟ್ಟಿಯಾದ ಗುರಾಣಿ ಸಿದ್ಧಮಾಡಿಕೊಡುತ್ತಿತ್ತು; ನಮ್ಮ ಸಿಂಗ್ ಸಾಹೇಬರು ತಲೆದೂಗುತ್ತಾ ಕೂತಿದ್ದರು. ಅಮೆರಿಕಾದ ಕಂಪನಿಗಳ ಜೊತೆ ಭಾರತದ ದೊಡ್ಡ ಕಂಪನಿಗಳೂ ಶಾಮೀಲಾಗಿ ದೇಶದ್ರೋಹ ಬಗೆದವೆಂದರೆ ಉದ್ದಿಮೆದಾರರ ಮಹಾಸಂಘ ಒಪ್ಪಲಾರದು, ಆದರೆ ಅದು ಸತ್ಯಕ್ಕೆ ದೂರವಾದ ಮಾತೇನಲ್ಲ.

ಇಷ್ಟೆಲ್ಲಾ ಸ್ವಹಿತವನ್ನು ಸಂಪೂರ್ಣವಾಗಿ ಹಾಳುಮಾಡಿಕೊಂಡ ನಮ್ಮ ದೇಶದ ಮೇಲೆ ಅಮೆರಿಕಾ ನಿರ್ದಾಕ್ಷಿಣ್ಯವಾಗಿ ಒಂದಾದಮೇಲೊಂದು ನಿರ್ಬಂಧ ಹೇರುತ್ತಲೇ ಇದೆ, ಅದನ್ನೆಲ್ಲಾ ಸಿಂಗ್ ಅವಲೋಕಿಸುತ್ತಿದ್ದು ಸಾಂಖ್ಯಪುರುಷನಂತೆ ನಿರ್ಲಿಪ್ತವಾಗಿ ಕೂತಿದ್ದಾರೆ. ಈ ಮಧ್ಯೆ, ಭಾರತ ಮಾಡಿದ ''ತ್ಯಾಗ'' ಸಾಲದೆಂದು ಸೆಪ್ಟೆಂಬರ್ ೧೫ರಂದು ಅಮೆರಿಕಾದ ಒಬ್ಬ ಉನ್ನತಾಧಿಕಾರಿ ರಾಬರ್ಟ್ ಹಾರ್ಮಾಟ್ಸ್ ಹಲುಬಿದ್ದಾನೆ. ಆತನ ಪ್ರಕಾರ ನಮ್ಮ ಪಾರ್ಲಿಮೆಂಟಿನ ಶಾಸನ ''ಇನ್ನೂ'' ಅಂತರರಾಷ್ಟ್ರೀಯ ಕಾನೂನಿಗೆ ಅನುಗುಣವಾಗಿಲ್ಲವಂತೆ, ಆದ್ದರಿಂದ ಅಮೆರಿಕಾದ ಕಂಪನಿಗಳು ಪರಮಾಣು ಸ್ಥಾವರ ಸ್ಥಾಪಿಸಲು ಬಂಡವಾಳ ಹೂಡಲು ಹಿಂಜರಿಯುತ್ತವಂತೆ. ''ಪೀಡೆ ಕಳೆಯಿತು, ಹಾಳಾಗಿಹೋಗಿ'' ಎನ್ನಬಹುದಿತ್ತು; ಆದರೆ ಕೇಂದ್ರ ಸರ್ಕಾರ ಹಾಗೆನ್ನುವುದಿಲ್ಲ. ''ನೀವೇನು ಬದಲಾವಣೆಗಳನ್ನು ತರುತ್ತೀರೋ ನಾವು ಕಾದುನೋಡುತ್ತೇವೆ'' ಎಂದು ಇನ್ನೊಬ್ಬ ಅಧಿಕಾರಿ ಪಿ. ಜೆ. ಕ್ರೌಲೆ ಹೇಳಿದ್ದಾನೆ. ಏನಿದರರ್ಥ ? ''ನಿಮ್ಮ ಕುತ್ತಿಗೆಗೆ ಹಗ್ಗದ ಕುಣಿಕೆಯನ್ನು ಸಮರ್ಪಕವಾಗಿ ಹಾಕಿಕೊಳ್ಳಿ, ಆಮೇಲೆ ನಾವು ಬಂದು ಅದನ್ನು ಬಲವಾಗಿ ಎಳೆದು ನಿಮ್ಮನ್ನು ಉಸಿರುಗಟ್ಟಿಸಿ ಸಾಯಿಸುತ್ತೇವೆ; ಆಗ ನಮ್ಮ ದೇಶಗಳ ನಡುವಣ ಮೈತ್ರಿಗೆ ನಿಜವಾದ ಅರ್ಥ ಬರುತ್ತದೆ'' ಎಂದು. ಇರಾಕ್-ಆಫ್ಘಾನಿಸ್ತಾನಗಳಲ್ಲಿ ಅಮೆರಿಕಾ ಸರ್ಕಾರದ ಹಾಗೂ ಖಾಸಗಿಯಾದ ಸೈನ್ಯ ಬಂದು ಲಕ್ಷಗಟ್ಟಲೆ ಜನರನ್ನು ಕೊಂದುಹಾಕಿತು; ಭಾರತಕ್ಕೆ ಸೈನ್ಯ ಬೇಡ, ಪರಮಾಣು ಶಕ್ತಿಯ ಸ್ಥಾವರ ಸಾಕು. ಜನಗಳನ್ನು ಕೊಲ್ಲುವ ಕೆಲಸ ಸುಸೂತ್ರವಾಗಿ ನಡೆದುಹೋಗುತ್ತದೆ. ಅದಕ್ಕೆ ಮನಮೋಹನ ಸಿಂಗ್ ಸರ್ಕಾರದ ಸಮ್ಮತಿ ಇದೆ. ಇನ್ನೆಷ್ಟು ಜೀವಬಲಿಯಾದರೆ ಅಮೆರಿಕಾದ ದಾಹ ಇಂಗೀತು !

## ಈ ಭ್ರಷ್ಟ ಸರಕಾರ ವಿರೋಧಿಸಿ, ಪ್ರಜಾಪ್ರಭುತ್ವ ಉಳಿಸಿ

ತತ್ವಬದ್ಧ, ಕ್ರಿಯಾಶೀಲ ಕಾರ್ಯಕರ್ತರನ್ನು ಹೊಂದಿರುವ ಶಿಸ್ತುಬದ್ಧ ಪಕ್ಷ ಎಂದು ಕೊಚ್ಚಿಕೊಳ್ಳುವ ಭಾರತೀಯ ಜನತಾಪಕ್ಷದ ಬಣ್ಣ ಈಗ ಬಯಲಾಗಿದೆ. ಮೇಲಿನಿಂದ ಕೆಳಗಿನವರೆಗೆ ಸಂದರ್ಭ ಸಾಧಕತನ ಅದಕ್ಕೆ ಮೈಗೂಡಿದೆ. ಇದಕ್ಕೆ ಇತ್ತೀಚಿನ ಉದಾಹರಣೆ ಎಂದರೆ ಛತ್ತೀಸ್‌ಘಡದಲ್ಲಿ ಅಧಿಕಾರ ಸೂತ್ರ ಹಿಡಿದಿರುವುದು. ಅಧಿಕಾರ ಎಂದರೆ ಸಾಕು ಏನು ಬೇಕಾದರೂ ಮಾಡಿ ಕುರ್ಚಿ ಹಿಡಿಯುವುದರಲ್ಲಿ ಭಾಜಪದವರು ಕಾಂಗ್ರೆಸ್ಸಿಗರನ್ನು ಮೀರಿಸಿ ನಿಷ್ಣಾತರಾಗಿದ್ದಾರೆ. ಕರ್ನಾಟಕದಲ್ಲಿ ನಾವು ಅದನ್ನು ಪ್ರತ್ಯಕ್ಷವಾಗಿ ಕಂಡಿದ್ದೇವೆ, ಅನುಭವಿಸಿದ್ದೇವೆ. ದೇವೇಗೌಡರ ಕುಟುಂಬ ರಾಜಕಾರಣದ ಕುಮ್ಮಕ್ಕಿನಿಂದ ಅಧಿಕಾರದ ರುಚಿಯನ್ನು ಮೊದಲ ಬಾರಿಗೆ ಸವಿದ ಭಾಜಪ ನಡೆದುಕೊಂಡ ರೀತಿ ಯಾವ ಮಟ್ಟದ್ದಾಗಿತ್ತು ಎನ್ನುವುದು ತಿಳಿದಿರುವ ವಿಚಾರ. ಭಾಜಪ ನಾಯಕ ಯಡಿಯೂರಪ್ಪ ಕಣ್ಣೀರು ಹರಿಸಿ ಅಧಿಕಾರದಲ್ಲಿರಲು ಹರಸಾಹಸಪಟ್ಟರು. ಆನಂತರ ನಡೆದ ಚುನಾವಣೆಯಲ್ಲಿ 'ಜೆಡಿಎಸ್‌ನ ವಿಶ್ವಾಸಘಾತುಕತನ'ದಿಂದ ಅಧಿಕಾರ ವಂಚಿತರಾದೆವು ಎಂದು ಬೊಬ್ಬೆ ಹೊಡೆದೇ ಮೆಟ್ಟಿಲೇರಿದರು. ಕುರ್ಚಿ ಭದ್ರಪಡಿಸಿಕೊಳ್ಳಲು ಮಾಡಿದ ಮೊದಲ ಕೆಲಸ ಶಾಸಕರ ಖರೀದಿ. ಸ್ವತಂತ್ರರನ್ನು ಕಬಳಿಸಿದ ಮೇಲೆ ಕಾಂಗ್ರೆಸ್, ಜೆಡಿಎಸ್ ಶಾಸಕರಿಗೆ ಬಲೆ ಬೀಸಿದರು. ಇದೆಲ್ಲ ಹಳೇ ಕತೆ. ಆಗ ಪ್ರಾರಂಭವಾದ ಭ್ರಷ್ಟಾಚಾರ ಎರಡು ವರ್ಷಗಳಿಂದ ಅನೂಚಾನವಾಗಿ ಮುಂದುವರಿದಿದೆ.

ಕೋಟಿಗಟ್ಟಲೆ ರೂಪಾಯಿಗಳನ್ನು ಖರ್ಚುಮಾಡಿ ನಡೆಸಿದ 'ಸಾಧನಾ ಸಮಾವೇಶ'ದಲ್ಲಿ ಅಭಿವೃದ್ಧಿ ಕಾರ್ಯಗಳಿಗೆ 'ಅಡ್ಡಿ'ಪಡಿಸುತ್ತಿರುವ ವಿರೋಧ ಪಕ್ಷಗಳ ಮೇಲೆ ಹರಿಹಾಯ್ದದ್ದು ಬಿಟ್ಟರೆ, ಗೋಳುಕರೆದದ್ದೇ ಸಾಧನೆ. ರೈತರ ಹೆಸರಿನಲ್ಲಿ ಪ್ರಮಾಣ ವಚನ ಸ್ವೀಕರಿಸಿದ ಭಾಜಪ ಮೊದಲು ನಡೆಸಿದ್ದೇ ಅವರ ಮೇಲೆ ಗೋಲೀಬಾರು. ಆಮೇಲೆ ಅನುಸರಿಸಿರುವುದೆಲ್ಲ ರೈತ ವಿರೋಧಿ ನೀತಿಯೇ. ಭೂಹಗರಣಗಳಿಗೇನು ಕಡಿಮೆ ಇಲ್ಲ, ಬಡಜನರ ಉದ್ಧಾರಕ್ಕಾಗಿ ಹಣ ವಿನಿಯೋಗಿಸುವುದಕ್ಕಿಂತ ಮಠಗಳ ಪೋಷಣೆಗೆ ಪ್ರಾಶಸ್ತ್ಯ. ಹಿಂದಿನ ಯಾವ ಸರಕಾರಗಳೂ ಮಠಗಳಿಗೆ ಕೋಟಿಗಟ್ಟಳೆ ಹಣ ನೀಡಿರಲಿಲ್ಲ, ವೈಕುಂಠ ಏಕಾದಶಿ ದಿನ ದೇವಾಲಯಗಳಲ್ಲಿ ಲಡ್ಡು ಹಂಚಿದ್ದು, ಶಿವರಾತ್ರಿಗೆ ಗಂಗಾಜಲ ತರಿಸಿ ಹಂಚಿದ್ದೇ ಒಂದು ಸಾಧನೆ. ಕರ್ನಾಟಕದ ಜನ ಇದರಿಂದ ಪಾವನವಾದದ್ದು. ಕರ್ನಾಟಕ ಸಾರಿಗೆ ಇಲಾಖೆ ಹಣ ಲಪಟಾಯಿಸುವುದಕ್ಕೆ ಅಧಿಕಾರಿ, ಸ್ಥಿರ ಆಸ್ತಿ ನೋಂದಣಿ ಇಲಾಖೆಗಳಷ್ಟೇ ಸೊಂಪು. ಭಾಜಪ ಅಧಿಕಾರಕ್ಕೆ ಬಂದಮೇಲೆ ಕೋಟಿಗಟ್ಟಲೆ ಹಣ ವೆಚ್ಚಮಾಡಿ ಹವಾನಿಯಂತ್ರಿತ ಬಸ್ಸುಗಳನ್ನು ಖರೀದಿಸಿ, ಯಥೇಚ್ಛವಾಗಿ ಕಮಿಷನ್ ಪಡೆದಿದೆ. ಕೇಳುವವರಾರು ?

ನೇಮಕಾತಿಯಲ್ಲಿ ಅಕ್ರಮ ನಡೆಸಿದ ಸಚಿವ ರಾಮಚಂದ್ರ ಗೌಡ ರಾಜ್ಯ ಹೈಕೋರ್ಟಿನಿಂದ ಛೀಮಾರಿ ಹಾಕಿಸಿಕೊಂಡು ಕೊನೆಗೂ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದ್ದು ಈಚಿನ ಹಗರಣ. ಇನ್ನೂ ಬೆಳಕಿಗೆ ಬಾರದ ಇಂಥ ಹಗರಣಗಳೆಷ್ಟೋ! ಯಡಿಯೂರಪ್ಪ ಸಂಪುಟದಲ್ಲಿ ಕಳಂಕಿತರಲ್ಲದವರಾರು ಎಂದು ಗುರ್ತಿಸುವುದೇ ಕಷ್ಟ. ಏಕೆಂದರೆ, ಯಡಿಯೂರಪ್ಪನವರದೇ ಮೇಲ್ಪಂಕ್ತಿ. ಕುರ್ಚಿ ವ್ಯಾಮೋಹದಿಂದ ಬಳ್ಳಾರಿ ಗಣಿಧಣಿಗಳೊಡನೆ ಕೈಜೋಡಿಸಿ ಸಂಪುಟದಲ್ಲಿದ್ದ ಏಕೈಕ ಮಹಿಳೆಯನ್ನು ಬಿಟ್ಟು, ಅವರು ಹೇಳಿದ ಸಚಿವರನ್ನು ಸೇರಿಸಿಕೊಂಡು, ಹೇಳಿದಹಾಗೆ ಕೇಳಲು ಒಪ್ಪಿದ ಮುಖ್ಯಮಂತ್ರಿ ಈಗ ಅವರ ಅಡಿಯಾಳಾಗಿದ್ದಾರೆ. ಇಷ್ಟು ಕೆಳಮಟ್ಟಕ್ಕಿಳಿದ ಇನ್ನೊಬ್ಬ ರಾಜಕಾರಣಿಯನ್ನು ನಾವು ಕಂಡಿಲ್ಲ. ಸಚಿವರುಗಳಾದ ರೇಣುಕಾಚಾರ್ಯ, ಹಾಲಪ್ಪ ಪ್ರಕರಣಗಳು ರಾಜ್ಯದ ಜನರಿಗೆ ಮನೋರಂಜನೆ. ಕರ್ನಾಟಕದಲ್ಲಿ ಐವತ್ತು ವರ್ಷಗಳಲ್ಲಿ

(೮ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ಒಂದು ವಿಷಯ ಸ್ಪಷ್ಟವಿದೆ: ಅಲ್ಲಿಯ ಸಾಮಾನ್ಯ ಕನ್ನಡ ಕುಟುಂಬಗಳವರಿಗೆ ಈ ಕಲಾವಿದರಿಂದ ರಂಜನೆಯೂ ಬೇಡ, ಸಾಂಸ್ಕೃತಿಕ ಚಿಂತನಾ ಗೋಷ್ಠಿಗಳೂ ಬೇಡ. ದೂರದೂರುಗಳಿಂದ ಅವರೆಲ್ಲಾ ಒಂದೆಡೆ ಸೇರುವುದು ಕನ್ನಡದ ಕಂಪನ್ನು ಸವಿಯಲು ಅಲ್ಲ. ಬೇರೆಯವರೊಡನೆ ಬೆರೆಯಬೇಕು, ಮೂರು ದಿನ ರಜೆಯ ಸುಖ ಅನುಭವಿಸಬೇಕು, ಥಳುಕು-ಬಳುಕು ಪ್ರದರ್ಶಿಸಬೇಕು, ತಮ್ಮ ಮಕ್ಕಳ ಪ್ರತಿಭೆಯನ್ನು ಪ್ರದರ್ಶನಕ್ಕಿಡಬೇಕು, ಮತ್ತು ಸಾಧ್ಯವಾದರೆ ಒಂದೆರಡು ಭಾಷಣ-ಹಾಡು-ನೃತ್ಯ ಕೇಳಿ-ನೋಡಿ ಆನಂದಿಸಬೇಕು. ಈ ಆಸಕ್ತಿಗಳನ್ನು ಪುಡಿ ಮಾಡಲು ನಲವತ್ತು ಸಾಹಿತಿ-ಕಲಾವಿದರು 'ಅಕ್ಕ'ನ ಮನೆ ಹೊಕ್ಕರೆ ಅಕ್ಕನ ಬಳಗ ಏನು ಮಾಡಬೇಕು! ಬೆಂಗಳೂರು ಮಂದಿಯೇ ಅಲ್ಲಿ ತುಂಬಿಕೊಂಡರೆ ಅಲ್ಲಿರುವವರು ಮಾತನಾಡುವುದು ಯಾವಾಗ, ಹಾಡುವುದು ಎಷ್ಟು, ನೃತ್ಯ ಪ್ರದರ್ಶನ ಮಾಡುವುದು ಹೇಗೆ? ಆದ್ದರಿಂದ ಸಹಜವಾಗಿಯೇ 'ಅಕ್ಕ' ಸಂಘಟಕರಿಗೂ ಸಮ್ಮೇಳನಕ್ಕೆ ಬಂದ ಅಮೆರಿಗನ್ನಡಿಗರಿಗೂ ದ್ವಂದ್ವ ಏರ್ಪಡುತ್ತದೆ. ಅದರ ಪರಿಣಾಮವಾಗಿ ಸ್ಥಳೀಯ ಪ್ರತಿನಿಧಿಗಳು ಕರ್ನಾಟಕದಿಂದ ಹೋದ ಅತಿಥಿಗಳ ಬಗ್ಗೆ ಅನಾದರ ತೋರಿಸುತ್ತಾರೆ, ಸಿಡುಕುತ್ತಾರೆ, ಊಟ-ತಿಂಡಿ ಕೊಡದೆ ಸತಾಯಿಸುತ್ತಾರೆ. ಇದನ್ನು ರಾಜ್ಯ ಸರ್ಕಾರ ಮತ್ತು ಸಂಸ್ಕೃತಿ ಇಲಾಖೆ ಮನದಟ್ಟು ಮಾಡಿಕೊಳ್ಳಬೇಕು. 'ಅಕ್ಕ' ಸಮ್ಮೇಳನ ಅವರಿಗೆ ಸಾಹಿತ್ಯ, ಕಲೆ, ಸಂಸ್ಕೃತಿ ಪರಿಚಯಿಸಿಕೊಳ್ಳಲು ಸಾಧನವಲ್ಲ. ಅವರಲ್ಲಿ ಕನ್ನಡದ ರಕ್ತ ಇರಬಹುದೇನೊ, ಆದರೆ ಕನ್ನಡದ ಬೆವರಿಲ್ಲವಲ್ಲ! ಅವರನ್ನು ದೂಷಿಸುವುದು ಬೇಡ, ಅದು ಅವರ ಆಯ್ಕೆ. ಒಂದು ಸಂದರ್ಭ ಊಹಿಸಿ: ನಾಳೆ ಬೆಂಗಳೂರಿನಲ್ಲಿ ಸಾಹಿತ್ಯ ಸಮ್ಮೇಳನ. ಸಾವಿರಾರು ಮಂದಿ ಸೇರುತ್ತಾರೆ. ಅದು ಅವರಿಗೆ ಉತ್ಸವ. ಆಗ ದೆಹಲಿ-ಮುಂಬೈ-ಕಲ್ಕತ್ತಾ-ಲಂಡನ್-ನ್ಯೂಯಾರ್ಕ್‌ಗಳಿಂದ ಐವತ್ತು ಮಂದಿ ಅತಿಥಿಗಳನ್ನು ಬರಮಾಡಿಕೊಂಡು ವೇದಿಕೆಯನ್ನು ಯಾವಾಗಲೂ ಅವರಿಗೇ ಬಿಟ್ಟುಕೊಡುವಂತಾದರೆ ಇಲ್ಲಿ ನೆರೆದ ಮಂದಿ ಏನು ಮಾಡಬಹುದು? ಕನಿಷ್ಠ ಪಕ್ಷ ರೊಚ್ಚಿಗಾದರೂ ಏಳುತ್ತಾರೆ (ಆದರೆ ಅವರಿಗೆ ಊಟೋಪಚಾರ ನೀಡಬೇಡಿರೆಂದು ಆಗ್ರಹಿಸುವುದಿಲ್ಲ). ನಾವದಕ್ಕೆ ಅವಕಾಶ ನೀಡಬಾರದು. ಅಂದರೆ, ಅತಿಥಿಗಳನ್ನು ಕರೆಯುವಾಗ ಅವರು ಹೊರೆಯಾಗುವಷ್ಟು ಮಂದಿಯನ್ನು ಕರೆಯಬಾರದು. ಯಾರದೋ ಹಣವೆಂದು ಎಲ್ಲರನ್ನೂ ಗುಡ್ಡೆ ಹಾಕಿಕೊಂಡರೆ ಸಮ್ಮೇಳನಕ್ಕೆ ಬಂದ ಪ್ರತಿನಿಧಿಗಳು ಮೂಗುಬಸವರಾಗಿ ಎಲ್ಲವನ್ನೂ ಸಹಿಸುತ್ತಾರೆಯೆ? ಅಮೆರಿಕಾದಲ್ಲಿ ಇದೇ ಪರಿಸ್ಥಿತಿ ಇದೆ. ಇದು ಈ ವರ್ಷದ ಅನುಭವ ಮಾತ್ರವಲ್ಲವೆಂದು ಐ.ಎ.ಎಸ್. ಅಧಿಕಾರಿ ಜಯರಾಮರಾಜೇ ಅರಸ್‌ಗೆ ತಿಳಿದಿಲ್ಲವೇನು? ಹಾಗಿದ್ದರೆ ಹಿಂದಿನ ಅನುಭವವನ್ನು ಲೆಕ್ಕಿಸದೆ ಕೋಟಿ ರೂಪಾಯಿ ತೆತ್ತು ನಮ್ಮ ಸಾಹಿತಿ-ಕಲಾವಿದರನ್ನು ಅಲ್ಲಿಗೇಕೆ ಕಳಿಸಿದರು? ಬದಲಾಗಿ, 'ಅಕ್ಕ' ಸಂಘಟಕರಿಗೆ ತಿಳಿಸಿ, ತಮ್ಮ ಖರ್ಚಿನಲ್ಲಿ ತಮಗೆ ಬೇಕಾದವರನ್ನು ಕರೆಸಿಕೊಳ್ಳಲು ಸಲಹೆ ನೀಡಿ ಕನ್ನಡ ಸಂಸ್ಕೃತಿಯ ರಕ್ಷಣೆ ಮಾಡಬಹುದಾಗಿತ್ತು. ಇನ್ನೊಂದು ವಿಷಯ: ನಾಳೆ ಮಧುಗಿರಿ ತಾಲ್ಲೂಕಿನ ಗಂಪಲಹಳ್ಳಿಯಲ್ಲಿ ನಾವೊಂದು ಅಕ್ಕ ಸಮ್ಮೇಳನ ನಡೆಸುತ್ತೇವೆನ್ನಿ; ಎಷ್ಟು ಮಂದಿ ಸಾಹಿತಿ-ಕಲಾವಿದರು ಅಲ್ಲಿಗೆ ಬರಲು ಉತ್ಸುಕರಾಗಿರುತ್ತಾರೆ ಮತ್ತು ಸಂಸ್ಕೃತಿ ನಿರ್ದೇಶಕರು ಎಷ್ಟು ಮಂದಿಯನ್ನು ಕಳಿಸಿಕೊಡುವ ವ್ಯವಸ್ಥೆ ಮಾಡುತ್ತಾರೆ? ಊಟೋಪಚಾರಕ್ಕೆ ಯಾವ ತೊಂದರೆ ಇರದಿದ್ದರೂ ನಮ್ಮ ನಿರೀಕ್ಷೆಗೆ ತಕ್ಕಂತೆ ಅತಿಥಿಗಳು ಬರಲಾರರೇನೊ!

ಇದನ್ನೆಲ್ಲಾ ಗಮನಿಸಿ ಜಯರಾಮರಾಜೇ ಅರಸ್ ತಮ್ಮ ಮಾತನ್ನು ಹಿಂತೆಗೆದುಕೊಳ್ಳಬೇಕು. ಇದು 'ಅಕ್ಕ' ನೊಡನೆ ಚೌಕಾಸಿ ವ್ಯಾಪಾರವಾಗಕೂಡದು, ಅದು ನಮ್ಮ ಸಂಸ್ಕೃತಿಯಾಗಬಾರದು. ''ಹಣ ಕೊಟ್ಟು ಜನ ಕಳಿಸುತ್ತೇವೆ, ಆದರೆ ನೀವು ಸತ್ಕಾರ ಹೇಗೆ ಮಾಡುತ್ತೀರೋ ಅದನ್ನು ನೋಡಿಕೊಂಡು ಆಮೇಲೆ ಹಣ ಕೊಡುತ್ತೇವೆ'' ಎಂಬುದು ಅಮೆರಿಕಾ ಸರ್ಕಾರದ ದೊಡ್ಡಣ್ಣನ ನೀತಿಯಾಗಲು ಯೋಗ್ಯವಾಗಿದೆ, ನಮ್ಮ ನೀತಿಯಾಗಲು ಅಲ್ಲ. ನಮ್ಮ ಸಾಹಿತಿ-ಕಲಾವಿದರನ್ನು ಅವರು ತಮ್ಮ ಖರ್ಚಿನಲ್ಲಿ ಬೇಕಾದರೆ ಕರೆಸಿಕೊಳ್ಳಲಿ, ನಾವೇ ಅವರ ಮೇಲೆ ಹೇರಿಕೊಂಡು ತಾತ್ಸಾರಕ್ಕೆ ಗುರಿಯಾಗುವುದು ಬೇಡ.

* * *

ಕರ್ನಾಟಕದ ಶ್ರೇಷ್ಠ ಸಂಗೀತಜ್ಞ ಮತ್ತು ನಾಗಸ್ವರ ವಿದ್ವಾಂಸ ಶ್ರೀ. ಎಂ. ಕೋದಂಡರಾಂ ತೀರಿಕೊಂಡು ನಮ್ಮ ರಾಜ್ಯದ ಸಂಗೀತ ಪ್ರಪಂಚವನ್ನು ಬಹಳಷ್ಟು ಬಡವಾಗಿಸಿದ್ದಾರೆ. ಅವರಿಗೆ 'ಹೊಸತು' ನಮ್ರವಾಗಿ ನಮಿಸುತ್ತದೆ. ಆಂಧ್ರದ ಕುಪ್ಪಂ ಬಳಿಯ ಗುಡಪಲ್ಲಿಯಲ್ಲಿ ಕೆ. ಎಸ್. ನಂಜುಂಡಯ್ಯ ಎಂಬ ಮಹನೀಯರಿದ್ದರಂತೆ. ಅವರು ಅಲ್ಲಿಯ ಅಂಚೆ ಕಚೇರಿ ಮುಖ್ಯಸ್ಥರು. ಊರಿನ ಬಾಲಕ ಬಾಲಿಕೆಯರಿಗೆ ಅವರು ಪಾಠ ಹೇಳಿಕೊಡುತ್ತಿದ್ದರು. ಅಂದರೆ, ಖಾಸಗಿ ಶಾಲೆಯನ್ನೇನೂ ನಡೆಸುತ್ತಿರಲಿಲ್ಲ. ಅದು ಉಚಿತ ಶಿಕ್ಷಣ. ಊರಿನ ಸರ್ಕಾರಿ ಶಾಲೆಯ ವಿದ್ಯಾರ್ಥಿ ಸಂಖ್ಯೆಗಿಂತಲೂ ಇವರ ಬಳಿ ಬರುತ್ತಿದ್ದವರ ಸಂಖ್ಯೆ ಜಾಸ್ತಿ. ಅವರಲ್ಲಿ ಶ್ರೀ. ಎಂ. ಕೋದಂಡರಾಂ ಮತ್ತು ಅವರ ಸೋದರ ಶ್ರೀ. ಎಂ. ಲಕ್ಷ್ಮಣ್ ಸಹ ಇದ್ದರು. ಇಬ್ಬರಲ್ಲಿ ಯಾರೂ ಶಾಲಾ-ಕಾಲೇಜುಗಳಲ್ಲಿ ದೊಡ್ಡ ಮೆಟ್ಟಿಲುಗಳನ್ನೇರಲಿಲ್ಲ, ಆದರೆ ಇಬ್ಬರೂ ಸಂಗೀತ ಕ್ಷೇತ್ರದ ಘನವಿದ್ವಾಂಸರಾದರು, ಎಲ್ಲೆಲ್ಲೂ ಮನ್ನಣೆ ಗಳಿಸಿದರು, ಸಾವಿರಾರು ಮಂದಿಗೆ ಸಂಗೀತದ ರಸದೌತಣ ಉಣಬಡಿಸಿದರು. ಕೋದಂಡರಾಂ ಇನ್ನಿಲ್ಲ, ಆದರೆ ಲಕ್ಷ್ಮಣ್ ಇನ್ನೂ ಹಲವು ಕಾಲ ನಮ್ಮೊಂದಿಗಿದ್ದು ಸಂಗೀತದ ಪರಂಪರೆಗೆ ತಮ್ಮ ಛಾಪನ್ನು ಸೇರಿಸುತ್ತಾರೆ.

೧೯೬೫ರ ಸುಮಾರಿನಲ್ಲಿ ಶ್ರೀ. ಕೋದಂಡರಾಂ ಐದಾರು ವರ್ಷಗಳ ಕಾಲ ನಾಗಸ್ವರ ವಿದ್ವಾನ್ ತಿರುವೆಂಗಾಡು ಜಯರಾಮ ಪಿಳ್ಳೈ ಅವರಲ್ಲಿ ಸಂಗೀತ ಕಲಿತರು, ನಂತರ ಬೆಂಗಳೂರಿನ ಅಯ್ಯನಾರ್ ಸಂಗೀತ ಶಾಲೆಯಲ್ಲಿ ವಿದ್ವಾನ್ ಆನೂರು ರಾಮಕೃಷ್ಣ ಅವರ ಬಳಿ ಸಂಗೀತಾಭ್ಯಾಸ ಮುಂದುವರಿಸಿದರು. ಆನೂರರ ಪ್ರೌಢಿಮೆ ಮತ್ತು ಮಾರ್ಗದರ್ಶನ ಕೋದಂಡರಾಂ ಅವರಿಗೆ ಸದಾ ಲಭ್ಯವಿತ್ತು ಮತ್ತು ಅದಕ್ಕಾಗಿ ಆನೂರರೆಂದರೆ ಇವರಲ್ಲಿ ವಿಶಿಷ್ಟ ಗೌರವ ಭಾವನೆ ಯಾವಾಗಲೂ ಇದ್ದದ್ದೆ. ಜಯರಾಮ ಪಿಳ್ಳೈ ಅವರಲ್ಲಿ ಕಲಿತ ಕೋದಂಡರಾಂ ಆಮೇಲೆ ಮಾಯಾವರಂ ಮಾಮುಂಡಿಯಾರ್ ಪಿಳ್ಳೈ ಅವರ ಶಿಷ್ಯರಾಗಿ ಪರಿಣತಿ ಪಡೆದರು. ಇದೇ ವೇಳೆಗೆ ಲಕ್ಷ್ಮಣ್ ಅವರು ತಿರುಚ್ಚೆರೈ ಕಲ್ಯಾಣಸುಂದರಂ ಪಿಳ್ಳೈ ಅವರಲ್ಲಿ ನಾಗಸ್ವರ ಕಲಿಯುತ್ತಿದ್ದು, ೧೯೮೧ರಲ್ಲಿ ಸೋದರನನ್ನು ಸೇರಿ ಯುಗಲ ನಾಗಸ್ವರ ವಾದನದ ಖ್ಯಾತಿಯನ್ನು ೧೯೬೫ರ ವರೆಗೆ ಹಬ್ಬಿಸಿದರು. ನಾಮಗಿರಿಪೇಟೈ ಕೃಷ್ಣನ್ ನಾಗಸ್ವರದಲ್ಲಿ ಬಹಳ ದೊಡ್ಡ ಹೆಸರು ಮಾಡಿದವರು. ಅವರಿಗೆ ಪಾಂಡಿಚೆರಿ ವಿಶ್ವವಿದ್ಯಾಲಯವು ಪಿಎಚ್.ಡಿ. ಪದವಿ ಕೊಟ್ಟಾಗ ನಾಮಕ್ಕಲ್ ಬಳಿಯ ಅವರ ಚಿಕ್ಕ ಊರು ನಾಮಗಿರಿಪೇಟೆಯಲ್ಲಿ ಅದ್ದೂರಿ ಅಭಿನಂದನಾ ಸಮಾರಂಭ ಏರ್ಪಡಿಸಲಾಗಿತ್ತು. ಅಂದು ನಾಗಸ್ವರ ಕಚೇರಿ ಶ್ರೀ. ಕೋದಂಡರಾಂ ಅವರದು ಎಂಬುದು ಹೆಮ್ಮೆಯ ಸಂಗತಿ. ವಿದ್ವಾನ್ ಕೃಷ್ಣನ್ ಕಚೇರಿಯ ನಂತರ ಕೋದಂಡರಾಂ ಅವರನ್ನು ಬಹಳವಾಗಿ ಮೆಚ್ಚಿ ಪುರಸ್ಕರಿಸಿದ್ದರು. ಆಕಾಶವಾಣಿ ರಾಷ್ಟ್ರೀಯ ಸಂಗೀತ ಕಾರ್ಯಕ್ರಮಗಳಲ್ಲಿ ಕೋದಂಡರಾಂ ಮತ್ತು ಲಕ್ಷ್ಮಣ್ ಜೊತೆಯಾಗಿ ಹಲವು ಕಚೇರಿಗಳನ್ನು ನಡೆಸಿಕೊಟ್ಟಿದ್ದಾರೆ. ಅನೇಕ ವರ್ಷಗಳ ಕಾಲ ಲಕ್ಷ್ಮಣ್ ಮಲಯೇಷ್ಯದಲ್ಲಿ ಇದ್ದರು. ಕೋದಂಡರಾಂ ಕೂಡ ಆ ದೇಶವಲ್ಲದೆ ಅಮೆರಿಕಾ ಮುಂತಾದ ದೇಶಗಳಲ್ಲೂ ಕಚೇರಿಗಳನ್ನು ನಡೆಸಿ ಕೊಟ್ಟವರೇ. ಅವರ ಶಿಷ್ಯರಲ್ಲಿ ಪಳನಿವೇಲು ಪ್ರಭಾವತಿ, ವಿ. ಕೋಟ ಮಣಿ ಮತ್ತು ಧರ್ಮಸ್ಥಳದಲ್ಲಿ ಇರುವ ಅನ್ನು ದೇವಾಡಿಗ ಮುಂತಾದ ಖ್ಯಾತ ನಾಗಸ್ವರ ವಿದ್ವಾಂಸರಿದ್ದಾರೆ. ಎರಡು ವರ್ಷಗಳ ಹಿಂದೆ ಕೋದಂಡರಾಂ ಅವರು ಗಾಯನ ಸಮಾಜದ ವಾರ್ಷಿಕ ಸಮ್ಮೇಳನದ ಅಧ್ಯಕ್ಷರಾಗಿದ್ದರು, ಬಹು ಹಿಂದೆಯೇ ರಾಜ್ಯೋತ್ಸವ ಪ್ರಶಸ್ತಿ ಪಡೆದಿದ್ದರು ಮತ್ತು ಕಳೆದ ವರ್ಷವಷ್ಟೆ ಗಾನಕಲಾ ಪರಿಷತ್ತಿನ ''ಗಾನಕಲಾಭೂಷಣ'' ಪ್ರಶಸ್ತಿ ಪಡೆದಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಸಹಸ್ರಾರು ಸಂಗೀತಾಸಕ್ತರ ಪ್ರೀತಿ-ಗೌರವ ಗಳಿಸಿದ್ದ ಶ್ರೀಯುತರು ತಮ್ಮ ೭೨ನೇ ವಯಸ್ಸಿನಲ್ಲೇ ಗತಿಸಿದ್ದು ತೀರಾ ದುಃಖದ ಸಂಗತಿ.

೧೯೮೦ರ ದಶಕದಲ್ಲಿ ಅಖಿಲ ಭಾರತ ವಿಶ್ವವಿದ್ಯಾನಿಲಯ ಮತ್ತು ಕಾಲೇಜು ಅಧ್ಯಾಪಕ ಸಂಘಗಳ ಒಕ್ಕೂಟವು ಬೆಂಗಳೂರಿನಲ್ಲಿ ತನ್ನ ಅಧಿವೇಶನ ನಡೆಸಿದ್ದಾಗ ಆರಂಭದಲ್ಲಿ ವಿದ್ವಾನ್ ಕೋದಂಡರಾಂ ಮತ್ತು ವಿದ್ವಾನ್ ಲಕ್ಷ್ಮಣ್ ನಾಗಸ್ವರ ನುಡಿಸಿದ್ದರು. ಬೇರೆ ರಾಜ್ಯಗಳಿಂದ ಬಂದಿದ್ದ ಪ್ರತಿನಿಧಿಗಳನೇಕರು ಇಂದಿಗೂ ಅದನ್ನು ನೆನೆಯುತ್ತಿರುತ್ತಾರೆ. ಲಕ್ಷ್ಯ-ಲಕ್ಷಣಗಳೆರಡರಲ್ಲೂ ನಿಷ್ಣಾತರಾಗಿದ್ದ ಕೋದಂಡರಾಂ ಕೆಲ ತಿಂಗಳ ಹಿಂದೆ ಆಕಾಶವಾಣಿಯ ಸಂದರ್ಶನವೊಂದರಲ್ಲಿ ನಾಗಸ್ವರದ ತಯಾರಿಕೆಯ ಜಟಿಲ ಸಮಸ್ಯೆಯನ್ನು ವಿವರಿಸಿದ್ದುದು, ಕಲಿಕೆಯ ವಿಧಾನವನ್ನು ತಿಳಿಸಿಕೊಟ್ಟಿದ್ದುದು, ಮಹದಾಸೆಗಳಿಗೆ ಬಲಿಯಾಗದೆ ಸಂಗೀತದಲ್ಲಿ ಸುಖ ಕಂಡಿದ್ದನ್ನು ನಿವೇದಿಸಿದ್ದುದು, ಎಲ್ಲಾ ಇಂದಿಗೂ ಮನನಯೋಗ್ಯವಾಗಿವೆ. ಮಂಗಳವಾದ್ಯವೆಂದು ನಾಗಸ್ವರವನ್ನು ಎಲ್ಲೆಡೆ ಪುರಸ್ಕರಿಸುವುದುಂಟು, ಆದರೆ ಸಾಮಾಜಿಕವಾಗಿ ನಾಗಸ್ವರ ವಾದಕರನೇಕರಿಗೆ ಸಂಗೀತ ಸಾಮ್ರಾಜ್ಯದಲ್ಲಿ ಸಮಾನತೆಯ ಆದರವಿನ್ನೂ ದಕ್ಕಿಲ್ಲದಿರುವುದು ನಮ್ಮ ಸಂಸ್ಕೃತಿಯ ಕಪ್ಪುಚುಕ್ಕೆಗಳಲ್ಲಿ ಒಂದು. ಕೋದಂಡರಾಂ ಅದನ್ನೆಲ್ಲಾ ಮೀರಿ ಬೆಳೆದವರು. ಸಮಾಜದ ಒಂದು

ಗುಂಪಿಗೆ ಸೀಮಿತವಾದ ವಾದ್ಯ ನಾಗಸ್ವರ ಎಂಬ ತಪ್ಪು ಭಾವನೆಯನ್ನು ತೊರೆಯುವುದು ಮಾನ್ಯ ಕೋದಂಡರಾಂ ಅವರಿಗೆ ಸಲ್ಲಿಸುವ ಕಾಣಿಕೆಯಾಗಬೇಕು. ಅವರನ್ನು 'ಹೊಸತು' ಗೌರವದಿಂದ ನೆನೆಯುತ್ತದೆ.

* * *

'ಕರಾವಳಿ ಅಲೆ' ದಿನಪತ್ರಿಕೆಯ ಮೇಲೆ ಮತ್ತೆ ಭೀಕರ ಹಲ್ಲೆ ನಡೆದಿದೆ. ಸರ್ಕಾರಿ ಯಂತ್ರದ ದುರುಪಯೋಗದ ಪರಾಕಾಷ್ಠೆಗೆ ಇದು ಇನ್ನೊಂದು ನಿದರ್ಶನ. 'ಅಲೆ'ಯ ಸಂಯೋಜಕ ಶ್ರೀ. ಬಿ. ವಿ. ಸೀತಾರಾಂ ಅವರಿಗೆ ಏನಾದರೊಂದು ಪ್ರಶಸ್ತಿ ಅಥವಾ ಹೆಗ್ಗಳಿಕೆಯ ಗರಿ ದೊರೆತರೆ ಸರ್ಕಾರವು ಹಲ್ಲು ಕಡಿದು ಸೀತಾರಾಂ ಮೇಲೆರಗುತ್ತದೆ. ಅವರನ್ನು ಕೊಲ್ಲಲು ಸರ್ಕಾರಿ ಯಂತ್ರವು ಆಯೋಜಿಸಿತ್ತು, ಅದು ಹೇಗೋ ಸೀತಾರಾಂ ಬದುಕುಳಿದರು, ಎಂದು ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಯೊಬ್ಬರು ತಮ್ಮ ಸುದೀರ್ಘ ತನಿಖಾ ವರದಿಯಲ್ಲಿ ಹೇಳಿದ್ದಾರೆ. ಅದನ್ನು ಕೇಳಿ ಕರಾವಳಿಯ ಒಂದಿಬ್ಬರು ಸಚಿವರು ಮತ್ತು ಹಲವು ಪೊಲೀಸ್ ಅಧಿಕಾರಿಗಳು ಕೆರಳಿ ಮತ್ತೆ ಸೀತಾರಾಂಗೆ ಉಪಟಳ ನೀಡಲು ಮುಂದಾಗಿದ್ದಾರೆ. ಈ ಬಾರಿ ಬಲಿಪೀಠಕ್ಕೆ ಎಳೆದು ತರಲಾದವರು ಇಬ್ಬರು ವರದಿಗಾರರು. ಯಥಾಪ್ರಕಾರ ರಜೆಗಳ ಸಾಲಿಗೆ ಮುನ್ನಾ ದಿನ. ನ್ಯಾಯಾಲಯದಲ್ಲಿ ಜಾಮೀನು ಸಿಕ್ಕಿದರೆ ಅವರು ಬೇಗ ಹೊರಬಂದು ಬಿಡುತ್ತಾರಲ್ಲಾ ಅದಕ್ಕೆ ! ಈ ವರದಿಗಾರರನ್ನು ನಡೆಸಿಕೊಂಡಿರುವ ರೀತಿಯು ಅತಿ ದುರುಳತನದ್ದು. ಕಾಣದ ಕೈಗಳ ಕೈವಾಡ ಎದ್ದುತೋರುತ್ತಿದೆ. ಆದರೆ ಕರಾವಳಿಯವರೇ ಆದ ಗೃಹಸಚಿವರು ಇದನ್ನೆಲ್ಲಾ ಗಮನಿಸದೆ ಅಧಿಕಾರಿಗಳ ಆಟಾಟೋಪಕ್ಕೆ ಬೆಂಬಲ ನೀಡುತ್ತಿದ್ದಾರೆ. ಮಾಧ್ಯಮಗಳು ಹಾಗೂ ಪ್ರೆಸ್ ಕೌನ್ಸಿಲ್ ಇಂತಹ ವಿದ್ಯಮಾನಗಳನ್ನು ತಡೆಗಟ್ಟಲು ಸರ್ಕಾರದ ಮೇಲೆ ಒತ್ತಡ ತರಬೇಕು, ಸಂಬಂಧಪಟ್ಟ ಸಚಿವರಿಗೆ ಮತ್ತು ಅಧಿಕಾರಿಗಳಿಗೆ ಛೀಮಾರಿ ಹಾಕಬೇಕು.

* * *

ಇತ್ತೀಚೆಗೆ ಪಿ. ಜೆ. ಥಾಮಸ್ ಹೆಸರು ಕೇಳಿ ಬಂದಿತಲ್ಲವೆ ? ಆತ ಈಗ ವಿಜಿಲೆನ್ಸ್ ಕಮಿಷನರ್ ! ಭಾರತ ಉದ್ಧಾರವಾಗುವುದು ಖಚಿತವಾಯಿತಲ್ಲ! ಮೊದಲ ಕಮಿಷನರ್ ನಿಟ್ಟೂರು ಶ್ರೀನಿವಾಸರಾಯರು. ಒಂದೇ ಒಂದು ಹಗರಣವನ್ನೂ ಅವರು ತಡೆಗಟ್ಟಲಿಲ್ಲ, ಯಾವುದರ ಬಗೆಗೂ ತೀರ್ಪು ಕೊಡಲಿಲ್ಲ. ಥಾಮಸ್ ಹಾಗಲ್ಲ, ಆತ ತೀರ್ಪು ಕೊಡುತ್ತಾನೆ, ಆದರೆ ಹಗರಣಕ್ಕೆ ಕಾರಣರಾದವರ ಪರವಾಗಿ. ಏಕೆಂದರೆ, ಸ್ವತಃ ಆತ ಹಗರಣಗಳ ಸರಮಾಲೆ ಧರಿಸಿಯೇ ಬಂದ ಮಹಾನುಭಾವ. ಸೆಪ್ಟೆಂಬರ್ ೧೩ರಂದು ಸರ್ವೋಚ್ಚ ನ್ಯಾಯಾಲಯವು ಎ. ರಾಜ ಎಂಬ ಕೇಂದ್ರ ಮಂತ್ರಿಗೆ ನೋಟಿಸ್ ಜಾರಿಮಾಡಿತು. ಕೇವಲ ೭೦,೦೦೦ ಕೋಟಿ ರೂಪಾಯಿಗಳನ್ನು ಕೇಂದ್ರ ಸರ್ಕಾರಕ್ಕೆ ವಂಚಿಸಿದ್ದಾನೆ ಈತ ಎಂಬುದು ಆಪಾದನೆ. ಎಲ್ಲಾ ಜಿ-೨ ಸ್ಪೆಕ್ಟ್ರಂ ಇತ್ಯಾದಿ ಸಂಬಂಧದಲ್ಲಿ, ಸರ್ಕಾರದ ತಲೆ ಬೋಳಿಸಿ ಖಾಸಗಿಯವರಿಗೆ ಸುಪ್ಪತ್ತಿಗೆ ಹಾಸುವ ಪ್ರವೀಣ ಈ ರಾಜ. ೭೦,೦೦೦ ಕೋಟಿಯಲ್ಲಿ ಖುದ್ದು ಈತನ ಪಾಲೆಷ್ಟು, ಕರುಣಾನಿಧಿಗೆ ದಕ್ಕಿದ್ದೆಷ್ಟು, ಮುಂತಾಗಿ ಲೆಕ್ಕ ಹಾಕುವಾಗ ಥಾಮಸ್ ಪಾಲು ಸಹ ಲೆಕ್ಕಕ್ಕೆ ಬರಬೇಕು. ಏಕೆಂದರೆ ಇಡೀ ಪ್ರಕರಣ ನಡೆಯುತ್ತಿದ್ದಾಗ ಕೇಂದ್ರ ಸರ್ಕಾರದ ಕಾರ್ಯದರ್ಶಿಯಾಗಿ ಗುಲುಂ ವಹಿವಾಟು ನೋಡಿಕೊಂಡಿದ್ದು ಥಾಮಸ್. ಆತ ಜೈಲಿಗೆ ಹೋಗಬೇಕಾದ ಪ್ರಸಂಗವನ್ನು ತಪ್ಪಿಸಲು ಮನಮೋಹನ ಸಿಂಗರು ಆತನನ್ನು ವಿಜಿಲೆನ್ಸ್ ಕಮಿಷನರ್ ಆಗಿ ಮಾಡಿದ್ದಾರೆ. ಭ್ರಷ್ಟಾಚಾರವನ್ನು ಇದಕ್ಕಿಂತಲೂ ಹೆಚ್ಚು ಪೋಷಿಸಲು ಸಾಧ್ಯವಿಲ್ಲ. ಆದರೂ ಮನಮೋಹನರು ''ಕ್ಲೀನ್ ಮ್ಯಾನ್'' ಎಂಬ ಪ್ರತೀತಿ ಇದೆ. ಇಂತಹ ಕ್ಲೀನ್ ಮೆನ್ ಇದ್ದಾಗ ಬೇರೆ ಡರ್ಟಿ ಮೆನ್‌ಗಳ ಅವಶ್ಯಕತೆ ಎಲ್ಲಿದೆ ! ಥಾಮಸ್ ವಿಜಿಲೆಂಟ್ ಆಗಿದ್ದರೆ ಕಳ್ಳರಿಗೆ, ಪಾತಕಿಗಳಿಗೆ, ಯಾವ ಯೋಚನೆಯೂ ಇಲ್ಲ. ಈತನನ್ನು ಆ ಸ್ಥಾನದಿಂದ ಕೆಳಗಿಳಿಸಬೇಕು, ಆಪಾದನೆಗಳನ್ನೆದುರಿಸಲು ಬಾಧ್ಯನನ್ನಾಗಿಸಬೇಕು. ಎಪ್ಪತ್ತು ಸಾವಿರ ಕೋಟಿ ಎಂದರೆ ಹತ್ತಿಪ್ಪತ್ತು ಪೈಸಾ ಅಲ್ಲವಲ್ಲ!

* * *

ಕೇರಳದ ಪ್ಲಾಚಿಮಡದಲ್ಲಿ ಪೆಪ್ಸಿ ಕೋಲ ಕಂಪನಿ ನಡೆಸುತ್ತಿರುವ ಹಾನಿ ಜಗತ್ಪ್ರಸಿದ್ಧ. ಊರಿನ ನೀರೆಲ್ಲಾ ಈ ಕಂಪನಿಗೆ ; ಮತ್ತು ಊರಿಗೆ ಕೇವಲ ಕಂಪನಿಯ ತ್ಯಾಜ್ಯ ರಾಸಾಯನಿಕಗಳು. ಕುಡಿಯುವ ನೀರು ಕಲುಷಿತ ಮತ್ತು ಕೃಷಿಗೆ ನೀರು ಅಲಭ್ಯ. ಕೇರಳ ಸರ್ಕಾರ ಹಾಗೂ ಊರಿನ ಜನ ನ್ಯಾಯಾಲಯಕ್ಕೆ ಹೋದರು. ''ನ್ಯಾಯ''ವು ಕಂಪನಿ ಪರವಾಗಿತ್ತು. ಹಿಂದೆ ಭೋಪಾಲಿನಲ್ಲಿ ಆ್ಯಂಡರ್‌ಸನ್ ಪರವಾಗಿದ್ದಂತೆ. ಅಂದಹಾಗೆ, ಅವನ ಹೆಸರು ನಾಲ್ಕುದಿನ ಕೇಳಿಬಂತು, ಈಗೇಕೆ ಪತ್ರಿಕೆಗಳ ಪುಟಗಳಿಂದ ಮಾಯವಾದ ? ಅದೇ ನಮ್ಮ ಮಾಧ್ಯಮಗಳ ಚಮತ್ಕಾರ ಇರಬೇಕು ! ಅದಿರಲಿ, ಈಗ ಪೆಪ್ಸಿ ಕಂಪನಿಗೆ ಅಮೆರಿಕಾ ಸರ್ಕಾರದ ವಿದೇಶಾಂಗ ಖಾತೆಯು ಒಂದು ಪ್ರಶಸ್ತಿ ಘೋಷಿಸಿದೆ. ದೊಡ್ಡ ಕಂಪನಿಗಳು ಅತ್ಯುತ್ತಮ ಕೆಲಸ ಮಾಡಿದಾಗ ಕೊಡುವ ಪ್ರಶಸ್ತಿ ಇದಂತೆ. ಏನಿದು ''ಅತ್ಯುತ್ತಮ'' ಸಾಧನೆ ? ಹಿಲರಿ ಕ್ಲಿಂಟನ್ ಹೇಳುತ್ತಾಳೆ, ಕೇಳಿ : ''ಕಂಪನಿಯು ಪರಿಸರ ರಕ್ಷಣೆಯ ಕಾರ್ಯವನ್ನು ಗಮನಾರ್ಹವಾದ ರೀತಿಯಲ್ಲಿ ನಿಭಾಯಿಸಿದೆ ಮತ್ತು ಆ ಮೂಲಕ ಪರಿಸರ ರಕ್ಷಣೆಗೆ ಹೊಸ ಆಯಾಮ ಕಲ್ಪಿಸಿದೆ. ನೀರು ಉಳಿಸುವ ಸಲುವಾಗಿ ಕಂಪನಿಯು ಮಹತ್ತರ ಪ್ರಯತ್ನ ಮಾಡುವ ಮೂಲಕ ಸಣ್ಣ ಮತ್ತು ಅಂಚಿನಲ್ಲಿರುವ ಭೂಮಾಲಿಕ ರೈತರಿಗೆ ಅಪಾರ ಅನುಕೂಲ ಮಾಡಿಕೊಟ್ಟಿದೆ.''

ಇದು ನಮ್ಮ ರಾಷ್ಟ್ರಕ್ಕೆ ಮತ್ತು ಕೇರಳ ಸರ್ಕಾರಕ್ಕೆ ಅಮೆರಿಕಾ ಸರ್ಕಾರದ ಎಚ್ಚರಿಕೆ; ''ಪೆಪ್ಸಿಯನ್ನು ಮುಟ್ಟಿದರೆ ಸುಮ್ಮನಿರುವುದಿಲ್ಲ'' ಎಂದು. ಕೇರಳದ ರೈತರ ಮೇಲೆ ಹಿಲರಿ ಕ್ಲಿಂಟನ್ ಯುದ್ಧ ಘೋಷಿಸಿರುವ ಪ್ರಸಂಗ ಇದು. ಕೇರಳದ ಜನಕ್ಕೆ ದ್ರೋಹ ಬಗೆದ ಕಂಪನಿಗೆ ಅಮೆರಿಕಾ ಸರ್ಕಾರವು ಪ್ರಶಸ್ತಿ ನೀಡಿದೆ, ಆದರೆ ಮನಮೋಹನ ಸಿಂಗ್ ಅದಕ್ಕೆ ಹರ್ಷದಿಂದ ಚಪ್ಪಾಳೆ ತಟ್ಟುತ್ತಾರೆ. ಇದು ನಮ್ಮ ದೇಶದ ಹೀನಾಯ ಸ್ಥಿತಿ. ಮರುಕ ಹುಟ್ಟುತ್ತದೆಯೆ ? ಅಥವಾ ಅಸಹ್ಯವೆನಿಸುತ್ತದೊ ?

* * *

ಮತಧರ್ಮದ ಜಡ್ಡುತನ ಮಡುಗಟ್ಟಿರುವ ಸಂಸ್ಥೆಗಳಲ್ಲಿ ತಾಲಿಬಾನರು ಅಗ್ರಸ್ಥಾನದಲ್ಲಿದ್ದಾರೆ. ಇವರನ್ನು ಬೆಳೆಸಿದ ಅಮೆರಿಕಾ ಈಗ ರೋಷದಿಂದ ಹಲ್ಲು ಕಡಿಯುತ್ತಿದೆ. ಧರ್ಮಾಂಧರು ಕ್ರೂರಿಗಳಾಗುವುದು, ಕೊಲ್ಲುವುದು, ಪಾತಕಗಳನ್ನೆಸಗುವುದು ಹೊಸದೇನಲ್ಲ ಮತ್ತು ಅದು ಯಾವೊಂದು ಧರ್ಮಕ್ಕೂ ಸೀಮಿತವಾದುದಲ್ಲ. ಈಗೀಗ ಕಾಣಬರುತ್ತಿರುವ ''ಸೇನೆ''ಗಳು ಅದಕ್ಕೊಂದು ನಿದರ್ಶನ. ಇಂಗ್ಲೆಂಡಿನ ಇತಿಹಾಸದಲ್ಲಿ ೧೬೪೦ರ ದಶಕ ಮಹತ್ವದ ಘಟನೆಗಳಿಂದ ತುಂಬಿದೆ. ಆಗ್ಗೆ ದೊರೆಯಾಗಿದ್ದವನು ಮೊದಲನೆಯ ಚಾರ್ಲ್ಸ್. ನೀತಿಗೆಟ್ಟ ದುರಾತ್ಮ ದೊರೆಯೆಂದು ಚಾರ್ಲ್ಸ್ ಡಿಕನ್ಸ್ ಅವನ ದೌರ್ಜನ್ಯಗಳ ದೊಡ್ಡ ಪಟ್ಟಿ ಮಾಡಿದ್ದಾನೆ. ಈ ದೊರೆಯ ಬಲಗೈ ಭಂಟನಾಗಿದ್ದವನು ವಿಲಿಯಂ ಲಾಡ್. ಅವನು ಆರ್ಚ್‌ಬಿಷಪ್ ಆಗಿದ್ದ. ಜನರ ಸ್ವಾತಂತ್ರ್ಯವನ್ನು ಹಾಳುಮಾಡುವುದೇ ಅವನ ಪರಮಧರ್ಮವಾಗಿತ್ತು. ಅವನು ಬಹಳ ದೊಡ್ಡ ವಿದ್ವಾಂಸನಾಗಿದ್ದನಂತೆ, ಆದರೆ ಬುದ್ಧಿಹೀನ. ಅವನು ಪ್ರಾಟೆಸ್ಟೆಂಟ್ ಗುರು, ಆದರೆ ಯಾವುದೇ ಕಟ್ಟಾ ಕ್ಯಾಥೊಲಿಕ್ ಗುರುವಿಗಿಂತಲೂ ಜಡ್ಡು ಮತಾಂಧ. ಅವನನ್ನು ಕಾರ್ಡಿನಲ್ ಪಟ್ಟಕ್ಕೆ ಏರಿಸಬೇಕೆಂದು ಸ್ವತಃ ಪೋಪ್ ಬಯಸಿದ್ದನಂತೆ. ಚರ್ಚಿನ ಆಚರಣೆಗಳಲ್ಲಿ ಅವನು ಬಹಳ ನಿಷ್ಠಾವಂತ : ದೀಪ ಬೆಳಗುವುದೇನು, ಉಪವಾಸ ಮಾಡುವುದೇನು, ಉಪದೇಶ ನೀಡುವುದೇನು, ಶಿಲುಬೆಯನ್ನು ಎತ್ತಿ ತರುವುದೇನು, ಬಗ್ಗಿಬಗ್ಗಿ ನಮಸ್ಕರಿಸುವುದೇನು ! ಆರ್ಚ್‌ಬಿಷಪ್ ಮತ್ತು ಬಿಷಪ್‌ಗಳೆಲ್ಲಾ ಪವಾಡ ಮಾಡಬಲ್ಲವರೆಂದೇ ಅವನ ನಂಬಿಕೆ. ಹಾಗಲ್ಲವೆನ್ನುವವರನ್ನು ಕಂಡರೆ ಕಡುಕೋಪ. ಹೀಗಿರುವಾಗ ಲೇಟನ್ ಎಂಬ ಸ್ಕಾಟ್ಲೆಂಡಿನ ಪಾದ್ರಿಗೆ ಒಮ್ಮೆ ಶಿಕ್ಷೆ ವಿಧಿಸಲಾಗಿತ್ತು : ಚಾಟಿ ಏಟು, ಕೆನ್ನೆಯ ಮೇಲೆ ಬರೆ, ಒಂದು ಕಿವಿಯನ್ನು ಕತ್ತರಿಸಿದ್ದು, ಮೂಗಿನ ಒಂದು ಹೊಳ್ಳೆಯನ್ನು ಹರಿದಿದ್ದು ಮತ್ತು ಕೈ-ಕುತ್ತಿಗೆಗಳಿಗೆ ಮರದ ತುಂಡುಗಳನ್ನು ಹಾಕಿ ಬಂಧಿಸಿದ್ದು. ಶಿಕ್ಷೆಗೆ ಕಾರಣವೇನು ಗೊತ್ತೆ ? ಬಿಷಪ್‌ಗಳು ಕುತಂತ್ರಿಗಳು, ಮೋಸಗಾರರು, ಎಂದು ಹೇಳಿದ್ದು. ಇನ್ನೊಮ್ಮೆ ಇದೇ ವಿಲಿಯಂ ಲಾಡ್ ಒಂದು ಭಾನುವಾರದಂದು ವಿಲಿಯಂ ಪ್ರಿನ್ ಎಂಬ ಪ್ರಸಿದ್ಧ ವಕೀಲನಿಗೆ ಒಂದು ಸಾವಿರ ಪೌಂಡು ದಂಡ ವಿಧಿಸಿದ. ಜೊತೆಗೆ ಅವನಿಗೂ ಲೇಟನ್‌ಗೆ ವಿಧಿಸಲಾಗಿದ್ದ ಶಿಕ್ಷೆಗಳನ್ನೆಲ್ಲಾ ನೀಡಲಾಯಿತು. ಅವನ ಅಪರಾಧವೂ ಅದೇ : ಬಿಷಪರು ಮೋಸಗಾರರು, ಎಂದು ಹೇಳಿದ್ದು. ವಿಶೇಷವೆಂದರೆ, ಕೆಲವು ದಿನಗಳ ನಂತರ ಪ್ರಿನ್‌ನ ಇನ್ನೊಂದು ಕಿವಿಯನ್ನೂ ಕತ್ತರಿಸಲಾಯಿತು ! ಮತ್ತೊಮ್ಮೆ ಒಬ್ಬ ವೈದ್ಯನ ಸರದಿ. ಬಾಸ್ಟ್‌ವಿಕ್ ಎಂದು ಅವನ ಹೆಸರು. ಅವನಿಗೂ ಅವೇ ಶಿಕ್ಷೆಗಳ ಮಾಲೆ.

ಹದಿನೇಳನೆಯ ಶತಮಾನದ ತಾಲಿಬನ್ ನಾಯಕ ವಿಲಿಯಂ ಲಾಡ್ ಮತ್ತು ಅವನ ಪೋಷಕ, ದೊರೆ ಚಾರ್ಲ್ಸ್. ಎಲ್ಲಾ ಪಾರ್ಲಿಮೆಂಟ್ ಎಂಬ ಸಂಸ್ಥೆಯ ಮೂಗಿನಡಿಯಲ್ಲೇ ನಡೆದಿತ್ತು. ಸಮಕಾಲೀನ ವಿದ್ಯಮಾನಗಳಲ್ಲಿ ಇಂತಹ ಎಷ್ಟೊಂದು ನಿದರ್ಶನಗಳಿವೆಯಲ್ಲವೆ ? ನಾಗರಿಕತೆ ಅಭಿವೃದ್ಧಿ ಹೊಂದುತ್ತಿದೆಯೆಂಬುದಕ್ಕೆ ಅದೇ ಪುರಾವೆಯೋ ಏನೋ !

* * *

ಕಳೆದ ತಿಂಗಳಿನ ಸ್ವಾತಂತ್ರ್ಯೋತ್ಸವದ ಆಚರಣೆ ಮರೆಯುವ ಮುನ್ನವೇ ನಮ್ಮ ಸ್ವಾತಂತ್ರ್ಯವನ್ನೇ ಅಣಕಿಸುವಂಥ ಘಟನಾವಳಿಗಳು ನಡೆದುಹೋದವು. ರಾಜ್ಯದ ಪ್ರಜೆಗಳು ಇನ್ನೂ 'ಜನಗಣಮನ' ಗುನುಗುನಿಸುತ್ತಿರುವಾಗಲೇ ನಮ್ಮ ರಾಜ್ಯದ ಕಾರ್ಮಿಕ ಮಂತ್ರಿ ಬಚ್ಚೇಗೌಡರು ತಮ್ಮ ಕಾರನ್ನು ಹಿಂದೆ ಹಾಕಿ ಮುಂದೆ ಹೋದ ಎನ್ನುವ ಕಾರಣಕ್ಕೆ ಪ್ರಜೆಯೊಬ್ಬನನ್ನು ಅವರ ಕುಟುಂಬದ ಎದುರಲ್ಲೇ ಥಳಿಸಿ

ತನ್ನ ಪ್ರಜಾಪ್ರೀತಿಯನ್ನು ತೋರಿಸಿದರು. ಕಾರ್ಮಿಕ ಮಂತ್ರಿಯ ಈ ವರ್ತನೆ ಖಂಡನೆಗೊಳಗಾಗಿ ಒಂದು ಪ್ರತಿಭಟನೆಯ ರೂಪ ಪಡೆಯುವ ಹೊತ್ತಿಗೆ ಬೆಂಗಳೂರಿನ ಪುನರ್‌ವಸತಿ ಕೇಂದ್ರದಲ್ಲಿ ಭಿಕ್ಷುಕರ ಸರಣಿ ಸಾವು ದೊಡ್ಡ ಸುದ್ದಿಯಾಯಿತು. ಬಚ್ಚೇಗೌಡರು ಬಚಾವಾದರು. ಆದರೂ ಸ್ವತಂತ್ರ ಭಾರತದಲ್ಲಿ ಒಂದು ರಾಜ್ಯದ ಮಂತ್ರಿಯಾಗಿ ಬಚ್ಚೇಗೌಡರು ಇಂದಿನ ಪ್ರಭುತ್ವದ ಪ್ರತಿನಿಧಿಯಾಗಿ ವರ್ತಿಸಿದ್ದಾರೆ. ಇನ್ನೊಬ್ಬ ಮಂತ್ರಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದವರು. ನಿರಾಶ್ರಿತರ ಪುನರ್‌ವಸತಿ ಕೇಂದ್ರದಲ್ಲಿ ಸುಮಾರು ೨೫ ಜನ ಸಾವನ್ನಪ್ಪಿದರೂ ಅವೆಲ್ಲ ಸಹಜ ಸಾವು, ನಿರಾಶ್ರಿತರು ಕೇಂದ್ರಕ್ಕೆ ಬರುವಾಗಲೇ ಹಲವಾರು ರೋಗಗಳನ್ನು ಪಡೆದಿರುತ್ತಾರೆ, ಅಂತಹ ಸಾವುಗಳ ಹೊಣೆಯನ್ನು ಹೊತ್ತು ನಾನೇಕೆ ರಾಜೀನಾಮೆ ಕೊಡಬೇಕು ಎಂದು ಕೇಳುತ್ತಾರೆ. ನಿರಾಶ್ರಿತರ ಪುನರ್‌ವಸತಿ ಕೇಂದ್ರಕ್ಕೆ ಹೋಗಿ ನೋಡಿದರೆ ಎರಡೂವರೆ ಸಾವಿರ ಜನ ನಿರಾಶ್ರಿತರನ್ನು ತುಂಬಿ ಅವರಿಗೆ ಅಗತ್ಯವಿರುವ ಊಟ, ವಸತಿ, ಚಿಕಿತ್ಸೆ ಕೊಡದೆ ನಾಗರಿಕ ಸಮಾಜ ತಲೆ ತಗ್ಗಿಸುವ ರೀತಿಯಲ್ಲಿ ಆ ಕೇಂದ್ರವನ್ನು ನಡೆಸುತ್ತಿದ್ದಾರೆ. ಬೆಂಗಳೂರು ನಗರದ ಜನತೆಯಿಂದ ಮನೆ ಕಂದಾಯದ ಭಾಗವಾಗಿರುವ ಸೆಸ್ ಮೂಲಕ ಸಂಗ್ರಹಿಸಿದ ಹಣ ೨೮ ಕೋಟಿ. ಅದರಲ್ಲಿ ಪುನರ್‌ವಸತಿ ಕೇಂದ್ರಕ್ಕೆ ತಲುಪಿದ್ದು ಐದುಕೋಟಿ ಮಾತ್ರ. ಅದರಲ್ಲಿ ಅಲ್ಲಿನ ರಾಜಕಾರಣಿಗಳು, ಅಧಿಕಾರಿಗಳು ಹಂಚಿಕೊಂಡು ಉಳಿದದ್ದು ಭಿಕ್ಷುಕರ ಪುನರ್‌ವಸತಿ, ಆಹಾರ, ಆರೋಗ್ಯಕ್ಕೆ ಬಳಕೆಯಾಗಬೇಕು. ಭಿಕ್ಷುಕರ ಅನುದಾನಕ್ಕೂ ಕಳ್ಳರ ಹಾವಳಿ. ಆಗಸ್ಟ್ ೧೭ರಂದು ಮುಖ್ಯಮಂತ್ರಿಯವರು ಸಾಂಕ್ರಾಮಿಕ ರೋಗಗಳಿಗೆ, ಲಸಿಕೆ ಔಷಧಿಗಳಿಗೆ ಕೊರತೆಯಿಲ್ಲ ಎಂದು ರಾಜ್ಯದ ಕೋಟ್ಯಂತರ ಜನತೆಗೆ ಭರವಸೆ ಕೊಟ್ಟಿದ್ದಾರೆ. ಅದರ ಮರುದಿನವೇ ಪುನರ್ ವಸತಿ ಕೇಂದ್ರದಲ್ಲೇ ನಿರಾಶ್ರಿತರು ಔಷಧೋಪಚಾರವಿಲ್ಲದೆ ಸಾವನ್ನಪ್ಪುತ್ತಾರೆ. ಕೇವಲ ಎರಡೂವರೆ ಸಾವಿರ ಜನರಿಗೆ ವಸತಿ, ಆಹಾರ, ಆರೋಗ್ಯ ಕೊಡಲಾಗದ ಇವರು ರಾಜ್ಯವನ್ನೇನು ಕಾಪಾಡುತ್ತಾರೆ, ಸೆಸ್ ಮೂಲಕ ಜನತೆ ಕೊಟ್ಟ ಕೋಟ್ಯಂತರ ಹಣವನ್ನು ಕೈಯಲ್ಲಿಟ್ಟುಕೊಂಡು ? ಕೊನೆಗೂ ಮುಖ್ಯಮಂತ್ರಿಗಳು ಬೇಜವಾಬ್ದಾರಿ ಮಂತ್ರಿ ಸುಧಾಕರ ಅವರಿಂದ ಸಮಾಜ ಕಲ್ಯಾಣ ಖಾತೆ ಕಿತ್ತುಕೊಂಡು ಮುಜರಾಯಿ ಖಾತೆ ಕೊಟ್ಟರು. ನಿರಾಶ್ರಿತರ ಪುನರ್‌ವಸತಿ ಕೇಂದ್ರದ ಅಧ್ಯಕ್ಷ ಮಂಜೇಗೌಡರನ್ನು ಆ ಸ್ಥಾನದಿಂದ ತೆಗೆದುಹಾಕಿದರು. ಅಂದರೆ ನಿರಾಶ್ರಿತರ ಜೀವಕ್ಕೆ ಬೆಲೆಯೇ ಇಲ್ಲವೆ ? ಮಂತ್ರಿಗಳ ಖಾತೆ ಬದಲಾವಣೆಯಿಂದ ಸಮಸ್ಯೆ ಪರಿಹಾರವಾಯಿತೆ ? ಪರಿಸ್ಥಿತಿಯ ವ್ಯಂಗ್ಯ ಹೇಗಿದೆಯೆಂದರೆ ಪುನರ್‌ವಸತಿ ಕೇಂದ್ರ ಎಂಬ ನರಕದ ಸಹವಾಸ ಸಾಕೆಂದು ಅಲ್ಲಿಂದ ಓಡಿಹೋದ ಜನ ಸಾವಿರಾರು ಸಂಖ್ಯೆಯಲ್ಲಿ ಮತ್ತೆ ಬೆಂಗಳೂರಿನ ಬೀದಿಗಳಿಗಿಳಿದರು. ಇನ್ನೂ ಕೆಲವರು ಬೀದಿಯಲ್ಲೇ ಇದ್ದಾರೆ. ಅದರಲ್ಲಿ ಬುದ್ಧಿಮಾಂದ್ಯರೂ ಇದ್ದಾರೆ. ನಿರಾಶ್ರಿತ ಸ್ತ್ರೀಯರು ರಸ್ತೆ ಬದಿಯಲ್ಲೇ ಲೈಂಗಿಕ ಹಲ್ಲೆಗೆ ಗುರಿಯಾಗುತ್ತಿರುವ ವರದಿಗಳು ಬಂದಿವೆ. ಕೆಲವರು ಅದು ನರಕದಂತಿದ್ದರೂ ಸರಿ ಅಲ್ಲೇ ಇದ್ದು ಸಾಯೋಣ ಎಂದು ಮರಳಿ ನಿರಾಶ್ರಿತರ ಕೇಂದ್ರಕ್ಕೆ ಬಂದಿದ್ದಾರೆ. ೬೩ ವರ್ಷದ ಸ್ವಾತಂತ್ರ್ಯ ದಿನಾಚರಣೆಯ ಒಂದು ವಾರದಲ್ಲೇ ಇಷ್ಟೆಲ್ಲ ನಡೆದುಹೋಯಿತು. ಜನರೂ ಮರೆತರು. ಕಾರಣ ಕಡೂರು, ಗುಲಬರ್ಗಾ ಉಪಚುನಾವಣೆಗಳು ಬಂದವು. ಯಥಾಪ್ರಕಾರ ಆಡಳಿತಾರೂಢ ಮತ್ತು ವಿರೋಧ ಪಕ್ಷದವರಿಗೆ ಪರಸ್ಪರ ಕೆಸರೆರೆಚಲು ವೇದಿಕೆ ಸಿಕ್ಕಿತು. ಜನರಿಗೂ ಪುಕ್ಕಟೆ ಮನರಂಜನೆ. ಹೀಗೆ ೬೩ನೇ ಸ್ವಾತಂತ್ರ್ಯ ದಿನಾಚರಣೆ ಕಳೆದೇ ಹೋಯಿತು. ೬೪ನೇ ವರ್ಷದ ಆಚರಣೆಗೆ ಕಾಯೋಣ. ಆದರೆ ಹೊಲಸುಗಳು ಇಲ್ಲದಂತೆ ಮಾಡಿಕೊಳ್ಳೋಣ. ●

---

*ಸಂಪಾದಕೀಯ (೫ನೇ ಪುಟದಿಂದ)*

ಹತ್ತಾರು ಸರಕಾರಗಳು ಬಂದು ಹೋಗಿವೆ, ಹಗರಣಗಳೂ ನಡೆದಿವೆ. ಆದರೆ ಈ ಸರಕಾರದಷ್ಟು ಭ್ರಷ್ಟರಕೂಟವನ್ನು ಕಂಡಿದ್ದಿಲ್ಲ. ಸರಕಾರ ಸಂಪೂರ್ಣವಾಗಿ ಇಂದು ಬಳ್ಳಾರಿ ಗಣಿಧಣಿಗಳ ಹಿಡಿತದಲ್ಲಿರುವುದರಿಂದ ಅಕ್ರಮ ಗಣಿಗಾರಿಕೆ ಸಂಬಂಧದಲ್ಲಿ ಏನೂ ಕ್ರಮ ತೆಗೆದುಕೊಳ್ಳುವುದು ಸಾಧ್ಯವಿಲ್ಲವಾಗಿದೆ. ಅಕ್ರಮ ಗಣಿಗಾರಿಕೆ, ಕಳ್ಳತನದಿಂದ ಅದಿರು ಸಾಗಣೆ ಇವನ್ನು ತಡೆಯಲು ರಾಜ್ಯದ ಲೋಕಾಯುಕ್ತರು ನಡೆಸಿರುವ ಪ್ರಯತ್ನಗಳಾವುದೂ ಸಫಲವಾಗಿಲ್ಲ. ಗಣಿ ರೆಡ್ಡಿಗಳಿಗೆ ಭಾಜಪ ನಾಯಕಿ ಸುಷ್ಮಾ ಸ್ವರಾಜ್‌ರ ಶ್ರೀರಕ್ಷೆ ಇರುವವರೆಗೆ ಯಡಿಯೂರಪ್ಪ ಏನೂ ಮಾಡುವಂತಿಲ್ಲ. ಕರ್ನಾಟಕದ ಜನತೆ ಈ ಭ್ರಷ್ಟ, ನಿರ್ಲಜ್ಜ ಸರಕಾರವನ್ನು ಸಹಿಸಿಕೊಂಡಿರಬೇಕಾಗಿದೆ, ಅನಿವಾರ್ಯವಾಗಿ ಇನ್ನು ಮೂರು ವರ್ಷಕಾಲ. ಭಾಜಪದಲ್ಲೇ ತಳಮಳವೇನಾದರೂ ಆಗಿ ಸರಕಾರ ಪತನವಾದರೆ ಅದೃಷ್ಟ. ಸರಕಾರ ಮತ್ತು ರಾಜ್ಯಪಾಲರ ನಡುವೆ ದಿನನಿತ್ಯದ ಜಟಾಪಟಿ ಹಿಂದೆಂದೂ ನಡೆದಿರಲಿಲ್ಲ. ಇದೊಂದು ಬಹಿರಂಗ ಪ್ರಹಸನ.

ಅಧಿಕಾರಕ್ಕೆ ಬಂದಮೇಲೆ ಆಯಕಟ್ಟಿನ ಸ್ಥಾನಗಳಲ್ಲಿ, ಸಂಸ್ಥೆಗಳಲ್ಲಿ ಆರೆಸ್ಸೆಸ್ ನಿಷ್ಠರನ್ನು ತೂರಿಸುತ್ತ ಬಂದಿದೆ. ಹಿಂದುತ್ವವಾದಿ ಅಜೆಂಡಾವನ್ನು ಕಾರ್ಯಗತ ಮಾಡಲು ಪ್ರಯತ್ನಗಳನ್ನು ನಡೆಸುತ್ತಲೇ ಬಂದಿದೆ. ಚರ್ಚುಗಳ ಮೇಲೆ ದಾಳಿ, ಸಂಪ್ರದಾಯ, ಹಿಂದೂ ಸಂಸ್ಕೃತಿ ರಕ್ಷಣೆ ಹೆಸರಿನಲ್ಲಿ ಸ್ವಯಂಸೇವಿತ ಸಂಘಪರಿವಾರದವರು ನಡೆಸುತ್ತಿರುವ ದಾಳಿ (ಮಂಗಳೂರಿನಲ್ಲಿ ನಡೆದ, ನಡೆಯುತ್ತಿರುವ ಪ್ರಕರಣಗಳು ಇದಕ್ಕೆ ಸಾಕ್ಷಿ) ಇವೆಲ್ಲ ಒಂದು ಮುನ್ಸೂಚನೆ. ತರಾತುರಿಯಲ್ಲಿ ಅಂಗೀಕರಿಸಿರುವ ಗೋಹತ್ಯಾ ನಿಷೇಧ ಮಸೂದೆಯೂ ಅವುಗಳಲ್ಲಿ ಒಂದು. ಕ್ರಮಬದ್ಧವಾದ ರೀತಿಯಲ್ಲಿ ಭಾಜಪ ಸರಕಾರ ಸಂವೈಧಾನಿಕ ಸಂಸ್ಥೆಗಳನ್ನು ಶಿಥಿಲಗೊಳಿಸುತ್ತಿದೆ. ಇದು ನಿಜಕ್ಕೂ ಅಪಾಯಕಾರಿ ಬೆಳವಣಿಗೆ. ಪ್ರಜಾಪ್ರಭುತ್ವ ಶಕ್ತಿಗಳು ಎಚ್ಚರ ವಹಿಸಿ ಇದನ್ನು ತಡೆ ಗಟ್ಟಬೇಕು, ಎದುರಿಸಬೇಕು. ಚುನಾವಣೆಗಳಿಂದ ಯಾವುದೇ ಪಾಠ ಕಲಿಯದ ಕಾಂಗ್ರೆಸ್, ಜೆಡಿಎಸ್‌ಗಳ ಮೇಲೆ ಅವಲಂಬಿಸದೆ, ಪ್ರಜಾಪ್ರಭುತ್ವವನ್ನು ಎತ್ತಿಹಿಡಿಯಲು ಜನಸಂಘಟಿತವಾಗಿ ಹೋರಾಟ ನಡೆಸಬೇಕಾಗಿದೆ. ಇದರಲ್ಲಿ ಎಡಪಕ್ಷಗಳ, ಪುರೋಗಾಮಿಗಳ ಜವಾಬ್ದಾರಿ ಹೆಚ್ಚು.

## ಬಾಬ್ರಿ ಮಸೀದಿ ಮುಗಿಯದ ವಿವಾದ

ಅಲಹಾಬಾದ್ ಉಚ್ಚ ನ್ಯಾಯಾಲಯದ ಮುಂದೆ ಅರವತ್ತು ವರ್ಷಗಳಿಂದ ಎಳೆದಾಡುತ್ತಿದ್ದ ಅಯೋಧ್ಯೆಯ ಬಾಬ್ರಿ ಮಸೀದಿ ಸ್ಥಳದ ಒಡೆತನಗಳ ವಿವಾದದ ತೀರ್ಪು ಸೆಪ್ಟೆಂಬರ್ ೨೪ರಂದು ಹೊರಬೀಳಲಿದೆ. ಯಾವುದೇ ಕಾರಣಕ್ಕೂ ತೀರ್ಪು ನೀಡಿಕೆಯನ್ನು ಮುಂದೂಡುವುದಿಲ್ಲ ಎಂದು ಸ್ಪಷ್ಟಪಡಿಸಿರುವ ನ್ಯಾಯಾಲಯ, ಕೊನೆಯ ಘಳಿಗೆಯಲ್ಲೂ ಸಂಬಂಧಪಟ್ಟ ಫಿರ್ಯಾದಿಗಳಿಗೆ ಮಾತುಕತೆಗಳಿಂದ ವಿವಾದ ಬಗೆಹರಿಸಲು ಅವಕಾಶ ನೀಡಿತ್ತು. ಇಲ್ಲಿಗೆ ನ್ಯಾಯಾಲಯದ ಹೋರಾಟದ ಒಂದು ಅಂಕ ಮುಗಿಯುತ್ತದೆ, ವಿವಾದ ಮುಗಿಯುವುದಿಲ್ಲ. ತೀರ್ಪು ಹೊರಬೀಳುವುದಕ್ಕೆ ಒಂದು ವಾರ ಮುನ್ನವೇ ಮುನ್ನೆಚ್ಚರಿಕೆಯಾಗಿ ಸರಕಾರ ಬಿಗಿ ಬಂದೋಬಸ್ತಿಗೆ ಕ್ರಮ ಕೈಗೊಂಡಿದೆ. ಅದು ಸರಿಯಾದದ್ದೆ. ನ್ಯಾಯಾಲಯದ ತೀರ್ಪಿನಿಂದ ಶಾಂತಿಗೆ ಭಂಗವಾಗದಂತೆ ನೋಡಿಕೊಳ್ಳುವುದು, ತೀರ್ಪನ್ನು ಜಾರಿಗೆ ತರುವುದು ಸರಕಾರದ ಕರ್ತವ್ಯ. ಆದರೆ ಸಂಬಂಧಪಟ್ಟ ಪಕ್ಷಗಳ ತೀರ್ಪು ಅಂಗೀಕರಿಸಿ, ಶಾಂತಿ ಕಾಪಾಡಬೇಕೆಂದು ಪ್ರಧಾನಿ ಮನಮೋಹನ ಸಿಂಗ್ ಮನವಿ ಮಾಡಿಕೊಂಡಿರುವುದೀಗ ಅತಿಯಾಯಿತು ಎಂದು ಹೇಳಬೇಕು. ಸರಕಾರ ದೃಢವಾದ ಕ್ರಮ ಕೈಗೊಳ್ಳುವ ಎಚ್ಚರಿಕೆ ನೀಡಬೇಕಾಗಿತ್ತು, ಅಷ್ಟೆ.

ಮಾಧ್ಯಮಗಳು ಈಗಾಗಲೇ ವಿವಾದಕ್ಕೆ ಸಂಬಂಧಿಸಿದ ವಿವರಗಳನ್ನು ರಂಜಕವಾಗಿ ನೀಡುತ್ತಿವೆ. ಒಣ ಚರ್ಚೆಗಳನ್ನು ನಡೆಸುತ್ತಿವೆ. ಇಷ್ಟೊಂದು ಪ್ರಾಮುಖ್ಯ ಇದಕ್ಕೆ ನೀಡಬೇಕೆ ಎನ್ನುವ ಪ್ರಶ್ನೆ ಕಾಡುತ್ತದೆ. ನಾಲ್ಕು ನೂರು ವರ್ಷಗಳ ಹಿಂದೆ ನಿರ್ಮಿತವಾದ ಮಸೀದಿ ಅದು. ಅಯೋಧ್ಯೆಯಲ್ಲಿರುವ ಈ ಮಸೀದಿಯ ಸ್ಥಳದಲ್ಲೇ ಶ್ರೀರಾಮನ ಜನನವಾದದ್ದು ಎಂಬ ಸೊಲ್ಲು ಕೇಳಿ ಬಂದದ್ದೇ ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಹಿಂದೂ ಮಹಾಸಭಾ ಹುಟ್ಟಿಕೊಂಡಮೇಲೆ. ಒತ್ತಾಯಗಳಿಗೆ ಮಣಿದು ಬ್ರಿಟಿಷ್ ಸರಕಾರ, ಹಾಗೂ ನಂತರ ಅಧಿಕಾರಕ್ಕೆ ಬಂದ ದೇಸೀ ಸರಕಾರಗಳು ಈ ಮಸೀದಿ ಸಂಕೀರ್ಣದ ವಿವಾದಕ್ಕೆ ತಮ್ಮ ಪಾಲಿನ ಪೋಷಣೆ ನೀಡಿವೆ. ವಿವಾದವನ್ನು ಪ್ರಾರಂಭದಲ್ಲೇ ಚಿವುಟಿಹಾಕಿ, ಪಾಳುಬಿದ್ದಿದ್ದ ಮಸೀದಿಯನ್ನು ಪುರಾತತ್ವ ಇಲಾಖೆಗೆ ವಹಿಸಿಕೊಟ್ಟಿದ್ದರೆ ಇಷ್ಟೆಲ್ಲ ಫಜೀತಿ ಆಗುತ್ತಿರಲಿಲ್ಲ. ದೇಶದಲ್ಲಿರುವ ಸಾವಿರಾರು ಮಸೀದಿಗಳಲ್ಲಿ ಇದೂ ಒಂದಾಗಿರುತ್ತಿತ್ತು. ಹಿಂದೂ, ಮುಸ್ಲಿಂ ಸಮುದಾಯದ ತೀವ್ರವಾದಿಗಳು ಪ್ರತಿಯೊಂದು ಹಂತದಲ್ಲೂ ಸರಕಾರದ ನಿಷ್ಕ್ರಿಯತೆಯನ್ನು ಉಪಯೋಗಿಸಿಕೊಂಡರು. ಬಾಬ್ರಿ ಮಸೀದಿ ಧ್ವಂಸ ಪ್ರಕರಣ ಅದಕ್ಕೆ ಒಂದು ಉದಾಹರಣೆ. ಈಗಲೂ ಕೂಡ ಮತೀಯವಾದಿಗಳು ಶಾಂತಿಗೆ ಭಂಗ ತರಲು ಪ್ರಯತ್ನಿಸಿಯಾರು. ಸರಕಾರ ದಿಟ್ಟ ಕ್ರಮ ತೆಗೆದುಕೊಂಡು ಪುಂಡಾಟಿಕೆಯನ್ನು ಅಡಗಿಸ ಬೇಕು. ಇಲ್ಲದಿದ್ದರೆ ಇಂಥದೇ ಪ್ರಕರಣಗಳು ಇತರ ಕಡೆಗಳಲ್ಲೂ ತಲೆಯೆತ್ತಿಯಾವು.




### ಸೆಪ್ಟೆಂಬರ್ ಸಂಚಿಕೆ

**'ಪಾತರಗಿತ್ತಿ... ಪಕ್ಕ'**

ಕೆ. ಪಿ. ಸ್ವಾಮಿ ಅವರ ಮುದ್ದಾದ, ಸುಂದರ ಪಾತರಗಿತ್ತಿಯನ್ನು ನಮ್ಮ ತೋಟಕ್ಕೆ ಕಳಿಸಿದ್ದಕ್ಕಾಗಿ ಧನ್ಯವಾದಗಳು. ಸೆಪ್ಟೆಂಬರ್ ಸಂಚಿಕೆಯ ಆಕರ್ಷಕ ಮುಖಪುಟ ಎಲ್ಲರ ಗಮನ ಸೆಳೆಯುವಂತಿದೆ.

ಇನ್ನು ಒಳಗಿನ ಹೂರಣದ ಬಗ್ಗೆ ಹೇಳುವುದಾದರೆ, ಸಂಪಾದಕೀಯ : 'ವಿದೇಶಿ ವಿಶ್ವವಿದ್ಯಾನಿಲಯಗಳಿಗೆ ನೆಲೆ ನೀಡಬೇಕೆ?' ಗಮನಾರ್ಹ. ಭಾರತೀಯ ವಿಶ್ವವಿದ್ಯಾನಿಲಯಗಳು ವಿಶ್ವದಲ್ಲೇ ಖ್ಯಾತವಾಗಿದ್ದುವು. ಈಗ ಅವುಗಳಲ್ಲಿ ಶಿಕ್ಷಣದ ಮಟ್ಟ ಕುಸಿಯುತ್ತಾ ಹೋಗಿ ಪಾತಾಳ ಮುಟ್ಟುತ್ತಿದೆ. ಆದಕಾರಣ ಇಲ್ಲಿನ ಸುಸಂಸ್ಕೃತರ ಮಕ್ಕಳು ವಿದೇಶಿ ಶಿಕ್ಷಣಕ್ಕೆ ಮಾರುಹೋಗುತ್ತಿದ್ದಾರೆ. ಬಡವರ ಮಕ್ಕಳು ವಿದೇಶಕ್ಕೆ ಹೋಗಿ ಶಿಕ್ಷಣ ಪಡೆಯಲಾದೀತೆ? ಇಲ್ಲಿನ ವಿಶ್ವವಿದ್ಯಾನಿಲಯಗಳಲ್ಲಿನ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಿದಾಗಲೇ ಅದರ ಪ್ರತಿಫಲ ಜನತೆಗೆ ತಲುಪೀತು. ವಿದೇಶಿ ವಿಶ್ವವಿದ್ಯಾನಿಲಯಗಳನ್ನು ಭಾರತಕ್ಕೆ ತಂದು, ನೆಲೆಗೊಳಿಸುವ ಪ್ರಯತ್ನಕ್ಕೆ ಜನತೆಯು ವ್ಯಾಪಕವಾದ ವಿರೋಧ ವ್ಯಕ್ತಪಡಿಸಬೇಕು.

ಬಿ. ಶ್ರೀನಿವಾಸರ 'ಪಾರ್ಕಿನಲ್ಲೊಂದು ಸಂಧ್ಯಾರಾಗದ ಹಾಡು...' ಗಮನಾರ್ಹವಾಗಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಪ್ರತಿ ತಿಂಗಳು 'ಹೊಸತು'ನಲ್ಲಿ 'ನಭಾವಲೋಕನ' ಅಂಕಣದ ಮೂಲಕ ನಮಗೆ ಖಗೋಳದ ವಿಸ್ಮಯಕಾರಿ ವಿಷಯಗಳನ್ನು ನೀಡುತ್ತಿರುವ ನಿಮಗೆ ವಂದನೆಗಳು.

ನಮ್ಮ ಪ್ರೌಢಶಾಲೆಯ ವಿದ್ಯಾರ್ಥಿಗಳೂ ಸಹ ತಪ್ಪದೇ ಈ ಲೇಖನ ಓದುವರು.

ಹೂವಿನ ಹಡಗಲಿ **ಸುರೇಶ ಅಂಗಡಿ**

**ಒಂದಿಷ್ಟು ಅರ್ಥಶಾಸ್ತ್ರ**

ಆರ್ಥಿಕತೆಯ ಮೂಲಕಲ್ಪನೆ ಮೂಡುವುದು ಮನೆಯಿಂದಲೇ. ಮನೆಯಲ್ಲಿ ಎಷ್ಟು ಜನರಿದ್ದಾರೆ, ಅವರಲ್ಲಿ ದುಡಿಯುವವರೆಷ್ಟು, ಆ ದುಡಿಯುವವರ ಮೇಲೆ ಅವಲಂಬಿತರೆಷ್ಟು, ಬರುವ ವರಮಾನವೆಷ್ಟು, ಆ ವರಮಾನ ಸಂಸಾರದ ಪ್ರಾಥಮಿಕ ಆವಶ್ಯಕತೆಯನ್ನು ಪೂರೈಸುತ್ತದೆಯೇ... ಹೀಗೆ ಮನೆಯಲ್ಲಿ – ಆ ಮನೆ ಶ್ರೀಮಂತರದ್ದಿರಬಹುದು, ಬಡವರದ್ದಿರಬಹುದು; ಅಕ್ಷರಸ್ಥರದ್ದಿರಬಹುದು, ಅನಕ್ಷರಸ್ಥರದ್ದಿರಬಹುದು – ಅಂತೂ ಆದಾಯವನ್ನು ಜೀವನ ನಿರ್ವಹಣೆಗೆ ಹೊಂದಿಸುವ ಪ್ರಯತ್ನ ನಡೆದೇ ಇರುತ್ತದೆ.

ಒಂದು ಸಂಸಾರದಲ್ಲಿ ಗಂಡ-ಹೆಂಡತಿ ಇಬ್ಬರಿದ್ದು, ಇಬ್ಬರೂ ದುಡಿಯುತ್ತಿದ್ದು, ಇಬ್ಬರೂ ಪ್ರತಿ ತಿಂಗಳು ಹತ್ತು-ಹತ್ತು ಸಾವಿರ ತಂದರೆ ಆ ಸಂಸಾರ ಆರ್ಥಿಕವಾಗಿ ಸದೃಢವೇ. ಅದೇ ಇನ್ನೊಂದು ಸಂಸಾರದಲ್ಲಿ ಇಬ್ಬರು ದುಡಿಯುತ್ತಿದ್ದು, ಇಬ್ಬರೂ ಹತ್ತು-ಹತ್ತು ಸಾವಿರ ತರುತ್ತಿದ್ದು ಅವಲಂಬಿತರು ಹತ್ತು ಜನರಿದ್ದರೆ ಪರಿಸ್ಥಿತಿ ಹೇಗಿರುತ್ತದೆ? ಇಂಥ ಸಮಯದಲ್ಲೇ ಆರ್ಥಿಕ ಕೌಶಲವನ್ನು ತೋರಿಸಬೇಕಾದ್ದು. ಮೊದಲ ಕುಟುಂಬದಲ್ಲಿ ಇಬ್ಬರೇ ಇದ್ದು ಇಬ್ಬರೂ ಹತ್ತು-ಹತ್ತು ಸಾವಿರ ತರುತ್ತಿರುವಾಗ ಮಾಡುವ ಖರ್ಚಿನಲ್ಲಿ ಹೆಚ್ಚಿನ ಹಿಡಿತ, ಬಿಗುವು ಯಾವುದೂ ಬೇಕಾಗುವುದಿಲ್ಲ. ಆದರೆ ದುಂದುವೆಚ್ಚಕ್ಕಿಳಿದರೆ ಅಲ್ಲೂ ಸುಖವಿರದು. ಅದೇ ಎರಡನೇ ಕುಟುಂಬದಲ್ಲಿ ತೀರಾ ಕಟ್ಟುನಿಟ್ಟಿನ ಆರ್ಥಿಕನೀತಿಯನ್ನು ಅನುಸರಿಸಲೇಬೇಕಾಗುತ್ತದೆ. ಉದಾಹರಣೆಗೆ, ಈ ತಿಂಗಳು ಒಬ್ಬರಿಗೆ ಬಟ್ಟೆ ಕೊಂಡರೆ ಮುಂದಿನ ತಿಂಗಳು ಮತ್ತೊಬ್ಬರಿಗೆ. ದಿನವೂ ಊಟ-ತಿಂಡಿಯಲ್ಲಿ ವಿಶೇಷತೆ ಏನೂ ಇರಲು ಸಾಧ್ಯವಿಲ್ಲ,




ವಾರಕ್ಕೊಮ್ಮೆಯೋ, ತಿಂಗಳಿಗೋ ವಿಶೇಷ ಮಾಡಬೇಕಾಗುತ್ತದೆ. ಹೀಗೆ ಯಾವ ರೀತಿ-ನೀತಿ ಅನುಸರಿಸಿದರೆ ಜೀವನ ನಿರುಮ್ಮಳವಾಗಿ ಸಾಗುತ್ತದೆ ಎನ್ನುವ ಆರ್ಥಿಕ ಚಿಂತನೆ ನಡೆದೇ ಇರುತ್ತದೆ.

ಅರ್ಥ ರೀತಿ-ನೀತಿ ಕುರಿತು ಅರ್ಥಶಾಸ್ತ್ರವೆಂಬ ಶಾಖೆಯೇ ಅಗಾಧವಾಗಿ ಬೆಳೆದು ರಾಶಿರಾಶಿ ಬರೆಹಗಳು, ಗ್ರಂಥಗಳು, ಸಂಶೋಧನಾತ್ಮಕ ಹಾಗೂ ವಿಶ್ಲೇಷಣಾತ್ಮಕ ಸಾಹಿತ್ಯ ಬೆಳೆದು, ಅಗಾಧ ಸಂಖ್ಯೆಯ ಅರ್ಥಶಾಸ್ತ್ರಜ್ಞರಿದ್ದರೂ ಅವರೆಲ್ಲರೂ ಜನರ ಮೂಲಭೂತ ಆರ್ಥಿಕ ಸುಧಾರಣೆಯ ನೀತಿ ರೂಪಿಸಲು ವಿಫಲರಾಗಿಬಿಡಬಹುದು; ಬದುಕು, ಅದು ತನ್ನದೇ ದಾರಿ ಹಿಡಿದಿರುತ್ತದೆಯೇ ವಿನಾ ಯಾವ ಶಾಸ್ತ್ರವನ್ನು ಅನುಸರಿಸಿ ನಡೆಯುವುದೇ ಇಲ್ಲ. ನಮ್ಮ ದೇಶದ ಪ್ರಧಾನಿಗಳೇ ಉದ್ದಾಮ ಆರ್ಥಿಕ ತಜ್ಞರು. ಹಾಗಿದ್ದೂ ಇಂದು ಹಣದುಬ್ಬರ, ಬೆಲೆ ಏರಿಕೆ, ಬೇಡಿಕೆಗೂ ಉತ್ಪಾದನೆಗೂ ತಾಳಮೇಳ ಇಲ್ಲದಿರುವುದು ಏಕೆ?

ಆಹಾರಧಾನ್ಯಗಳ ಕೊರತೆ, ಉಳಿತಾಯ ಮಾಡಿದರೂ ಅದು ವ್ಯರ್ಥವಾಗುವುದಾದರೂ ಏಕೆ? ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ್ದು ಆಹಾರ ಧಾನ್ಯಗಳ ಉತ್ಪಾದನೆ ಮತ್ತು ಸ್ವಾವಲಂಬನೆಯ ಕುರಿತು. ಬೇರೆ ಯಾವುದೇ ಕೆಲಸ, ಚಟುವಟಿಕೆ, ಸೇವೆ, ಉತ್ಪಾದನೆ ಏನೇ ಇದ್ದರೂ ಅಂತಿಮವಾಗಿ ಅವು ಅನ್ನ ಸಂಪಾದನೆಯ ಮಾರ್ಗಗಳೇ ವಿನಾ ಅದರ ಪಾಡಿಗೆ ಅವು ಸ್ವತಂತ್ರವಲ್ಲ. ಅಭಿವೃದ್ಧಿ, ಉತ್ಪಾದನೆ ಎನ್ನುವ ಹೆಸರಿನಲ್ಲಿ ಬೇಕಾದ್ದನ್ನೋ ಬೇಡವಾದದ್ದನ್ನೋ ಉತ್ಪಾದನೆ ಮಾಡಿ ಪೇರಿಸುತ್ತಾ ಹೋದರೆ ಹೊಟ್ಟೆ ತುಂಬುತ್ತದೆಯೆ? ಇಂದು ಮಾಹಿತಿ ತಂತ್ರಜ್ಞಾನ, ಕಂಪ್ಯೂಟರ್ ಬಳಕೆ ಮನೆಮನೆಗೂ ವಿಸ್ತರಿಸಿದೆ. ಹಾಗೆಂದು ಎಲ್ಲಾ ಬಿಟ್ಟು ಅದರ ಉತ್ಪಾದನೆಯನ್ನು ಮಾಡಿ ಮಾಡಿ ಗುಡ್ಡೆಹಾಕಿದರೆ ಕಂಪ್ಯೂಟರ್ ತಯಾರಿಸಿದವನು ಊಟ ಇಲ್ಲದೆ ಇರಲು ಸಾಧ್ಯವೆ? ಅದೇ ರೀತಿ ಆಹಾರ ಉತ್ಪಾದಕನಿಗೂ ಇತರ ವಸ್ತುಗಳ ಆವಶ್ಯಕತೆ ಇದೆ. ಇವೆರಡರಲ್ಲಿ ಸಮತೋಲನ ಕಾಯ್ದುಕೊಳ್ಳುವಂತಹ ಆರ್ಥಿಕ ನೀತಿ ಬೇಕು, ಆಯಾ ಉತ್ಪಾದಕನಿಗೆ ಊಟವೂ ಸಿಗಬೇಕು; ಅಂತೆಯೇ ರೈತನಿಗೆ ಕೂಡ ತನ್ನ ಶ್ರಮಕ್ಕೆ ತಕ್ಕ ಬೆಲೆ ದೊರೆತು ನೆಮ್ಮದಿಯ ಬದುಕಿಗೆ ದಾರಿಯಾಗಬೇಕು. ಈ ರೀತಿ ಮಾಡುವುದರಿಂದ, ಸಮತೋಲನ ಉಂಟುಮಾಡುವುದರಿಂದ ಎಲ್ಲರಿಗೂ ಉದ್ಯೋಗ, ಎಲ್ಲರಿಗೂ ಬದುಕು ಸಹ್ಯವಾದೀತು. ಈ ಸ್ವಾವಲಂಬನೆಯ ಸಮತೋಲನ ಸಾಧಿಸಿದರೇನೆ ಶೋಷಣೆ ಮುಕ್ತ ಸಮಾಜವನ್ನು ನಿರ್ಮಿಸಬಹುದು. ಇದರ ಕುರಿತೇ ಒಂದಿಷ್ಟು ಆರ್ಥಿಕ ಚಿಂತನೆ ನಡೆಯಬೇಕು.

ಈ ದೃಷ್ಟಿಯಲ್ಲಿ ಹೊಸ ಆರ್ಥಿಕ ಚಿಂತನೆ, ಹೊಸ ಆರ್ಥಿಕ ಪರಿಕಲ್ಪನೆ ಬೇಕೆನಿಸುತ್ತದೆ. 'ಹೊಸತು'ವಿನಲ್ಲಿ ಇಂತಹ ಚಿಂತನಪರ ಲೇಖನವಿದ್ದರೆ, ಅದು ಇಂದಿನ ಪರಿಸ್ಥಿತಿಗೆ, ಸಮಸ್ಯೆಗೆ ಪರಿಹಾರ ಸೂಚಿಸುವಂತಿದ್ದರೆ ಇನ್ನೂ ಉತ್ತಮ. 'ಹೊಸತು'ವಿನಲ್ಲಿ ಶ್ರೀ ಪಾರ್ಥಸಾರಥಿಯವರು ಬರೆಯುತ್ತಿರುವ 'ಒಂದಿಷ್ಟು ಅರ್ಥಶಾಸ್ತ್ರ' ಲೇಖನ ಮಾಲೆ ಒಳ್ಳೆಯ ಪ್ರಯತ್ನವೇ. ಅಲ್ಲಿ ಹೇಳಿರುವ ವಿಷಯಗಳು ಪ್ರಸ್ತುತವಾಗಿದ್ದರೂ ತೀರಾ ತಾತ್ವಿಕ ಮಟ್ಟಕ್ಕೆ ಹೋಗದೆ ಥಿಯರಿಯ ಹಿನ್ನೆಲೆಯಲ್ಲಿ ಇಂದಿನ ಪರಿಸ್ಥಿತಿ ಅವಲೋಕಿಸಿದರೆ ಉಪಯುಕ್ತಕಾರಿ. 'ಒಂದಿಷ್ಟು ಅರ್ಥಶಾಸ್ತ್ರ' ಮಾಲೆ ಪ್ರತಿ ತಿಂಗಳು ಬರುತ್ತಿರಲಿ. ಪ್ರಸಕ್ತ ಆರ್ಥಿಕ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುತ್ತಿರಲಿ.

ಬೆಂಗಳೂರು **ವಿ. ರಾಮಚಂದ್ರ ಶಾಸ್ತ್ರಿ**

ಸೆಪ್ಟೆಂಬರ್ ತಿಂಗಳ 'ಹೊಸತು'ವಿನಲ್ಲಿ ಶ್ರೀ ಕೆ. ಎಸ್. ಪಾರ್ಥಸಾರಥಿಯವರು ಬರೆಯುತ್ತಿರುವ 'ಒಂದಿಷ್ಟು ಅರ್ಥಶಾಸ್ತ್ರ' ಲೇಖನ ಮಾಲೆಯಲ್ಲಿ ಬರುತ್ತಿರುವ ಸರಳ ಕನ್ನಡದಲ್ಲಿಯ ವಿವರಣಾತ್ಮಕ ಹಣಕಾಸಿನ ವ್ಯವಹಾರ-ವ್ಯವಸ್ಥೆಯ ನಿರೂಪಣೆಯು ಸದ್ಯದ ಬೆಳವಣಿಗೆಯ, ಅಂದರೆ ಜಾಗತೀಕರಣ, ಮುಕ್ತ ಆರ್ಥಿಕತೆ ಇವುಗಳಿಂದಾಗಿ ಆರ್ಥಿಕತೆ ಯಾವ ದೆಸೆಗಳಲ್ಲಿ ಕವಲೊಡೆಯುತ್ತಿದೆ ಎಂಬುದನ್ನು ಸಮರ್ಥವಾಗಿ ಚಿತ್ರಿಸುತ್ತಿದೆ. 'ಉಂಡವನೇ ಜಾಣ, ಉಳಿತಾಯ ಮಾಡುವವನೇ ಮೊದ್ದ' ಎಂಬಂಥ ಸ್ಥಿತಿ ಒಂದೆರಡು ದಶಕಗಳಲ್ಲಿ ದಳ್ಳುರಿಯಂತೆ ಹಬ್ಬಿದ್ದು ಉಪಭೋಗವಾದವು ಉಳಿದೆಲ್ಲ ಗುರಿ, ನಿಶಾನೆಗಳನ್ನು ಮೆಟ್ಟಿ ನೆಲೆಯೂರಿದೆ, ತಲೆ ಎತ್ತಿದೆ. ಸರಕಾರವು, '...ನಮ್ಮ ನಾಡಿನಲ್ಲಿ ಇರುವಷ್ಟು ಉಳಿತಾಯವನ್ನು

ಸಂಗ್ರಹಿಸಿ ಅಭಿವೃದ್ಧಿಯತ್ತ ಹರಿಸುವುದು ಸೂಕ್ತ. ಆ ಕೆಲಸವನ್ನು ಅದು ಕಡೆಗಣಿಸಿದೆ ಎಂಬ ಪರಿಶೋಧನೆ ಚಿಂತನೀಯವೂ ಆಗಿದೆ ಹಾಗೂ ಒಂದು ಬಗೆಯಲ್ಲಿ ಪ್ರಶ್ನಾರ್ಹವೂ ಆಗಿದೆ. ಸ್ವಾತಂತ್ರ್ಯ ಗಳಿಸಿದ್ದ ಗಳಿಗೆಯಲ್ಲಿ ಮೀನೂ ಮಸಾನಿಯವರ 'ಮೈ ಇಂಡಿಯಾ' ಎಂಬ ಪುಟ್ಟ ಪುಸ್ತಕ ಪುಣ್ಯ ಗ್ರಂಥದಂತೆ ಪಠನೀಯವಾಗಿತ್ತು. ಸ್ವೇಚ್ಛೆಯ ಬಡತನದ (voluntary poverty) ಅಪೇಕ್ಷಣೀಯತೆ ಬಿಂಬಿಸಿದ್ದು. ಈಗ ೪-೫ ದಶಕಗಳಲ್ಲಿ ಮುಕ್ತ ಉಪಭೋಗವಾದ ಗರಿಗೆದರಿದೆ. ಸರಕಾರವನ್ನು ದೂಷಿಸುವುದೋ ಅಥವಾ ನಮ್ಮ ರಾಷ್ಟ್ರೀಯತೆಯ ವಿಶೇಷತೆಯಾದ ಧರ್ಮ (ಕರ್ತವ್ಯ ಪ್ರಜ್ಞೆ ಎಂಬ ಅರ್ಥದಲ್ಲಿ)ದ ಹಿಡಿತದಲ್ಲಿ ಅರ್ಥ, ಕಾಮಗಳ ಸಾಧನೆಯ ಸನಾತನ ಮೌಲ್ಯಕ್ಕೆ ತಿಲಾಂಜಲಿಯನ್ನಿತ್ತು ಬಾಚಿಕೊಂಡು ನುಂಗೋದೇ ಜೀವನದ ಸಾಫಲ್ಯ ಎಂಬ ಧೋರಣೆಗೆ ಇಂಬು ದೊರೆತಿರುವುದರಿಂದ ಪರಿಸ್ಥಿತಿ ಹದಗೆಡುತ್ತಿದೆ. ಉಪಭೋಗವಾದ, ಕಪ್ಪು ಹಣ, ಖೊಟ್ಟಿ ನೋಟು ಪ್ರಸರಣ, ಭ್ರಷ್ಟಾಚಾರ ಇವುಗಳಿಂದಾಗಿ ಅರ್ಥಶಾಸ್ತ್ರವು ತನ್ನ ಅರ್ಥವನ್ನೇ ಕಳೆದುಕೊಂಡಿದೆ. ಸರಕಾರಕ್ಕಿಂತ ಜನರ ಮಾನಸಿಕತೆ ಯಲ್ಲಿ ಬದಲಾವಣೆ ಆಗಬೇಕಾಗಿದೆ. ಹಣ ಪ್ರಸರಣ ದಿಂದಾಗಿ ಉಳಿತಾಯದ ಉಪಾಯ ಅಪಾಯಕಾರಿ ಎಂಬ ಭಾವನೆ ಬಲಿಯದಂತೆ ಆಗಬೇಕು. ಎಲ್ಲರೂ ಅದಕ್ಕೆ ಕೈಜೋಡಿಸಬೇಕಲ್ಲವೇ? ಯಮ, ನಿಯಮ, ಸಂಯಮ ಎಂದು ಹೇಳಿದಲ್ಲಿ ಪ್ರತಿಗಾಮಿತ್ವ.

'ಕಿ.ರಂ.' ಕುರಿತು ಜಿ.ಆರ್. ಅವರ ಅಪ್ರಕಟಿತ ಲೇಖನ ಈಗ ಶ್ರದ್ಧಾಂಜಲಿ ಲೇಖನವಾಗಿ ಪ್ರಕಟ ವಾಗಿದೆ. ಓದಿದಾಗ ಅನಿಸಿದ್ದು ಏನೆಂದರೆ, ಕಿ.ರಂ. ಅವರಂಥ ಬಹುಶ್ರುತ ವಿದ್ವಾಂಸರು ಎಷ್ಟೊಂದು ಪ್ರತಿಭಾಸಂಪನ್ನರಾಗಿದ್ದರಲ್ಲ ಎಂದು ಹೆಮ್ಮೆ ಉಂಟಾಯ್ತು. ಅವರು ಬರೆದದ್ದು ಕಡಿಮೆ. ಕಿ.ರಂ. ಆರೆಸ್ಸೆಸ್‌ನವರು ಹಂಚಿದ್ದ 'ಅಂಜುವೆದೆ ನಮ್ಮದಲ್ಲ' ಪುಸ್ತಕವನ್ನು ಸಿಟ್ಟಿನಿಂದ ಉಂಡೆ ಮಾಡಿ ನೆಲಕ್ಕೆ ಎಸೆದದ್ದು ಮಾತ್ರ ತಮಾಷೆ ಎನಿಸಿತು. ಬೇರೆಯವರ ವಿಚಾರ ಸರಣಿ, ಅಭಿಪ್ರಾಯವನ್ನು ತಿಳಿದುಕೊಳ್ಳದೇ ಇಂಥ ಅಸಹನೆ ತೋರ್ಪಡಿಸುವುದು ಚಿಂತಕರಿಗೆ, ವಿಚಾರವಂತರಿಗೆ ತರವೇ? ಅಭಿಪ್ರಾಯ ಭೇದ ಪ್ರಜಾಪ್ರಭುತ್ವವಲ್ಲವೇ?

ಬೆಳಗಾವಿ — ಅನಂತ ಕಲ್ಲೋಳ

**ಓದುಗರ ಗಮನಕ್ಕೆ**

ಸೆಪ್ಟೆಂಬರ್ ೨೦೧೦ರ ಸಂಚಿಕೆಯ 'ಪತ್ರಗಳು' ಅಂಕಣದಲ್ಲಿ ಶ್ರೀ ಕೆ. ಎಸ್. ಪಾರ್ಥಸಾರಥಿ ಅವರು ಬರೆದಿರುವ ಪತ್ರದಲ್ಲಿ ಒಂದು ವಾಕ್ಯ, ''ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಬೌದ್ಧಿಕ ಕಸರತ್ತಿನಲ್ಲಿ ತೀರ್ಮಾನವಾಗದಾಗ, ಚಳುವಳಿಗಳ ಅನುಭವದಲ್ಲಿ ಪರಿಹಾರವಾಗುತ್ತವೆ; ಮಾರ್ಕ್ಸ್‌ವಾದಿ ಚರ್ಚೆಗಳೊಳಗಿನ ವೈರುಧ್ಯ ಗಳು ಅಪರಿಹಾರ್ಯ ದ್ವಂದ್ವಗಳಲ್ಲಿವೆ ಎಂಬುದು ಮಾರ್ಕ್ಸ್‌ವಾದದ ಪ್ರಥಮ ಪಾಠ'' ಎಂದು ತಪ್ಪಾಗಿ ಮುದ್ರಿತವಾಗಿದೆ. ಓದುಗರು ಅದನ್ನು, ''ಸೈದ್ಧಾಂತಿಕ... ...ಅಪರಿಹಾರ್ಯ ದ್ವಂದ್ವಗಳಲ್ಲ ಎಂಬುದು ಮಾರ್ಕ್ಸ್‌ವಾದದ ಪ್ರಥಮ ಪಾಠ,'' ಎಂದು ಓದಿಕೊಳ್ಳಲು ವಿನಂತಿ.

ಸಂಪಾದಕ

## ಕಾದಂಬರಿಗಳನ್ನು ಗುರುತಿಸಿ

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿ ಸಾಹಿತ್ಯಾಸಕ್ತರಿಗೆ ವೈಚಾರಿಕ ಸಾಹಿತ್ಯವನ್ನು ಒದಗಿಸುತ್ತಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆ ಹದಿನೆಂಟು ವಾಸ್ತವಿಕ ಜಗತ್ತಿನ ವಿದ್ಯಮಾನಗಳ ಹಿನ್ನೆಲೆ ಹೊಂದಿರುವ ಕಾದಂಬರಿಗಳನ್ನು ಪ್ರಕಟಿಸಿದ್ದು, ಅವುಗಳಲ್ಲಿ ಕೆಲವು ಅನುವಾದಿತ ಕಾದಂಬರಿಗಳಿವೆ. ಅಲ್ಲದೆ 'ಹೊಸತು' ಮಾಸಿಕದ ಮುಖಾಂತರ ಕಳೆದ ಹತ್ತು ವರ್ಷಗಳಿಂದ ಓದುಗರಲ್ಲಿ ವೈಚಾರಿಕ ಕ್ರಾಂತಿಯನ್ನುಂಟುಮಾಡುವ ವಿವಿಧ ಲೇಖಕರ ಬರಹಗಳನ್ನು ಪ್ರಕಟಿಸುತ್ತಿದ್ದಾರೆ.

'ಹೊಸತು' ಪತ್ರಿಕೆಯ ಹತ್ತು ವರ್ಷ ತುಂಬಿದ ಹಿನ್ನೆಲೆಯಲ್ಲಿ ನವಕರ್ನಾಟಕ ಪ್ರಕಟಣಾ ಸಂಸ್ಥೆಯ ಹದಿನೆಂಟು ಕಾದಂಬರಿಗಳ ಪೈಕಿ ೧೬ ಕಾದಂಬರಿಗಳ ಹೆಸರುಗಳನ್ನು ಕೆಳಗಿನ ನೂರಂಕಣಗಳಲ್ಲಿರುವ ಅಕ್ಷರಗಳ ಮಧ್ಯೆ ನನ್ನ ಸೊಸೆ ಸೌಮ್ಯ ತನಗೆ ತಿಳಿದಂತೆ ಸೇರಿಸಿದ್ದಾಳೆ. ಅವುಗಳನ್ನು ಹುಡುಕಿ ಪಟ್ಟಿ ಮಾಡುವ ಮೂಲಕ ಓದುಗರ ಮನಸ್ಸಿಗೆ ಮುದನೀಡಿ 'ಹೊಸತು' ಪತ್ರಿಕೆಯ ದಶಮಾನೋತ್ಸವ ಆಚರಣೆಯನ್ನು ಅರ್ಥಪೂರ್ಣವಾಗಿ ಆಚರಿಸುವ ಆಸೆ. ನೀವು ಹುಡುಕಿ ಭಾಗವಹಿಸುವಂತೆ ಕೋರುವೆನು.

| | | | | | | | | | |
|---|---|---|---|---|---|---|---|---|---|
| ಸಂ | ತೋ | ಷ | ಕ್ತಿ | ಈ | ತ್ಯ | ನ | ರು | ರಾ | ಜೆ |
| ತ | ದ್ | ಹೀ | ಶ | ಶ್ವ | ಸ | ಶ್ಯ | ಥಾ | ವ್ಯಾ | ಹಾ |
| ನೀ | ಲಿ | ಕಂ | ದ | ರ | ಸ್ಪೃ | ಅ | ಳಿ | ಪಾ | ದ್ |
| ಬ | ರ | ಹ | ಕು | ಅ | ರುಂ | ಧ | ತಿ | ಸಂ | ಬ |
| ರೆ | ದ್ಯ | ಗ | ಡಿ | ಲ್ಲಾ | ಬ | ನು | ಪ | ಸಿ | ಯ |
| ರಂ | ಳು | ಜ್ಯೋ | ವಾ | ರಿ | ಜೆ | ದಿ | ನಾ | ನಿ | ಧೇ |
| ಬ | ವಿ | ತಿ | ಗಾ | ಕ್ಷಿ | ತ್ರ | ಪ | ಸೇ | ಮ | ಯೌ |
| ದಂ | ದ್ಯಾ | ಗಂ | ಗೆ | ದಂ | ಲ | ದ್ರೌ | ಹ | ಹಾ | ಯ |
| ಚಿ | ಲ್ಗಾ | ಶ | ರ | ಣ | ಕಾ | ಟು | ಸಿಂ | ತ್ಮೆ | ಜ |
| ವೋ | ಚ | ನ್ನ | ಬ | ಸು | ತ್ರಿ | ಸ | ದಾ | ವೋ | ದಿ |

ಉತ್ತರಗಳು :- ೧. ಈಶ್ವರ ಅಲ್ಲಾ, ೨. ಅಸ್ಪೃಶ್ಯರು, ೩. ಜೆಹಾದ್, ೪. ಸರಕುಗಳು, ೫. ಸಿನಿಮಹಾತ್ಮೆ, ೬. ನೀಲಿ ಕಂದರ, ೭. ವೋಲ್ಗಾ-ಗಂಗಾ, ೮. ಸಿಂಹ ಸೇನಾಪತಿ, ೯. ವ್ಯಾಳಿ, ೧೦. ಜಯ ಯೌಧೇಯ, ೧೧. ದಿವೋದಾಸ, ೧೨. ಬಸಂತಿ, ೧೩. ಗವಾಕ್ಷಿ, ೧೪. ಬದಿ, ೧೫. ದಂಗೆ, ೧೬. ದ್ರೌಪದಿ.

ಚಾಮರಾಜನಗರ — ಬಸವರಾಜ ಹುಡೇದಗಡ್ಡಿ

# ಹಬ್ಬಗಳನ್ನು ಹರಿದು ಮುಕ್ಕಿ...

ಜಯಪ್ರಕಾಶ್ ಶೆಟ್ಟಿ ಎಚ್.

ಮಳೆ ಬಿದ್ದು ಹಸಿರೆದ್ದ ಭೂಮಿ ತಣ್ಣಗೆ ಬದುಕಿನ ಭರವಸೆಯ ಕಿಡಿ ಹಚ್ಚುತ್ತಿದ್ದಂತೆಯೇ ಮಳೆಗಾಲದ ಬಿರುಸೂ ಕಡಿಮೆಯಾಗತೊಡಗುತ್ತದೆ. ಹಾಗೆಯೇ ಬದುಕಿನ ಸಂಭ್ರಮವನ್ನು ಗುಣಿಸಿಕೊಳ್ಳುತ್ತಾ ಕಾಲಮಾನದ ಬದಲಾವಣೆಯೊಂದಿಗೆ ಸಮಾಜಜೀವನದ ಬಹುಮುಖ್ಯ ಸಂಗತಿಯಾದ ಹಬ್ಬಗಳು ಒಂದೊಂದಾಗಿ ಮೈದೋರತೊಡಗುತ್ತವೆ. 'ಹಬ್ಬ' ಎಂಬ ಪದರೂಪಕ್ಕೆ ಸಂಸ್ಕೃತದ 'ಪರ್ವ'ವನ್ನು ಮೂಲರೂಪವೆಂದು ಪಿತೃಸ್ಥಾನದಲ್ಲಿ ನಿಲ್ಲಿಸಲಾಗುತ್ತದೆಯಾದರೂ 'ಹಬ್ಬ' ಕಟ್ಟಿಕೊಡುವ ದೇಸಿತನದ ಆತ್ಮೀಯ ಆವರಣಕ್ಕೆ ಅನ್ಯಪಿತೃಮೂಲವನ್ನು ಹುಡುಕಿಕೊಳ್ಳಬೇಕಾಗಿಲ್ಲ. ಮನೆ ಮತ್ತು ಊರುಗಳೆಂಬ ಉಭಯರೂಪಗಳಲ್ಲಿಯೂ ಬಹುತ್ವದ ನೆಲೆಯಲ್ಲಿ ಸಮುದಾಯ ಸಂಭ್ರಮವನ್ನು ಆಗುಗೊಳಿಸುವ ಈ ಹಬ್ಬಗಳೇ ದುಡಿಮೆಯ ನಡುವಿನ ಬಿಡುವಾಗಿ, ಆಹಾರ-ಆಲೋಚನೆಗಳ ಬದಲಾವಣೆ ಇಲ್ಲವೇ ವಿಸ್ತರಣೆಯಾಗಿ ತಮ್ಮ ಉಪಸ್ಥಿತಿಯನ್ನು ಋಜುಗೊಳಿಸಿಕೊಂಡು ಬಂದಿವೆ. ಕಾಲಮಾನದ ಏರಿಳಿತಕ್ಕೆ ಅನುಸಾರವಾಗಿ ಬದುಕಿನ ಏಕತಾನತೆಯನ್ನು ಕಡಿದು, ಹೊಸತನದೊಂದಿಗೆ ಬಂಧುತ್ವದ ನೆಲೆಗಳನ್ನು ಗಟ್ಟಿಗೊಳಿಸುತ್ತಾ ಬದುಕಿನ ಚೈತನ್ಯ ತುಂಬಿಕೊಳ್ಳುತ್ತಿದ್ದ ನಾಡಾಡಿಗಳ ಹಬ್ಬಗಳಿವು. ಈ ಆಚರಣಾ ಕೇಂದ್ರದಲ್ಲಿರುವ ಜನ ಅಕ್ಷರಿಕಲೋಕದ ಅಪರಿಚಿತ ಮಂದಿ. ಪುರಾಣ ಬರೆಯಲಾರದ, ಶಾಸ್ತ್ರ ಓದಿರದ ಈ ಜನ ತಮ್ಮ ದಟ್ಟಜೀವನಾನುಭವಗಳನ್ನು ಹೆಪ್ಪಾಗಿಸಿಕೊಂಡು ಆಚರಿಸುತ್ತಾ ಬಂದ ಹಬ್ಬಗಳ ಹಿಂದೆ ಪುರಾಣದ ನೆರಳಿಗಿಂತ ಬದುಕಿನ ಛಾಯೆಯಿದೆ. ದಟ್ಟವಾದ ಜೀವನಪ್ರೀತಿಯ ನಡುವೆ ಮಣ್ಣು ಮತ್ತು ದುಡಿಮೆಯ ಲೋಕವನ್ನೇ ತಮ್ಮ ಆರಾಧನಾ ಪ್ರಪಂಚವಾಗಿಸಿಕೊಂಡ ಇವರುಗಳ ಆಚರಣೆಗಳು ಕುಲಮೂಲೀಯ ಬೆಸುಗೆಯೊಂದಿಗೆ ಪ್ರತಿನಿಧೀಕರಣದ ನೆಲೆಯಲ್ಲಿಯೇ ಸ್ಥಾಪಿಸಲ್ಪಟ್ಟಿರುತ್ತವೆ. ತಮ್ಮ ದೈನಿಕದ ಹೋರಾಟ ಹಾಗೂ ಬದುಕಿನ ಇತಿಹಾಸದೊಂದಿಗೆ ತಳಕುಹಾಕಿಕೊಳ್ಳುವ ಮೂಲಕ ಪ್ರತಿನಿಧೀಕರಣದ ನೆಲೆಯಲ್ಲಿ ಸ್ಥಾಪಿತವಾಗಿರದ ಯಾವ ಹಬ್ಬಗಳೂ ಇವರ ಪಾಲಿಗೆ ಹಬ್ಬಗಳೆನಿಸುವುದೇ ಇಲ್ಲ. ಹಾಗಾಗಿ ರಾಷ್ಟ್ರೀಯ ಹಬ್ಬಗಳೆಂದು ಹಾರಾಡುವ ನಮ್ಮ ತಿರಂಗಧ್ವಜ ಸರ್ಕಾರಿ ಕಛೇರಿಗಳ ಮೇಲಲ್ಲದೆ ಹಸಿರು/ಕೆಸರುಗದ್ದೆಗಳ ನಡುವೆ ನಿಜವೆನಿಸುವುದೇ ಇಲ್ಲ.



ಕಲ್ಲು-ಮರ-ಮನೆ-ಮಣ್ಣುಗಳಲ್ಲಿ ಅತೀತವನ್ನು ಕಾಣುತ್ತಾ, ಆಕಾರ ತುಂಬಲಾರದ ನಿರಾಕಾರವನ್ನು ಸಂಕೇತಗಳಲ್ಲಿ ಬಚ್ಚಿಡುತ್ತಾ 'ಹಬ್ಬ'ವೆಂಬ ಪರಿಕಲ್ಪನೆಯನ್ನು ನಿರಂತರವಾಗಿ ಮುನ್ನಡೆಸಿಕೊಂಡು ಬಂದಿದ್ದಾರೆ. ಬಹುಸಂಸ್ಕೃತಿಯ ಮಾದರಿಯಲ್ಲಿ ಬರುವ ಈ ತೆರನಾದ ಹಬ್ಬಗಳು ಆಕಾರಕೇಂದ್ರಿತವಲ್ಲದವುಗಳು. ಇರುವುದನ್ನು ಇದ್ದ ಹಾಗೆಯೇ ಮಂತ್ರ-ತಂತ್ರಗಳಿಲ್ಲದೆಯೇ ಹೊಸತುಗೊಳಿಸಿಕೊಳ್ಳುವ ಆಚರಣಾ ಮಾದರಿಗಳಿವು. ಸೀದಾಸಾದಾ ಸಿಗುವ ಸೇಡಿ (ಜೇಡಿ)ಮಣ್ಣು ಚಿತ್ತಾರವಾಗಿ ಹೊಸತನವನ್ನೂ, ಕೊಟ್ಟಿಗೆಯ ದನದ ಸಗಣಿ ಗೋಮಯವಾಗಿ ಶುದ್ಧತೆಯನ್ನೂ ಒದಗಿಸಿಬಿಡುತ್ತವೆ. ಹೊತ್ತಿಸುವ ದೀಪ, ಎಬ್ಬಿಸುವ ಸಾಂಬ್ರಾಣಿ ಹೊಗೆಗಳೇ ಹರಕೆಯನ್ನು ರವಾನಿಸುವ ಮಾಧ್ಯಮಗಳಾಗುತ್ತವೆ. ಬಹುಮಟ್ಟಿಗೆ ವಿಧಿರೂಪದಲ್ಲಿ ಔಷಧೀಯ ಆಹಾರಗಳನ್ನು ಒಳಗೊಳ್ಳುವ ಜೊತೆಗೆ ಶಾಕಾಹಾರ-ಮಾಂಸಾಹಾರಗಳೆರಡಕ್ಕೂ ಸಮಾನವಾದ ಗೌರವವನ್ನು ಸಂದಾಯ ಮಾಡುತ್ತವೆ. ನಿಸರ್ಗ ಪರಿಕರಗಳಿಂದ ನಿಸರ್ಗವನ್ನೇ ಅಲಂಕರಿಸುವಂತೆ ಮೂರ್ತಗೊಳ್ಳುವ ಈ ಹಬ್ಬಗಳು ಸಮುದಾಯ ಸಂಬಂಧಕ್ಕೆ ಪೂರಕವಾದುವುಗಳು. ಊಟ-ಕೂಟಗಳ ಅವಕಾಶಗಳಾಗಿ ಮನೆ ಮತ್ತು ಊರುಗಳನ್ನು ಆವರಿಸಿಕೊಳ್ಳುವ ಇವುಗಳು ಬೀದಿಯ ಸಂಖ್ಯಾಪ್ರದರ್ಶನಕ್ಕಿಂತ ಸಮುದಾಯ ಸಂಬಂಧವೃದ್ಧಿಗೆ ವಿಶೇಷ ಒತ್ತು ನೀಡುತ್ತವೆ. ಹೊಸತಲೆಮಾರಿಗೆ ಹೊಸರುಚಿ ತಯಾರಿಯ ತಾಲೀಮು ನೀಡುವುದರ ಜೊತೆಗೆ ಪಾರಂಪರಿಕವಾದ ಆಹಾರ ಮತ್ತು ಜೀವನದೃಷ್ಟಿಯ ಪುನರ್ಮನನಕ್ಕೂ ಅವಕಾಶವೊದಗಿಸುತ್ತವೆ.

## ೨

ಯಾಜಮಾನ್ಯವು ನೆನಪುಗಳನ್ನೇ ಸಂಪೂರ್ಣವಾಗಿ ಅಳಿಸಿಹಾಕುತ್ತದೆ; ಅಂತಹವುಗಳೆಲ್ಲಾ ನಿರರ್ಥಕವೆಂದು ಸಾರುತ್ತದೆ. ನಾನು ಏನು ಹೇಳುತ್ತೇನೆ ಎಂಬುದು ಮುಖ್ಯವಾಗುತ್ತದೆ; ನೆನಪಿನ ಮೂಲಕವೇ ಪ್ರತಿರೋಧಾತ್ಮಕ ಕಾರ್ಯಗಳು ನಡೆಯಬೇಕು. ಈ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಸಂಗತಿಗಳಾಗಿ ಆವರ್ತನರೂಪದಲ್ಲಿ ಪ್ರಕಟಗೊಳ್ಳುತ್ತಿರುವ ನಮ್ಮ ನೆನಪಿನ ಸಂಸ್ಕೃತಿಯ ಭಾಗವಾದ ಹಬ್ಬಗಳು ವರ್ತಮಾನದಲ್ಲಿ ಎಂತಹ ಪಲ್ಲಟಗಳನ್ನು ಅನುಭವಿಸುತ್ತಿವೆ? ಹಬ್ಬಗಳು ಪರ್ವ/ಉತ್ಸವಗಳಾಗಿ ಪಿತೃಸಂಸ್ಕೃತಿಗೆ ಯಾವ ಮಾದರಿಯ ಆಯುಧವಾಗಿ ಸೇವೆಸಲ್ಲಿಸುತ್ತಿವೆ? ಸಮುದಾಯದ ಹಬ್ಬಗಳ ನಡುವೆ ಜೀರ್ಣೋದ್ಧಾರದ ರಾಜಕಾರಣಕ್ಕೆ ಒಳಗಾಗಿರುವ ಮತ್ತು ಅದರಿಂದ ಹೊರಗುಳಿದಿರುವ ಹಬ್ಬಗಳಾವುವು? ಆಕ್ರಮಣ ಇಲ್ಲವೇ ಪುನರುತ್ಥಾನವೆಂಬ ನೋವು-ಸುಖಗಳೆರಡನ್ನೂ ನೀಡಬಲ್ಲ 'ಸೊಗಸಾದ ಅತ್ಯಾಚಾರ'ಕ್ಕೆ ಒಳಪಟ್ಟ ಹಬ್ಬಗಳ ಆಹಾರ ಮಾದರಿಗಳಾವುವು? ಆಹಾರದ ರಾಜಕಾರಣಕ್ಕೂ ಈ ಮಾದರಿಯ ಹಬ್ಬಗಳ ಹೈಜಾಕಿಗೂ ಸಂಬಂಧವಿದೆಯೇ? ರೈತರು ನೇಣಿಗೆ ಬೀಳುತ್ತಿರುವುದಕ್ಕೂ ಇವರ ಮಕ್ಕಳ ಕೈಗೆ ರಶೀದಿ ಪುಸ್ತಕ ಕೊಟ್ಟು ಬೀದಿಯಲ್ಲಿ ಪೆಂಡಾಲ್ ಕಟ್ಟಿಸುತ್ತಿರುವುದಕ್ಕೂ ಸಂಬಂಧವಿರಲಿಕ್ಕಿಲ್ಲವೇ? ನೆಲ ಕಳೆದುಕೊಳ್ಳುವ ಜೊತೆಗೆ ನೆಲೆ ಕಳೆದುಕೊಳ್ಳುವುದಕ್ಕೆ ಬೇಕಾದ ಮಾನಸಿಕ ತಯಾರಿಯ

ಹೊಣೆಗಾರಿಕೆಯನ್ನು ಅವರ ತಲೆಗೇ ಕಟ್ಟುತ್ತಿರುವ ಬಗೆಯೇ ಇದು ? ಕುಲಮೂಲೀಯ ನೆಲೆಯಲ್ಲಿ ಧ್ರುವೀಕರಣದ ಜರೂರತ್ತಿರದೆ ಮನೆ ಹಾಗೂ ಊರ ಗುಡಿಗಳಲ್ಲಿ ಆಹ್ಲಾದದ ಎಳೆಗಳಷ್ಟೇ ಆಗುತ್ತಿದ್ದ ಹಬ್ಬಗಳು ಬಣ್ಣ, ಬಾವುಟ, ಮೂರ್ತಿ, ಭಾಷಣಗಳ ಆಕಾರ ತಳೆಯುತ್ತಾ, 'ಸ್ವ' ಮತ್ತು 'ಅನ್ಯ'ದ ಮಾದರಿಗಳ ವಿಲೇವಾರಿಗೆ ಮಾಧ್ಯಮಗಳಾಗುತ್ತಿರುವುದು ಜಾಗತೀಕರಣ ಚೋದಿಸುತ್ತಿರುವ ಬಹುತ್ವ ನಾಶದ ಪ್ರಕ್ರಿಯೆಯೆ ? ಈ ಸ್ಥಿತ್ಯಂತರದ ಸಾಂಸ್ಕೃತಿಕ ರಾಜಕಾರಣಕ್ಕೂ ಪರಂಪರಾಗತ ಬುದ್ಧಿಜೀವಿ ವರ್ಗಕ್ಕೂ ಇರುವ ಸಂಬಂಧ ಯಾವುದು ? ಈ ರಾಜಕಾರಣವು ನಮ್ಮ ತಳಮೂಲದ ಜನಸಮುದಾಯಗಳ ಸಾಮಾನ್ಯಪ್ರಜ್ಞೆಯನ್ನು ಯಾವುದಕ್ಕಾಗಿ ಹದಗೊಳಿಸುತ್ತಿದೆ ? ಹೀಗೆ ಹದಗೊಳಿಸಲು ದುಡಿಯು ತ್ತಿರುವ ಸಂಸ್ಥೆಗಳು ಯಾವುವು ? ಈ ಸಂಸ್ಥೆಗಳ ಮೂಲಕ ಕಟ್ಟಲಾಗುತ್ತಿರುವ ಧಾರ್ಮಿಕ ಸಂಕಥನದ ದಿಗ್ವಿಜಯಕ್ಕೆ ಸೈನಿಕರಾಗಿ ದುಡಿಯುತ್ತಿರುವವರಾರು ? – ಇಂತಹ ನೂರಾರು ಪ್ರಶ್ನೆಗಳು ಎದ್ದು ತನ್ನೆದುರಿಗಿನ ಅನಾಥರನ್ನೇ ಪ್ರಶ್ನಿಸುವಂತೆ ನಮ್ಮನ್ನೇ ತಿವಿಯುತ್ತವೆ.

ಮನೆಯ ಕಿಚ್ಚು (ಅಗ್ನಿ), ಕೊಟ್ಟಿಗೆಯ ಹಸುವಿನೊಂದಿಗೆ ಜನದೇವತೆಯೆಂಬ ಆವಾಸದ ಪವಿತ್ರ ವಲಯವೆಲ್ಲವೂ ದೈವೀಕರಣಕ್ಕೆ ಒಳಗಾಗಿ ಚೇತೋಹಾರಿಯಾದ ಭಾವನಾತ್ಮಕ ಸಂಬಂಧಗಳನ್ನು ನಿಜಗೊಳಿಸುತ್ತಿದ್ದ ಚೌತಿ, ನವರಾತ್ರಿಯಂತಹ ಮನೆಹಬ್ಬಗಳು, ಒಕ್ಕಲಿಲ್ಲದ ಮನೆಯನ್ನು ಅಗಲಿ ಹೊರನಡೆವ ಜನದೇವತೆ/ಮನೆ ದೇವರಂತೆ ಬೀದಿಬದಿಯ ಪೆಂಡಾಲ್‌ಗಳಲ್ಲಿ ಆಶ್ರಯ ಪಡೆಯುತ್ತಿವೆ. ನಿರಾಕಾರದ ಜಾಗದಲ್ಲಿ ಪುರಾಣ ಹಾಗೂ ಕಲ್ಪಿತ ಕಥನಗಳ ಹಿನ್ನೆಲೆಯಿಂದ ಮೂಡಿದ ಮೂರ್ತಿಗಳೂ, ಶಾಸ್ತ್ರೋಕ್ತ (?) ಪೂಜಾಕ್ರಮಗಳೂ, ಮೆರವಣಿಗೆಗಳೂ ನೆಲೆಗೊಂಡು ಜನಸಮುದಾಯವನ್ನು ಆಗ್ರಹಿಸುವ ಉಗ್ರ ಭಾಷಣಗಳ ತಾಣಗಳಾಗುತ್ತಿವೆ. ನಿಮ್ಮನ್ನೇ ಪ್ರೇಕ್ಷಕರನ್ನಾಗಿ ಮಾಡಿ ನಿಮ್ಮೆದುರಿಗೇ ಆಚರಿಸಲಾಗುವ ನಿಮ್ಮ ಹಬ್ಬಕ್ಕೆ ನೀವು ಕರ್ತವ್ಯವೆಂಬಂತೆ ವಂತಿಗೆ ನೀಡಿ ಸಾರ್ವಜನಿಕವಾಗಿ ದೇಶಭಕ್ತಿಯ ಕುರುಹಿಗೆ ಹೆಬ್ಬೆಟ್ಟು ಒತ್ತಬೇಕಾಗಿದೆ. ಒಂದು ವೇಳೆ, ''ನಮ್ಮ ಉಸಾಬರಿ ನಿಮಗೇಕೆ ? ನಮ್ಮ ಹಬ್ಬವನ್ನು ನಾವೇ ಆಚರಿಸುತ್ತೇವೆ'' ಎಂಬ ತಕರಾರು ನಿಮ್ಮದಾದರೆ, 'ನಿಮ್ಮ ತಾಯಿಯ ಶೀಲವನ್ನೇ ಹರಾಜಿಗಿಡುವ (....ರಿಗೆ ಹುಟ್ಟಿದವನು !)' ಅಘೋಷಿತ ನಾಮಫಲಕವನ್ನು ಪಡೆಯಲು ನೀವು ತಯಾರಿರಬೇಕು !

ಮನೆಹಬ್ಬ ಇಲ್ಲವೇ ಊರಹಬ್ಬಗಳು ಡಾ|| ಡಿ. ಆರ್. ನಾಗರಾಜ್ ಗುರುತಿಸುವಂತೆ, ''ಮನೆಯ ಹೆಂಗಸರ ಶೃಂಗಾರದಲ್ಲಿ ಮತ್ತು ಮಕ್ಕಳ ಸಂಭ್ರಮದ ಮಟ್ಟದಲ್ಲಿ ನಿಂತರೆ ಅದಕ್ಕೆ ಮಹಾ ಸೊಬಗಿರುತ್ತದೆ... ಆದರೆ ಇದೇ ಹಬ್ಬ ಹುಡುಗರ ಕೈಯಲ್ಲಿ ಕಾಸಿನ ಡಬ್ಬಗಳಾಗಿ, ರಶೀದಿ ಪುಸ್ತಕಗಳಾಗಿ, ದೊಡ್ಡ ಪೆಂಡಾಲ್‌ಗಳಾಗಿ, ಕಿವಿ ಒಡೆದು ಹಾಕುವ ಮೈಕಾಸುರನಾಗಿ, ಸಿಲ್ಕ್ ಸ್ಮಿತಾಳ ಪಿಕ್ಚರ್ ಹಾಕುವ ಮಂಟಪವಾಗಿ ಬಂದಾಗ ನರಕ'' ಎನಿಸಿಬಿಡುತ್ತವೆ. ಈ ನರಕ ಅನೇಕರ ಪಾಲಿನ ಸ್ವರ್ಗ ಮತ್ತು ಯೋಜಿತ ನಿರ್ಮಾಣ. ಇವು ಕೇವಲ ಹುಚ್ಚು ಹುಡುಗರ ಅಡ್ಡಾದಿಡ್ಡಿ ಆಲೋಚನೆಗಳ ಆಕಾರಗಳಲ್ಲ, ಇದರ ಹಿಂದೆ ವ್ಯವಸ್ಥಿತ ರಾಜಕಾರಣದ ತರ್ಕವಿದೆ. ಜನಸಂಸ್ಕೃತಿಯ ರೂಪಗಳನ್ನು ಅಲ್ಲಾಡಿಸುತ್ತಾ, ಆಚರಣಾತ್ಮಕ ಧರ್ಮದ ನಿರ್ವಾತ ಸೃಷ್ಟಿಯನ್ನು ಸಾಧ್ಯವಾಗಿಸಿ ಸಾಂಸ್ಥಿಕ ಧರ್ಮದ ನೆಲೆಗಳನ್ನು ಗಟ್ಟಿಗೊಳಿಸುವ ಈ ಉತ್ಸವಗಳು ಕೇವಲ ಕಾಲಮಾನದ ಉರುಬುಗಳಲ್ಲ. ಇಂತಹ ವ್ಯವಸ್ಥಿತ ಯೋಜನೆಯ ಭಾಗವಾಗಿ ವರ್ಷಂಪ್ರತಿ ಹೊಸ ಸೇರ್ಪಡೆಗಳೊಂದಿಗೆ ನಮ್ಮೆದುರೇ ಹೊಸ ರೂಪಗಳಲ್ಲಿ ಮೈದಳೆಯುತ್ತಿರುವ ಉತ್ಸವ ಸಂಸ್ಕೃತಿಯ ಬಹುಮುಖ್ಯ ಬಳುವಳಿಗಳನ್ನು ಈ ಮುಂದಿನಂತೆ ಚರ್ಚಿಸಬಹುದು.

**ದೇವರ ದಲ್ಲಾಳಿಗಳು**

ಬಸವಣ್ಣನ ವಚನವೊಂದರಲ್ಲಿ ಬರುವಂತೆ 'ಹಸಿವಾದಾಗುಂಬುದನು ಸತಿಯ ಸಂಭೋಗವನು' ತಾವೇ ಖುದ್ದು ಮಾಡುವ ಬದಲು ಇನ್ನಾರಿಗೋ ವಹಿಸಿಕೊಟ್ಟು ನೋಟಕರು ನೋಟಕರಾದ ನಿಷ್ಕ್ರಿಯ ಭಾಗೀದಾರಿಕೆಯಲ್ಲಿ ತಮ್ಮ ಪರಂಪರಾಗತ ನೆಲೆ ಕಳೆದುಕೊಂಡ ಅವಲಂಬಿತ ಸಮುದಾಯದ ನಿರ್ಮಾಣವಾಗುತ್ತದೆ. ಉತ್ಸವವಾಗುವಲ್ಲಿ ಸಂಭವಿಸಿಬಿಡುವ ಮೂರ್ತಿಕಲ್ಪನೆ ಹಾಗೂ ಶಿಷ್ಟ ಪೂಜಾ ಕ್ರಮದ ಆವರಣ ಸೃಷ್ಟಿಯಿಂದಾಗಿ ನಿರಾಕಾರ ಸಮಷ್ಟಿ ಕಲ್ಪನೆಯ ಬಹುತ್ವದ ನಾಶದೊಂದಿಗೆ ಆಚರಣೆಯ ಜೊತೆಗೆ ವ್ಯಕ್ತಿಗತ ನೆಲೆಯಲ್ಲಿ ಹೊಂದುತ್ತಿದ್ದ ಖಾಸಗಿ ಸಂಬಂಧಗಳು ನಾಪತ್ತೆಯಾಗುತ್ತವೆ. ಕೌಟುಂಬಿಕವಾಗಿ ತಮ್ಮ ಆರಾಧನಾ ಸಂಕೇತದೊಂದಿಗೆ ಸಾಧ್ಯವಾಗಿಸಿಕೊಳ್ಳುತ್ತಿದ್ದ ಸಂವಾದಾತ್ಮಕ ಅವಕಾಶದ ಗೈರುಹಾಜರಿಯಲ್ಲಿ ಆಚರಣೆಯ ಜೊತೆಗಿನ ಕ್ರಿಯಾತ್ಮಕ ಭಾಗೀದಾರಿಕೆ ಲುಪ್ತಗೊಂಡು ಜನ ಮತ್ತು ದೇವರ ನಡುವೆ ದಲ್ಲಾಳಿ (ಪುರೋಹಿತ)ಯ ಅವತಾರ ಏರ್ಪಟ್ಟು ಆಚರಣೆಯ ಕೇಂದ್ರವನ್ನು ಆತ ಆಕ್ರಮಿಸಿಕೊಳ್ಳುತ್ತಾನೆ. ಹೀಗೆ ಬಹು ಪುರುಷರಿಂದ ಪುರೋಹಿತನೆನ್ನುವ ಏಕವ್ಯಕ್ತಿಯ ಕೈಗೆ ಪೂಜಾಕೈಂಕರ್ಯವು ಹಸ್ತಾಂತರಗೊಳ್ಳುವ ಮೂಲಕ ವರ್ಣ ಶ್ರೇಣೀಕರಣದ ಊಳಿಗಮಾನ್ಯ ಸಾಮಾಜಿಕ ಸಂದರ್ಭವೇ ಪುನರಾವರ್ತಿತವಾಗುತ್ತದೆ. ಮನೆಯ ಆವರಣಕ್ಕಿಂತ ಭಿನ್ನವಾಗಿ ಪುರುಷ ಪ್ರಾಧಾನ್ಯತೆಯಲ್ಲಿ ದೇಗುಲ ಸಂಸ್ಕೃತಿಯ ಕಟ್ಟಳೆಗಳೇ ಚಾಲ್ತಿಗೆ ಬರುತ್ತವೆ. ಇದರಿಂದಾಗಿ ಮನೆಯ ಆವರಣದಲ್ಲಿರದ ಅರ್ಚನಾವಿಧಿಗಳು, ಸೇವೆಗಳು, ಪೂಜಾ ದರಗಳು ಜಾರಿಗೊಳ್ಳುವಂತಾಗುತ್ತವೆ. ಈ ಮೂಲಕ ಪಾರಂಪರಿಕ ಬುದ್ಧಿಜೀವಿ ವರ್ಗವಾದ ಪುರೋಹಿತ ಸಮುದಾಯಕ್ಕೆ ಇದೊಂದು ವಾರ್ಷಿಕ ಉತ್ಪಾದನಾಂಗವಾಗಿ ಪರಿಣಮಿಸುತ್ತದೆ. ಹೀಗೆ ಹಬ್ಬ ಆಸ್ತಿಕತೆಯ ಹೆಸರಿನಲ್ಲಿ ಉದ್ಯೋಗದ ಪರಿಸರವೊಂದನ್ನು ಸೃಷ್ಟಿಸಿ, ಯಾಜಮಾನ್ಯವನ್ನೂ ದಕ್ಕಿಸಿಕೊಡುತ್ತದೆ.

ಈ ಮಾದರಿಯ ಪಲ್ಲಟದಿಂದಾಗಿ ಬಹುತ್ವದ ನೆಲೆಯಲ್ಲಿ ಸಾಧ್ಯವಾಗುತ್ತಿದ್ದ ಸಾಂಸ್ಕೃತಿಕ ವೈವಿಧ್ಯದ ಕುರುಹುಗಳು ನಾಶಹೊಂದಿ, ಯಜಮಾನ ಶಕ್ತಿಗೆ ಬಹುಸಂಸ್ಕೃತಿಯ ಅಸ್ತಿತ್ವದ ಅಂಶಗಳನ್ನೆ ನಿರಾಕರಿಸುವ ಸಂದರ್ಭಗಳನ್ನು ಸೃಷ್ಟಿಸಿಕೊಳ್ಳಲು ಸಾಧ್ಯವಾಗುತ್ತದೆ. ಈ ಮೂಲಕ ದೇವಾಲಯವಿಲ್ಲದೆ ದೇವರನ್ನು ಅರ್ಚಿಸಿ ಹಗುರಗೊಳ್ಳುವುದಕ್ಕೆ ಇರುವ ಅವಕಾಶಗಳನ್ನು ಕಸಿದು ಬಿಡುವ ಉತ್ಸವಸಂಸ್ಕೃತಿ ನೆಲೆಗೊಂಡು ಧ್ರುವೀಕರಣಕ್ಕೆ ಬೇಕಾದ ಸಂಕೇತ ಮತ್ತು ಕುರುಹುಗಳನ್ನು ಉದ್ದೀಪಿಸಿ ಜನಸಮ್ಮತಿಯನ್ನು ಪಡೆದುಕೊಂಡುಬಿಡುತ್ತದೆ. ಹೀಗೆ ಬೀದಿಯ ಉತ್ಸವದ ಕಟ್ಟುವಿಕೆ ಸಮುದಾಯದ ಜುಟ್ಟನ್ನು ಉತ್ಸವ ಸಂಘಟಕರೆಂಬ ಕಾಸಿನಡಬ್ಬಿ ಇಲ್ಲವೇ ರಶೀದಿ ಪುಸ್ತಕದ ಒಡೆಯರುಗಳಾದ ಧರ್ಮರಕ್ಷಕರ ಕೈಗೆ ಹಸ್ತಾಂತರಿಸುತ್ತದೆ.

**ಬಣ್ಣ ಮತ್ತು ಬಾವುಟ**

ಉತ್ಸವದಲ್ಲಿ ಮಂದಿ ಬೀಡುಬಿಟ್ಟು ಬೀದಿಗಿಳಿಯುವುದರಿಂದಾಗಿ ಜನಪ್ರಿಯಧರ್ಮಕ್ಕೆ ಸಾಧುವೂ, ಸಾಧ್ಯವೂ

ಅಲ್ಲದ ಸಂಖ್ಯೆಯ ಬಾಹುಳ್ಯವನ್ನು ಕಂಡುಕೊಳ್ಳುವ ಶಿಷ್ಟ/ಸಾಂಸ್ಥಿಕಧರ್ಮ ತನ್ನ ಶಕ್ತಿರಾಜಕಾರಣಕ್ಕೆ ಅಸ್ತ್ರವನ್ನಾಗಿ ಇದನ್ನು ಬಳಸಿಕೊಳ್ಳುತ್ತದೆ. ಇದರಿಂದಾಗಿ ಬಹುಸಂಖ್ಯಾತ ತಳಸಮುದಾಯದ ಯುವಪೀಳಿಗೆ ತಮ್ಮದಲ್ಲದ ರಾಜಕೀಯ ಉದ್ದೇಶದ ಈಡೇರಿಕೆಗಾಗಿ ಹದಗೊಂಡ ಆಯುಧಗಳಾಗುತ್ತಾರೆ. ತಮ್ಮದೇ ಸಾಂಸ್ಕೃತಿಕ ಬಹುತ್ವದ ನೆಲೆಗಳನ್ನು ನಾಶಪಡಿಸಿಕೊಂಡು ಆಳುವ ವರ್ಗದ ಹಿತ ಕಾಯುವ ಊಳಿಗದ ಬಂಟರಾಗುವ ಇವರುಗಳನ್ನು ಧರ್ಮ, ದೇಶಗಳೆಂಬ ಅಮಲಿನಲ್ಲಿ ಅದ್ದಲಾಗುತ್ತದೆ.

ಉತ್ಸವದ ಧಾರ್ಮಿಕ ವಿಧಿಯ ನೆರವೇರಿಕೆಗೆ ಬೇಕಾದ ಆರ್ಥಿಕ ಬಲ ಮತ್ತು ಮಾನವಬಲದ ಕ್ರೋಢೀಕರಣಕ್ಕೆ ರಚಿತವಾಗುವ ಉತ್ಸವ ಸಮಿತಿಗಳೆಂಬ ಪರಿಕಲ್ಪಿತ ಸಂಘಟನಾ ಸ್ವರೂಪದೊಳಗೆ ಪಡೆಯುವ ಪದಾಧಿಕಾರ ಎಂಬ ಪಾಲಿನಲ್ಲಿ ಸಂಭ್ರಮಿಸುವ ಯುವಪಡೆ ಯಾಜಮಾನ್ಯದಲ್ಲಿ ಪಾಲುಪಡೆದಂತೆ ಮೈಮರೆಯುತ್ತದೆ. ಉತ್ಸವದ ಪರಿಕರ ಸಂಗ್ರಹಣೆ ಮತ್ತು ನಿರ್ವಹಣೆಯ ಈ ಊಳಿಗದ ಉರುಬಿನಲ್ಲಿಯೇ 'ಕಲ್ಪಿತ ಕುಲ' ಮತ್ತು 'ಕಲ್ಪಿತ ಮಾತೃಭೂಮಿ'ಯ ರಕ್ಷಣೆಯ ಆರಕ್ಷಕರಾಗಿ ವೇಳೆವಾಳಿತನಕ್ಕೆ ತಮ್ಮನ್ನು ತೆತ್ತುಕೊಳ್ಳುವಂತೆ ಪಾರಂಪರಿಕ ಯಾಜಮಾನ್ಯ ಕೇಂದ್ರಗಳು ಈ ಯುವಪಡೆಯ ಪ್ರಜ್ಞಾಕೇಂದ್ರವನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುತ್ತವೆ. ಇದರ ಪರಿಣಾಮವಾಗಿ ಕಲ್ಪಿತ ಸಂಗತಿಗಳ ಲಾಂಛನವಾದ ಬಣ್ಣ ಮತ್ತು ಬಾವುಟಗಳ ವಾರಸುದಾರಿಕೆ ಹೊಂದಿ, ತಮ್ಮ ಪಾರಂಪರಿಕ ವೈವಿಧ್ಯದ ಹಿರಿತನ ಮತ್ತು ಮೌಲ್ಯಗಳನ್ನು ನಿರಾಕರಿಸಿಕೊಂಡ 'ಸಮಗ್ರಕುಲ'ವಾಗಿ ಈ ಯುವಪಡೆ ಮಾರ್ಪಾಡುಗೊಳ್ಳುತ್ತದೆ. ಈ ಹಂತದಲ್ಲಿ ಇವರಿಗೆ ಎದುರಾಳಿಗಳನ್ನು ಕಲ್ಪಿಸಿಕೊಡುವ ಆಳುವ ವರ್ಗದ ರಾಜಕಾರಣ, ಆ ಮೂಲಕವಾಗಿ ಇವರುಗಳು ರಕ್ಷಿಸಬೇಕಾದ 'ಸ್ವ' ಮತ್ತು ಆಕ್ರಮಣ ಮಾಡಬೇಕಾದ 'ಅನ್ಯ'ಗಳನ್ನು ಗೊಂದಲಕ್ಕೆಡೆ ಇಲ್ಲದಂತೆ ವಿಭಜಿಸಿ ಒಪ್ಪಿಸಿಬಿಡುತ್ತದೆ. ಇಂತಹ ಸ್ಥಿತಿಯಲ್ಲಿ ಗಡಿಕಾಯುವ ಸೈನಿಕರಂತೆ ಬದಲಾಗುವ ಜನಸಂಸ್ಕೃತಿಯ ಭಾಗವೊಂದು ಶ್ರದ್ಧೆಯ ಜಾಗದಲ್ಲಿ ದಿಢೀರ್ ಕಾರ್ಯಾಚರಣೆಯ ಕಟ್ಟಾಳುಗಳ ತಂಡವಾಗಿ ತನ್ನನ್ನು ನಿರೂಪಿಸಿಕೊಂಡು, ಸಂಸ್ಕೃತಿಯ ಪಾಠ ಹೇಳುವ ಬೋಧಕವೂ ಆಗಿಬಿಡುತ್ತದೆ. ತಮ್ಮ ತಮ್ಮ ಮನೆಯೊಳಗಡೆ ಹಿರಿಯರಿಂದ ಸಂಸ್ಕೃತಿಯ ಪಾಠಕಲಿಯಬೇಕಾಗಿದ್ದ ಇವರುಗಳು ಕಲಿಯಬೇಕಾದುದನ್ನು ಕಲಿಯದೆ, ಕೇಳಿಸಿಕೊಂಡದ್ದನ್ನು ಗಿಳಿಪಾಠವಾಗಿ ಹಂಚುವ 'ಪ್ರಚಾರಕ'ರಾಗಿ ಬಿಡುತ್ತಾರೆ. ಇವರಿಗೆ ಸಂಸ್ಕೃತಿಯ ಪಾಠ ಹೇಳಬೇಕಾಗಿದ್ದ ಮನೆಯ ಹಿರಿಯರು ಮೂಲೆಗೆ ತಳ್ಳಲ್ಪಟ್ಟು 'ಅಪರಿಚಿತ ಪಠ್ಯ'ವನ್ನು ತಾವೂ ಕಲಿಯಬೇಕಾದ ದುರಂತಕ್ಕೊಳಗಾಗುತ್ತಿದ್ದಾರೆ. ಅಧಿಕಾರ ಕೇಂದ್ರದೊಳಗಡೆ ಪ್ರವೇಶ ಪಡೆಯದೆಯೂ ಅಧಿಕಾರದ ರುಚಿಯುಂಡವರಂತೆ ಸಂಭ್ರಮಿಸುವ ಕಾಲಾಳುಗಳ ಈ ಸಮರೋತ್ಸಾಹ ಜಾತಿಪದ್ಧತಿಯ ಮೇಲ್ತುದಿಯಲ್ಲಿರುವ ವರ್ಗಕ್ಕೆ ಒಂದು ಉತ್ತಮ ಸಾಮಾಜಿಕ ಬಂಡವಾಳವಾಗಿ ಪರಿಣಮಿಸುತ್ತಿದೆ.

**ಹೆಂಗಸರು ಹಿಂಬದಿಗೆ**

ಹಬ್ಬ ಎಂದಾಗ ನೆನಪಾಗುವುದು ಮನೆಯೊಳಗಿನ ಪ್ರಯೋಗಶಾಲೆಯಾದ ಅಡುಗೆಮನೆಯ ಮೂಲಕ ಅದನ್ನು ಆಗುಗೊಳಿಸುವ ಹಾಗೂ ಅದರ ಏರಿಳಿತಗಳೊಂದಿಗೆ ಸಂಭ್ರಮಿಸುವ ಹೆಣ್ಮಕ್ಕಳು. ಸಾಂಸ್ಕೃತಿಕ ವೈವಿಧ್ಯದ ಬಹುತ್ವವನ್ನು ಜೀವಂತವಾಗಿರಿಸಿ ತಾವು ಸೇರಿದ ಜಾತಿ, ಸಮುದಾಯ, ಭಾಷೆಗಳ ಸ್ಮೃತಿಗಳನ್ನು ಹಬ್ಬ-ಹರಿದಿನಗಳ ಮೂಲಕ ಕಾಪಿಟ್ಟುಕೊಂಡು ಬರುವ ಮಹಿಳೆಯರನ್ನು, ಮನೆಯಿಂದ ಆಚೆಬೀದಿಯಲ್ಲಿ ಸ್ಥಾಪಿತವಾಗುವ ಉತ್ಸವಸಂಸ್ಕೃತಿ ಬಹುಮಟ್ಟಿಗೆ ನಿರಾಕರಿಸಿಬಿಡುತ್ತದೆ. ಆವಾಸದ ನೆಲೆಯನ್ನು ಪವಿತ್ರೀಕರಿಸಿಕೊಂಡು ನಿರಾಳವಾಗುತ್ತಿದ್ದ ಅವರ ಖಾಸಗಿ ಅವಕಾಶಗಳನ್ನು ಉತ್ಸವ ರೂಪಗಳ ವಿಜೃಂಭಣೆ ಖಾಲಿಯಾಗಿಸುತ್ತದೆ. ಎಲ್ಲಾ ಬಹುತ್ವ ನಾಶದ, ಏಕಸಂಸ್ಕೃತಿ ವಕ್ತಾರಿಕೆಯ ಪ್ರಧಾನ ಅಂಶವೆಂದರೆ ಅದರ ಪಿತೃಪ್ರಧಾನಗುಣ ಮತ್ತು ಮಹಿಳೆಯರ ದೂರೀಕರಣ. ಆಚರಣಾಕೇಂದ್ರದಿಂದ ಮಹಿಳೆಯರ ದೂರೀಕರಣವನ್ನು ಸಾಧಿಸುವ ಬೀದಿಯ ಉತ್ಸವದಲ್ಲಿ ಹಬ್ಬದ 'ಯಜಮಾನ ಕೇಂದ್ರ'ವು ಲಿಂಗಾಧಾರಿತವಾಗಿ ಹೆಣ್ಣಿನಿಂದ ಗಂಡಿಗೆ ಪಲ್ಲಟಗೊಳ್ಳುತ್ತದೆ. ಹಬ್ಬವನ್ನು ಆಚರಿಸಬೇಕಾದ ಹೆಣ್ಣು ಉತ್ಸವವನ್ನು ನೋಡಬರುವ ನಿಷ್ಕ್ರಿಯ ಪ್ರೇಕ್ಷಕಳಾಗಿ, ಕುಲಮೂಲೀಯವಲ್ಲದ ಆಚರಣಾ ಸಂಕೇತದ ಕಲ್ಪಿತ ಭಕ್ತಳಾಗಿ, 'ಕಲ್ಪಿತ ಕುಲ' ಮಾದರಿಯಲ್ಲಿ ಮುಂದೊಡ್ಡಲಾಗುವ 'ಸ್ತ್ರೀತ್ವ'ದ ಅಚ್ಚಿನೊಳಗೆ ಪ್ರವೇಶಿಸಿ, ಅಪಕಲ್ಪಿತ ಮುಸುಕಿನಿಂದ ಮುಚ್ಚಲ್ಪಡುತ್ತಾಳೆ. ಹೀಗೆ ಏಕತ್ರಗೊಂಡು ಮುಂದಿಡಲ್ಪಡುವ ಸಾಂಸ್ಕೃತಿಕ ಪರಿಭಾಷೆಯ ನಿರ್ದಿಷ್ಟ ಮಾದರಿಯಾಗಿ ವಿಶಾಲ ಭೌಗೋಳಿಕ ವ್ಯಾಪ್ತಿಯೊಂದಿಗೆ ಮಿಲನಗೊಳ್ಳುವಂತೆ ಭಾಸವಾಗುತ್ತಲೇ, ತನ್ನ ಸ್ಥಳೀಯತೆಗೆ ಪರಕೀಯಳಾಗುವ ಅತಂತ್ರತೆಯನ್ನು ಅನುಭವಿಸುವಂತಾಗುತ್ತಾಳೆ. ಈ ಮೂಲಕ ತಾನು ಸ್ಥಳೀಯವಾಗಿ ಕಾಪಿಟ್ಟುಕೊಂಡು ಬಂದ ಹಬ್ಬದ ಭಾಷಿಕ ಆವರಣ ಹಾಗೂ ತನಗೇ ವಿಶಿಷ್ಟವಾದ ಅಭಿವ್ಯಕ್ತಿಲೋಕದ ಖಾಲಿತನದಲ್ಲಿ ಯಜಮಾನ ಸಂಸ್ಕೃತಿಯ ಹೆಜಿಮನಿಗೆ ತಲೆಬಾಗಲೇಬೇಕಾದ ಸನ್ನಿವೇಶ ನಿರ್ಮಾಣಗೊಳ್ಳುತ್ತದೆ. ಮುಖ್ಯವಾಹಿನಿಯಲ್ಲಿ ಇವರು ಪಡೆಯುವ ಪಾಲೂ ಯಜಮಾನ ಸಂಸ್ಕೃತಿಯಿಂದ ನಿರ್ದೇಶಿತವಾದುದೇ ವಿನಾ ಅದು ಮಹಿಳೆಯರ ಕ್ರಿಯಾತ್ಮಕ ಭಾಗೀದಾರಿಕೆಯಲ್ಲ.

'ಕಲ್ಪಿತ ಕುಲ' ಕಲ್ಪನೆಯ ಮೂಲಕ ತನ್ನ ರಾಜಕೀಯ ಉದ್ದೇಶವನ್ನು ಈಡೇರಿಸಿಕೊಳ್ಳುವ ಕೋಮುವಾದಿ ಸಂಕಥನವೊಂದು ಸಂಸ್ಕೃತಿಯ ಜಾಗದಲ್ಲಿ ಸಂಸ್ಕೃತಿಗಳನ್ನು ಮತ್ತು ಅವುಗಳ ಚಲನಶೀಲತೆಯನ್ನು ನಿರಾಕರಿಸುತ್ತದೆ. ಸಿದ್ಧಮಾದರಿಯ ಸಂಸ್ಕೃತಿ ಪ್ರತಿಪಾದನೆಗೆ ಮಹಿಳೆಯರೇ ಅದರ ಪಾಲಿನ ಬಹುದೊಡ್ಡ ಆತಂಕ. ಮಹಿಳೆಯರ ಸಾಂಸ್ಕೃತಿಕ ಕ್ರಿಯಾಶೀಲತೆ ಪುರುಷಾಧಿಕಾರಕ್ಕೆ ಎದುರಾಳಿಯೂ ಆಗಲಿರುವುದರಿಂದಾಗಿ, ಕಾಲ್ಪನಿಕವಾದ ಮಾತೆಯರ ಸ್ಥಾನನೀಡಿ ವಾಸ್ತವಿಕವಾಗಿ ಪೂರ್ಣ ಕಡೆಗಣಿಸಿಬಿಡುವ ಅದರ ತಂತ್ರಗಾರಿಕೆಗೆ ಉತ್ಸವಾಚರಣೆ ಪೂರಕವಾಗುತ್ತದೆ. ಈ ತೆರನಾದ ಸಾಂಸ್ಕೃತಿಕ ಬಹುತ್ವವನ್ನು ನಿಷ್ಕ್ರಿಯಗೊಳಿಸುತ್ತಾ, ಪ್ರತಿಗಾಮಿ ಶಕ್ತಿಗೆ ಗತಪರಂಪರೆ ಎಂಬ ಏಕೀಕೃತ ಆಕಾರವೊಂದನ್ನು ಮುಂದಿಡುವ ಸಲುವಾಗಿ ಮಹಿಳಾ ಅಭಿವ್ಯಕ್ತಿಯ ನೆಲೆಗಳನ್ನು ನಾಶ ಮಾಡುವ ಹುನ್ನಾರಗಳನ್ನು ಕಾರ್ಯರೂಪಕ್ಕೆ ಇಳಿಸುತ್ತದೆ.

**ದಾಸ್ಯದ ಪಲ್ಲಕ್ಕಿ**

ಹಬ್ಬಗಳನ್ನು ಉತ್ಸವವೆಂಬ ಸಾರ್ವಜನಿಕ ಅವಕಾಶ (public sphere)ವಾಗಿ ಪರಿವರ್ತಿಸಿ ತನ್ನ ವರ್ಗಹಿತವನ್ನು ಕಾಯುವ ಸಲುವಾಗಿ ಈ ಸಾರ್ವಜನಿಕ ಅವಕಾಶದ ಕೇಂದ್ರವನ್ನು ವಶಪಡಿಸಿಕೊಳ್ಳಲು ಬೇಕಾದ ತಾತ್ವಿಕ ನೆಲೆಗಳನ್ನು ಪರಂಪರೆಯ ಮೂಲದ್ರವ್ಯದ ಮೂಲಕವೇ ಕಟ್ಟಿಕೊಳ್ಳಲಾಗುತ್ತದೆ. ಹೀಗೆ ಪರಂಪರೆಯ ಮೂಲದ್ರವ್ಯದ ಮೂಲಕವೇ ತನ್ನ ಮಾದರಿಯನ್ನು ಎಲ್ಲರ ಮಾದರಿ ಎಂಬಂತೆ ಒಪ್ಪಿಗೆಯನ್ನು ಉತ್ಪಾದಿಸುವ ಸಂಸ್ಕೃತ ಪರಂಪರೆ ಯಜಮಾನನಾಗಿ ಎಲ್ಲರ ಪ್ರತಿನಿಧೀಕರಣವನ್ನು ಹೊಂದಲು ಯತ್ನಿಸುತ್ತದೆ. ವರ್ಗ, ವರ್ಣ, ಜಾತಿಗಳಲ್ಲಿ ಹಂಚಿಹೋದ ನಮ್ಮ ಸಾಮಾಜಿಕ ವಲಯದಲ್ಲಿ ಯಾವೊಂದು ಆಚರಣೆಯೂ ಏಕಾಕೃತಿಯ ಮಾದರಿಯದಾಗಿರಲು ಸಾಧ್ಯವಿಲ್ಲ. ಉದಾಹರಣೆಗೆ, ಚೌತಿ ನನ್ನವರ ಪಾಲಿಗೆ ಕದಿರು/ಬೆಳೆಯ ಬಸಿರಿಗೆ ಬಡಿಸುವ ಸಣ್ಣಬಯಕೆ ಶಾಸ್ತ್ರದಂತೆ 'ಸಣ್ಣಹೊಸ್ತು' ಎಂದೇ ಪರಿಚಿತ. ಹಾಗೆಯೇ ನಾಡಹಬ್ಬವೆಂದೇ ಡಂಗುರ ಬಾರಿಸಲಾಗುತ್ತಿರುವ ನವರಾತ್ರಿ ನಮ್ಮಲ್ಲಿ ಸರ್ವೇಸ್ರಮ್ಮ ಹಾಗೂ ನಾಥಪಂಥೀಯ ಸೊಗಡಿನ ಜೋಗಿಯ ಆರಾಧನೆ. ಬಸಿರಾದ ಭೂಮಿಯ ಹಸುರಿಗೆ ಸಂಬಂಧಿಸಿ ನಡೆಯುವ ಚೌತಿಯು ಮೂರ್ತಗೊಂಡು ಪಾರಂಪರಿಕವಾಗಿ ಕೃಷಿಕರ ಪಾಲಿಗೆ ಅಪಹರಿಸಲ್ಪಟ್ಟ ಅಕ್ಷರಸಂಸ್ಕೃತಿಯ ಅಧಿದೇವತೆಯಾದ ವಿದ್ಯಾಗಣಪತಿಯಾಗುವುದಿಲ್ಲ, ಬದಲು ನಿರಾಕಾರವಾಗಿ ಸಾಕಾರಗೊಳ್ಳುತ್ತದೆ. ಅದೇ ರೀತಿಯಲ್ಲಿ 'ನಮ್ಮ ಸರ್ವೇಸ್ರಮ್ಮ' ಸಾಮಾನ್ಯರ ಶಿಕ್ಷಣದ ಹಕ್ಕು ಕಸಿಯಲು ರೂಪಕವಾದ ದಿವಿಜ ಸಂತತಿಯ ಶಾರದಾಂಬೆಯಾಗುವುದಿಲ್ಲ. ಚೌತಿಯ ಸಣ್ಣಹೊಸ್ತನ್ನು ಗಣೇಶೋತ್ಸವವಾಗಿ, ನವರಾತ್ರಿಯನ್ನು ಶಾರದೋತ್ಸವವಾಗಿ ಆಚರಿಸಿ ವಿಗ್ರಹದ ಪಲ್ಲಕ್ಕಿ ಹೊತ್ತು, ಹಣೆಯ ಮೇಲೆ ಭಯಂಕರವಾದ ನಾಮ ಹಾಕಿಕೊಳ್ಳುವ ಪ್ರತಿಯೊಬ್ಬ ಶೂದ್ರ ಯಾ ದಲಿತನೂ, ತನ್ನ ಪರಂಪರೆಯ ಕಡೆ ಮುಖ ಮಾಡಿ ಈ ರಾಜಕಾರಣವನ್ನು ಅರ್ಥಮಾಡಿಕೊಂಡಾಗ ತನ್ನ ದಾಸ್ಯವನ್ನು ತಾನೇ ಸಂಭ್ರಮಿಸಿಕೊಳ್ಳುತ್ತಾ, ಅದರ ನಿರ್ಮಾತೃಗಳ ಪಲ್ಲಕ್ಕಿ ಹೊತ್ತುದರ ಅರಿವು ಹೊಂದಿಯಾನು. ಯಾಕೆಂದರೆ ಮತೀಯ ಮೂಲಭೂತವಾದದ ನಿಜವಾದ ಗುರಿಗಳನ್ನು ಗುರುತಿಸದೆ, ಅದನ್ನು ಕಲ್ಪಿತ 'ಅನ್ಯ'ವೊಂದರ ವಿರುದ್ಧದ ಹೋರಾಟದ ದಾರಿಯೆಂದು ನಂಬಿಕೊಂಡು, ''ಅದರ ಊಳಿಗಕ್ಕೆ ನಿಲ್ಲುವ ಎಲ್ಲಾ ದಲಿತರು ಮತ್ತು ಕೆಳಜಾತಿಯ ಜನರಿಗೆ, ಅದು ಎಲ್ಲ ಜಾತಿ, ಧರ್ಮಗಳಲ್ಲಿ ಉದಾರ ಮನಸ್ಸಿನ, ಆರೋಗ್ಯಕರವಾಗಿ ಚಿಂತಿಸುವ ಜನರ ಶತ್ರು ಎಂಬುದು ಅರಿವಾಗಬೇಕಿದೆ. ಅದು ಅರಿವಾಗದೇ ಇರುವುದು ನಮ್ಮ ಕಾಲದ ದುರಂತವಾಗಿದೆ.''

**ಸಂಪತ್ತಿನ ಮೆರವಣಿಗೆ**

ಸಾಮಾನ್ಯವಾಗಿ ಈ ಬೀದಿ ಉತ್ಸವಗಳು ಧಾರ್ಮಿಕ ಆವರಣದಂತೆ ಬಿಂಬಿತವಾದರೂ, ಅವು ತಮ್ಮ ಚಟುವಟಿಕೆಯನ್ನು ಸ್ಪರ್ಧೆ, ಸನ್ಮಾನ ಮುಂತಾದ ಸಾಮಾಜಿಕ ಸಂದರ್ಭಗಳಾಗಿ ವಿಸ್ತರಿಸಿಕೊಳ್ಳುತ್ತವೆ. ಸಮೂಹವನ್ನು ಪೆಂಡಾಲ್ ಕಡೆಗೆ ಸೆಳೆಯಲು ಸಹಕಾರಿಯಾಗುವ ಇವುಗಳು ಸಹಜವಾಗಿ ಖರ್ಚು ಬೇಡುತ್ತವೆ. ಅದ್ದೂರಿತನವನ್ನೇ ಮೆರೆಯುವ ಉದ್ದೇಶದ ಈ ಉತ್ಸವಗಳು ಹಬ್ಬಗಳಂತೆ ಹಾಸಿಗೆಯಿದ್ದಷ್ಟು ಕಾಲುಚಾಚುವ ಬದಲು, ಸಿಕ್ಕ ಸಿಕ್ಕ ಹಾಸಿಗೆ, ಚಾಪೆಗಳ ಮೇಲೆಲ್ಲಾ ಮಲಗಲು ಒತ್ತಾಯಿಸುತ್ತವೆ. ವಂತಿಗೆ ಪುಸ್ತಕದ ಮೂಲಕ ಕಂಡವರ ದರೋಡೆ

ನಡೆಸುವ ಜೊತೆಗೆ, ಖರ್ಚು ಭರಿಸುವ ಉದಾರಿಗಳ ಹುಡುಕಾಟವೂ ನಡೆದು ಸಮಾಜದ್ರೋಹಿಗಳೂ ಆಗಿರಬಹುದಾದ 'ಧನಿಕ'ರಿಗೆ ಸಾರ್ವಜನಿಕ ಅವಕಾಶ ಒದಗಿಸುತ್ತದೆ. ಧರ್ಮ ಮತ್ತು ಧನದ ಅಪವಿತ್ರ ಮೈತ್ರಿಯಲ್ಲಿ ನೈತಿಕ ಅಧಃಪತನಕ್ಕೂ ಕೊಡುಗೆ ನೀಡುವ ಬೀದಿಗೆಬಿದ್ದ ದೇವರು ವಾಣಿಜ್ಯಿಕ ಉದ್ದೇಶಕ್ಕೆ ಮಾಧ್ಯಮವಾಗುತ್ತಾ, ಪ್ರತಿಷ್ಠೆ ಮತ್ತು ಸಾಮುದಾಯಿಕ ಅಸಹನೆಗೆ ದಾರಿತೋರುತ್ತದೆ.

**ಸಾಕ್ಷರಲೋಕಕ್ಕೆ ರಾಕ್ಷಸಯಾತ್ರೆ**

ನಾರಾಯಣಗುರುಗಳ ಚಳವಳಿಯಲ್ಲಿ ದೇಗುಲ ಪ್ರವೇಶ, ಪರ್ಯಾಯ ಸೃಷ್ಟಿಯ ಜೊತೆಗೆ ಅತಿ ಹೆಚ್ಚಿನ ಹೋರಾಟ ನಡೆದುದು ದಲಿತ ಮತ್ತು ಕೆಳಜಾತಿಯ ಮಕ್ಕಳ ಶಾಲಾಪ್ರವೇಶಕ್ಕೆ ಸಂಬಂಧಿಸಿದಂತೆ. ಅವರು ಹೆಚ್ಚು ಪ್ರತಿರೋಧವನ್ನು ಎದುರಿಸುವಂತಾದುದು ಈ ಶಾಲಾಪ್ರವೇಶಕ್ಕೆ ಸಂಬಂಧಿಸಿದ ಹೋರಾಟಕ್ಕೆ. ಈ ತಿಳುವಳಿಕೆಯ ಬೆಳಕಿನಲ್ಲಿಯೇ ಇಂತಹ ಉತ್ಸವಗಳಿಗೆ ತಾತ್ಕಾಲಿಕ ವೇದಿಕೆಗಳಾಗಿ ತೆರೆದುಕೊಳ್ಳುತ್ತಿರುವ ಪ್ರಾಥಮಿಕ ಶಾಲಾ ಅಂಗಣಗಳು ಮತ್ತು ಶಿಕ್ಷಕರಲ್ಲಿಯ ಭಾಗೀದಾರಿಕೆಯ ಉತ್ಸಾಹವನ್ನು ಸೂಕ್ಷ್ಮವಾಗಿ ಗಮನಿಸುವುದೊಳಿತು. ಖ್ಯಾತ ವೈಚಾರಿಕ ಚಿಂತಕ ವಿ. ಆರ್. ನಾರ್ಲಾ ಅವರ ಅಭಿಪ್ರಾಯದಂತೆ, ''ನಮ್ಮ ಉನ್ನತ ಶಿಕ್ಷಣವು ವಿಶಾಲದೃಷ್ಟಿಯನ್ನಾಗಲೀ ಬದುಕಿನ ವಿಶಾಲತೆಯನ್ನಾಗಲೀ ನೀಡಲಾರದು. ಅದು ಮನುಷ್ಯನನ್ನು ಸುಸಂಸ್ಕೃತಗೊಳಿಸಲಾರದ ನಮ್ಮ ಜಾತಿ, ಸಂಸ್ಕೃತಿಯ ಮೂಷಕಗಳ ಹಿಂಡನ್ನು ತಯಾರು ಮಾಡುತ್ತದೆ. ಶಾಲೆಯನ್ನು ದೇಗುಲವೆಂದು ಭಾವಿಸುವ ಮತ್ತು ತಾತ್ಕಾಲಿಕ ದೇಗುಲವಾಗಿ ಬಳಸುವ ಕ್ರಮಗಳು ಉನ್ನತ ಶಿಕ್ಷಣಕ್ಕಿಂತ ಪೂರ್ವದಲ್ಲಿಯೇ ಮೂಷಕಗಳ ಹಿಂಡಿನ ಉತ್ಪಾದನೆಗೆ ಬೇಕಾದ ತಳಹದಿಯನ್ನು ಹಾಕಿಕೊಳ್ಳುವುದಿರಬಹುದು.''

ಅನುಮಾನ, ಶಂಕೆಯನ್ನು ಹುಟ್ಟುಹಾಕಿ, ಪ್ರಶ್ನೆಯ ಬೀಜಬಿತ್ತಿ ಸ್ಥಗಿತ ಸಮಾಜಕ್ಕೆ ಚಲನೆಯನ್ನೊದಗಿಸುವ ಶಾಲೆಗಳದು ಪ್ರಜಾಪ್ರಭುತ್ವೀಯ ಮಾದರಿ. ಇಂತಹ ಜಾಗದಲ್ಲಿ ಎಂದೂ ಡೆಮೊಕ್ರೆಟ್ಸ್ ಆಗದ ಧರ್ಮ ಮತ್ತದರ ಲಾಂಛನವಾದ ದೇವರನ್ನು ತರುವುದು ತಳಸಮುದಾಯದ ಸಾಮಾಜಿಕ ಮುಂಚಲನೆಗೆ ಒಡ್ಡುವ ತಡೆಯೂ ಹೌದು. ಮಂಡಲ್ ಆಯೋಗದ ಶಿಫಾರಸ್ಸುಗಳಿಗೆ ಪ್ರತಿಯಾಗಿ ಅದೇ ಸರ್ಕಾರದಲ್ಲಿ ಮಂತ್ರಿಯಾಗಿದ್ದುಕೊಂಡೇ, ''ನಿಮ್ಮಲ್ಲಿ ಮಂಡಲವಿದ್ದರೆ ನಮ್ಮಲ್ಲಿ ಕಮಂಡಲವಿದೆ'' ಎಂಬ ಹೇಳಿಕೆ ಕೊಟ್ಟದನ್ನು ಇಲ್ಲಿ ಗಮನಿಸಬಹುದು. ಜ್ಞಾನ ಮತ್ತು ಅಕ್ಷರ ನಿರಾಕರಣೆಯ ಮೂಲಕ ಕಾಯ್ದಿಟ್ಟುಕೊಂಡು ಬಂದ ವರ್ಣ ವ್ಯತ್ಯಾಸಕ್ಕೆ ತೀವ್ರವಾದ ಹೊಡೆತ ಕೊಟ್ಟ ಜಾಗಗಳೇ 'ಮೂಕನಿಗೆ ಬಾಯಿ ಮೂಡಿಸಿದ' ಈ ಸಾರ್ವಜನಿಕ ಅಕ್ಷರತಾಣಗಳು. ಜೈವಿಕ, ಜಾತ್ಯಾಧಾರಿತ ಶ್ರೇಣೀಕರಣವನ್ನು ಅಳಿಸಿ ಅನೇಕ ಮತ ಪರಂಪರೆಗೆ ಸೇರಿದ ಎಳೆಯ ಮನಸ್ಸುಗಳ ಮಿಲನ ಕೇಂದ್ರಗಳಾಗಿ ರೂಪು ಪಡೆದ ಈ ಶಾಲೆಗಳ ರಚನೆಯೇ ವೀಣಾವಾಣಿಯಾಗಿ ಖಾಸಗಿ ಅಟ್ಟದ ಮೇಲೆ ಕುಳಿತ 'ಸರಸ್ವತಿ'ಯನ್ನು ನೆಲಕ್ಕೆ ತಂದು ಎಲ್ಲರಿಗೂ ಹಂಚಿದ ಪ್ರಜಾಸತ್ತಾತ್ಮಕ ಪ್ರಕ್ರಿಯೆ. ಇಂತಹ ವೈಚಾರಿಕ ತಾಣಗಳಾಗಬೇಕಾದ ಸಾರ್ವಜನಿಕ ಅವಕಾಶಗಳನ್ನು ಧಾರ್ಮಿಕ




ಧ್ರುವೀಕರಣ ನೆಲೆಗಳನ್ನಾಗಿ ಬದಲಾಯಿಸಿಕೊಳ್ಳುವ ಹುನ್ನಾರಗಳಿವು. ಅಪ್ರಾಪ್ತ ವಯಸ್ಸಿನ ಮಕ್ಕಳ ಮನಸ್ಸಿನಲ್ಲಿಯೇ ಮತೀಯವಾದಿ ಮನಃಸ್ಥಿತಿಯೊಂದರ ನಿರ್ಮಾಣಕ್ಕೆ ಶಾಲೆಯಷ್ಟು ಸೊಗಸಾದ ತಾಣ ಬೇರೊಂದಿಲ್ಲ ವಿಚಾರವಾದಿ ಚಿಂತನೆಯ ಮೊದಲ ಬೀಜವನ್ನು ಬಿತ್ತಬೇಕಾದ ಜಾಗವನ್ನೇ ಸಮಕಾಲೀನ ರಾಜಕಾರಣದ ಅತ್ಯಂತ ಪರಿಣಾಮಕಾರಿ ಆಯುಧವಾದ ಮತೀಯ, ಕೋಮುವಾದಿ ಪಾರ್ಥೇನಿಯಂ ಬಿತ್ತಲು ಹದ ಮಾಡಿಕೊಂಡು ಬಿಟ್ಟರೆ ಭವಿಷ್ಯದ ಸಂಸ್ಕೃತಿ ರಕ್ಷಕರ ಸೇನೆಗೆ ಕಟ್ಟಾಳುಗಳ ಕೊರತೆಯಿಲ್ಲ! ಇಂತಹ ಆಚರಣೆಗಳನ್ನು ಅತ್ತು-ಕರೆದು ಶಾಲೆಗೆ ಎಳೆದು ತರುವಲ್ಲಿ ಅಧ್ಯಾಪಕರ ದೊಡ್ಡ 'ಶ್ರಮ'ವಿದೆ. ಈ ಶ್ರಮದ ಹಿಂದಿನ ಕಾರಣಗಳೂ ವೇದಿಕೆಯ ಬಯಕೆಗಿಂತಲೂ ಸಾಮಾಜಿಕ ಚರಿತ್ರೆಯಲ್ಲಿವೆ. ಹೀಗೆ ಶಿಕ್ಷಣ ಕೇಂದ್ರಗಳು ಪರ್ಯಾಯ ಧಾರ್ಮಿಕ ಕೇಂದ್ರಗಳಾಗಿ ಏಕರೂಪಿ ಸಂಸ್ಕೃತಿಯ ಪಠ್ಯೀಕರಣಕ್ಕೆ ದುಡಿಯುತ್ತವೆ.

**ವರ್ಗ/ಜಾತಿಸಮಾಜದ ಜಾಗದಲ್ಲಿ ಧರ್ಮಸಮಾಜ**

ಏಕರೂಪಿ ಮಾದರಿಗಳನ್ನು ಚಾಲ್ತಿಗೊಳಿಸುವ ಮೂಲಕ ಶ್ರೇಣೀಕೃತ ಜಾತಿ/ವರ್ಗಗಳೆಂಬ ಸಾಮಾಜಿಕ ವಾಸ್ತವವನ್ನು ಮರೆಮಾಚಿ ವರ್ಗಸಮಾಜದ ಜಾಗದಲ್ಲಿ 'ಧರ್ಮ ಸಮಾಜ'ವೊಂದನ್ನು ಸೃಷ್ಟಿಸಲಾಗುತ್ತದೆ. ಉಡುವಲ್ಲಿ ಉಂಬಲ್ಲಿ ಶರಣರು, ಕೊಡುವಲ್ಲಿ ಕೊಂಬಲ್ಲಿ ನೆಂಟರಾಗಿಯೇ ಉಳಿಯುವ ಈ ತಾತ್ಕಾಲಿಕ ಭ್ರಾಂತರಚನೆ, ಸಾಮಾಜಿಕ ಸತ್ಯವಾದ ಜಾತಿತಾರತಮ್ಯವನ್ನು ಮರೆಸಿ ಸಾಮರಸ್ಯದ ಚಹರೆಗಳನ್ನು ಕಂಡುಕೊಳ್ಳುವಂತೆ ಒತ್ತಾಯಿಸುತ್ತವೆ. ತಳಭಾಗದ ಜನಸಮುದಾಯಕ್ಕೆ ಆಕರ್ಷಣೀಯವಾದ ಒಂದಾಗುವ ಮತ್ತು ಮೇಲೇರುವ ಆಕಾಂಕ್ಷೆಗೆ, ''ನಾವೆಲ್ಲರೂ ಒಂದು...'' ಎಂಬ ಘೋಷಣೆಗಳು ಹಾಳತವಾಗಿ ಒದಗಿ ಬರುತ್ತವೆ. ಸಹಜವಲ್ಲದ ಸಹೋದರತೆಯಲ್ಲಿ ಸ್ಥಾಪಿತವಾಗುವ ರಚನೆಯಾದ ಧರ್ಮಸಮಾಜದಿಂದಾಗಿ 'ಸ್ವ' ಮತ್ತು 'ಅನ್ಯ'ವೆಂಬ ದ್ವಿಮಾನ ವೈರುಧ್ಯದ ಜೊತೆಗೆ ಪಟ್ಟಭದ್ರರು ಪರೋಕ್ಷ ಕ್ರಾಂತಿ/ನಿಷ್ಕ್ರಿಯ ಕ್ರಾಂತಿಯ ಲಾಭವನ್ನೂ ಹೊಂದುವಂತಾಗುತ್ತದೆ.

ಬಹುಧರ್ಮೀಯ ವಸ್ತುಸ್ಥಿತಿಯಲ್ಲಿ ಈ ಉತ್ಸವಗಳು ತೆರೆಯುವ ಉಪನ್ಯಾಸದ ಅವಕಾಶಗಳು, ಶೋಭಾಯಾತ್ರೆಯ ಮೆರವಣಿಗೆಗಳು ಅನೇಕ ಸೂಕ್ಷ್ಮಸಮಸ್ಯೆಗಳನ್ನು ಹುಟ್ಟುಹಾಕುತ್ತವೆ. ಧಾರ್ಮಿಕ ಪ್ರವಚನವೆಂದು ಕರೆಯಲಾಗುವ ಚೋದಿಸಲ್ಪಟ್ಟ ಉತ್ಸಾಹಿ (?) ಉತ್ಸವಕರ್ತರ ಮೆರವಣಿಗೆಯ ಎರಡು ಲಕ್ಷಣಗಳೆಂದರೆ –

(೧) ಅನ್ಯಕೋಮಿನವರ ಬೀದಿಗಳಲ್ಲಿ ಹಾದು ಹೋಗುವಿಕೆ.

(೨) ಪ್ರಚೋದನಾತ್ಮಕ ಘೋಷಣೆಗಳ ಕೂಗುವಿಕೆ.

ಇದಕ್ಕೆಂದೇ ಇಂತಹ ಮೆರವಣಿಗೆಗಳನ್ನು ಎಲ್ಲಾ ಬೀದಿಗಳಲ್ಲಿಯೂ ತೆಗೆದುಕೊಂಡು ಹೋಗುವ ಹಠ ತೊಡುತ್ತಾರೆ. ಇಂತಹ ಸ್ಥಿತಿಯಲ್ಲಿ ಡಿ. ಆರ್. ನಾಗರಾಜ್ ತಮ್ಮ ಸಂಸ್ಕೃತಿ ಕಥನದಲ್ಲಿ ಗುರುತಿಸಿದಂತೆ, ಧರ್ಮಗಳು ಬರೀ ಪ್ರತೀಕಗಳಾಗಿ ನಿಲ್ಲುವುದಿಲ್ಲ... ಸಮಕಾಲೀನ ರಾಜಕಾರಣದ ಅತ್ಯಂತ ಪರಿಣಾಮಕಾರೀ ಆಯುಧವಾಗಿ ಬಿಡುತ್ತದೆ... ಕಡುಬು ತಿನ್ನುತ್ತಾ ತಮಾಷೆಯಾಗಿ ಕಾಲಕಳೆವ ವಿನಾಯಕ ಕತ್ತಿ ಹಿಡಿದು ಬೀದಿಗಳಲ್ಲಿ ಮೆರೆಯುತ್ತಾನೆ... ಅಧಿಕಾರ ಪಿಪಾಸುಗಳ ಕೈಯಲ್ಲಿ ವಿಜ್ಞಾನ ಎಷ್ಟು ಭಯಾನಕ ಆಯುಧವಾಗಬಲ್ಲುದೋ ಅಷ್ಟೇ ಭಯಾನಕ ಆಯುಧ ಧರ್ಮವೂ ಆಗುತ್ತದೆ. ಈ ಮಾದರಿಯ ಧರ್ಮಸಮಾಜದ ನಿರ್ಮಾಣದಿಂದಾಗಿ ದ್ವಿಮಾನರೂಪದ ಪ್ರಕಟ ವೈರುಧ್ಯಗಳಿಂದ ಕೂಡಿದ, ಕೋಮುವಾರು ಧ್ರುವೀಕರಣಕ್ಕೊಳಗಾದ ಭಾವನಾತ್ಮಕ ಸಂಘರ್ಷಗಳಿಗೆ ವೇದಿಕೆ ಸಿದ್ಧಗೊಳ್ಳುತ್ತದೆ. ಮಹಿಳಾ ವಿರೋಧಿಯೂ, ಕಾರ್ಮಿಕ ವಿರೋಧಿಯೂ ಆದ ಈ ವಿರೋಧರೂಪದ ಸಮಾಜನಿರ್ಮಾಣ ಸಾಧ್ಯವಾಗುವುದೇ ಪಟ್ಟಭದ್ರರು ಸಾಧಿಸುವ ನಿಷ್ಕ್ರಿಯ ಕ್ರಾಂತಿಯಿಂದ ಎಂಬುದು ಗಮನಾರ್ಹ ಸಂಗತಿ. ಇಲ್ಲಿ ಬಳಕೆಯಾಗುವ ಐಕ್ಯಗಾನದ ಪರಿಭಾಷೆಗಳು ತೋರಿಕೆಗೆ ಅಸಮಾನ ಸಂಬಂಧಗಳನ್ನು ಅಳಿಸಿಹಾಕಿದಂತೆ ಭಾಸವಾಗುವಂತಿದ್ದರೂ, ಪಾರಂಪರಿಕ ಇರುವಿಕೆಯನ್ನೇ ಮತ್ತಷ್ಟು ಗಟ್ಟಿಗೊಳಿಸುತ್ತಿರುತ್ತವೆ. ಧರ್ಮ ಸಮಾಜದಿಂದಾಗಿ ಅವಕಾಶ ವಂಚಿತ ಜೈವಿಕ ಮತ್ತು ಸಾಮಾಜಿಕ ವಲಯದ ತಳಭಾಗದ ಸಮುದಾಯಗಳು 'ಭೂತದ ಕೈಗೆಸಿಕ್ಕಿ ಭವಿಷ್ಯದ ಕತ್ತಲಿಗೆ ನೂಕಲ್ಪಡುತ್ತಿವೆ.'

ನಗರಗಳು ಬೆಳೆದಂತೆ ವಸ್ತುರೂಪದ ವಿಸ್ತರಣೆಯೇ ಪ್ರಗತಿಯೆಂಬ ಧೋರಣೆ ಬಲಗೊಳ್ಳುತ್ತಿದೆ. ಕೃಷಿ ಆವರಣದ ಸಾಂಸ್ಕೃತಿಕ ವಿನ್ಯಾಸವೂ ಪಲ್ಲಟಗೊಳ್ಳುತ್ತಿದೆ. ಇಂತಹ ಘಳಿಗೆಯಲ್ಲಿ ಮಧ್ಯಮವರ್ಗದ ಮನಃಸ್ಥಿತಿಗೆ ಹೆಚ್ಚು ಆಪ್ಯಾಯಕರವಾದ ಬಲಪಂಥೀಯ ವಿಚಾರಗಳು ಈ ತೆರನಾದ ಆಚರಣೆಗಳ ಮೂಲಕ ನಗರ ಮತ್ತು ಗ್ರಾಮ ಕೇಂದ್ರಗಳಲ್ಲಿ ತಮ್ಮ ನೆಲೆಯನ್ನು ವಿಸ್ತರಿಸಿಕೊಳ್ಳುತ್ತಿವೆ. ವಿಜ್ಞಾನ-ತಂತ್ರಜ್ಞಾನದ ಬೆಳವಣಿಗೆಗಳು ಅಜ್ಞಾನವನ್ನು ದೂರೀಕರಿಸಬೇಕಾದ ಹೊತ್ತಿನಲ್ಲಿಯೇ ಜಾಗತಿಕವಾಗಿ ಧಾರ್ಮಿಕ ಮೂಲಭೂತವಾದಗಳು ಗಟ್ಟಿಗೊಳ್ಳುತ್ತಿರುವುದು ಆತಂಕಕಾರಿ ಬೆಳವಣಿಗೆ. ಬೆಳಕು, ಭಾಷೆ, ಬಣ್ಣ, ಬೆಡಗುಗಳಲ್ಲಿ ಪರಿಸರ ಹಾಗೂ ಸಮುದಾಯ ವಿರೋಧಿಯಾಗಿ ಆಚರಣೆಗಳು ರೂಪಾಂತರಗೊಳ್ಳುತ್ತಿರುವ ಈ ಹೊತ್ತಿನಲ್ಲಿ ಡಾ|| ಜಿ. ರಾಮಕೃಷ್ಣ ಹೇಳುವಂತೆ, ''ದುಡಿಯುವ ವರ್ಗಕ್ಕೆ ಕೇಳುವ ಕಿವಿ ಮತ್ತು ಮಾಡುವ ಕೈ ಹಿಂದೆಂದಿಗಿಂತಲೂ ಇಂದು ಪ್ರಶಸ್ತವಾದ ಸಾಧನವಾಗಬೇಕಿದೆ. ಹಾಗಾಗದೇ ಹೋದಲ್ಲಿ 'ಕಲ್ಪಿತ ಕುಲ' ನಿರ್ಮಾಣಕ್ಕೆ ವಿಕೃತಗೊಂಡು ಬೀದಿಗೆ ಕಾಲಿರಿಸುವ ಹಬ್ಬಗಳು ಮಾನವ ಸಮುದಾಯಕ್ಕೆ ಜೀವದಾಯಕ ನೇತ್ರವಾಗುವ ಬದಲು, ಕಂದರ ಸೃಷ್ಟಿಯ ಸಾಧನಗಳಾಗುತ್ತವೆ.''

**ಜಯಪ್ರಕಾಶ್ ಶೆಟ್ಟಿ ಎಚ್.**
ಸಹ ಪ್ರಾಧ್ಯಾಪಕರು, ಸ.ಪ್ರ.ದ. ಕಾಲೇಜು, ತೆಂಕನಿಡಿಯೂರು

ಭಯೋತ್ಪಾದನೆಯ ವೈಶಿಷ್ಟ್ಯವೆಂದರೆ ಜನರ ಮನಸ್ಸಿನಲ್ಲಿ ಭಯ ಬಿತ್ತಿ ನಾಗರಿಕರನ್ನು ಗುರಿಯಿಟ್ಟು ಹಿಂಸಾತ್ಮಕ ಚಟುವಟಿಕೆಯಲ್ಲಿ ತೊಡಗುವುದು. ಅಮೆರಿಕಾದ ಅವಳಿ ಗೋಪುರ ಧ್ವಂಸವಾದಾಗಿನಿಂದ ಮನಃಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ರಾಜಕೀಯ ವಿಜ್ಞಾನಿಗಳು, ಅರ್ಥಶಾಸ್ತ್ರಜ್ಞರು ಮತ್ತು ಎಲ್ಲ ರೀತಿಯ ಚಿಂತಕರು, ಭಯೋತ್ಪಾದಕತೆಯ ಬಗ್ಗೆ ಚಿಂತಿಸಲು ಪ್ರಾರಂಭಿಸಿದ್ದಾರೆ.

ಭಾರತದಲ್ಲಿ ಸ್ವಾತಂತ್ರ್ಯ ಹೋರಾಟಗಾರರನ್ನು ಇಂಗ್ಲಿಷರು ಭಯೋತ್ಪಾದಕರೆಂದು ಹಣೆಚೀಟಿ ಕಟ್ಟಿ ಕರೆದದ್ದು ಈಗ ಇತಿಹಾಸ. ಭಾರತದ ಉದ್ದಗಲಕ್ಕೆ ಬಾಂಬ್ ಸ್ಫೋಟಗಳು ಇಂದು ತೀವ್ರಗೊಳ್ಳುತ್ತಿವೆ. ಇಂದು ಭಯೋತ್ಪಾದನೆಯ ಬಗ್ಗೆ ತುರ್ತಾಗಿ ಆಳವಾದ ಸಂಶೋಧನೆ ಕೈಗೊಳ್ಳಬೇಕು. 'ಕ್ರಿಮಿನಲ್'ಗಳೆಂದು ಹಣೆಚೀಟಿ ಕಟ್ಟದೆ ವೈಜ್ಞಾನಿಕ ಮಾರ್ಗಗಳಿಂದ ವಿಶ್ಲೇಷಣಾತ್ಮಕ ಮನಃಶಾಸ್ತ್ರಜ್ಞರು ಮಾತ್ರ ಭಯೋತ್ಪಾದನೆಯಂತಹ ಕ್ಲಿಷ್ಟ ಸಮಸ್ಯೆಗಳ ಬಗ್ಗೆ ಅಧ್ಯಯನ ನಡೆಸಿ ಅವರ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಪ್ರಯತ್ನವಾಗಬೇಕಿದೆ.

ಉಗ್ರಗಾಮಿಗಳಲ್ಲಿ ಶೋಷಣೆಗೆ ಒಳಗಾದ ಮಕ್ಕಳು, ಅಪಹರಿಸಿಕೊಂಡು ಬಂದ ಮಕ್ಕಳೇ ಇರುತ್ತಾರೆ. ಪ್ರಮುಖವಾಗಿ ಬಡತನದಿಂದ ನರಳುತ್ತಿರುವ ಪ್ರದೇಶಗಳಿಂದ ಬಂದವರು ಅಥವಾ ಬರ್ಬರ ಹಿಂಸೆ ತಾಂಡವವಾಡುವ ಮಿಲಿಟರಿ ಆಡಳಿತಕ್ಕೊಳ ಪಟ್ಟವರು ಉಗ್ರಗಾಮಿಗಳಾಗಿರುತ್ತಾರೆ. ಬಹಳಷ್ಟು ಉಗ್ರಗಾಮಿಗಳು, ಸವಲತ್ತುಗಳು ಮತ್ತು ಉತ್ತಮ ರಕ್ಷಣೆಗಳ ಹಿನ್ನೆಲೆಯಿಂದ ಬಂದವರಾಗಿರುತ್ತಾರೆ. ಅದರಲ್ಲಿ ಬಹಳಷ್ಟು ಜನರು ಸ್ವಯಂಪ್ರೇರಿತರಾಗಿ ಆತ್ಮಹತ್ಯಾ ಪಂಗಡಗಳಲ್ಲಿ ಸೇರಿರುತ್ತಾರೆ. ಕೆಲವರು ಶೀಘ್ರವಾಗಿ ಪ್ರಸಿದ್ಧಿಯಾಗಬೇಕೆಂಬ ಹಂಬಲವನ್ನು ಇಟ್ಟುಕೊಂಡಿರುತ್ತಾರೆ.



# ಭಯೋತ್ಪಾದನೆ - ವಿಶ್ಲೇಷಣೆ

ಫ್ರೆಡ್‌ರಿಕ್ ಹ್ಯಾಕರ್ ಎಂಬ ಮನಃಶಾಸ್ತ್ರಜ್ಞ ತನ್ನ ಒಂದು ಗ್ರಂಥದಲ್ಲಿ ಉದ್ದೇಶ, ಕೃತ್ಯ ಮತ್ತು ನೆಲೆಯ ಆಧಾರದ ಮೇಲೆ ವಿವಿಧ ಉಗ್ರಗಾಮಿಗಳನ್ನು ಗುರುತಿಸಿದ್ದಾರೆ. ಅಂಥವರಲ್ಲಿ ಮೂರು ವಿಧಗಳು: ಧಾರ್ಮಿಕವಾಗಿ ನಂಬಿಕೆವುಳ್ಳವರು, ವೈಯಕ್ತಿಕ ಲಾಭಕ್ಕಾಗಿ, ಪ್ರಾಪಂಚಿಕ ಸುಖಕ್ಕಾಗಿ ವ್ಯವಹರಿಸುವ ಕ್ರಿಮಿನಲ್‌ಗಳು ಮತ್ತು ಭ್ರಮಾತ್ಮಕರಾದ ಅತ್ಯುತ್ಸಾಹಿಗಳು. ಪ್ರಸ್ತುತ ಸಂಶೋಧನೆಯಿಂದ ವಿಶ್ವವಿದ್ಯಾಲಯ ಪದವಿ ಅಥವಾ ವೃತ್ತಿ ಸಂಬಂಧ ಪದವಿ ಪಡೆದವರು, ಅಂಥವರಲ್ಲಿ ಹೆಣ್ಣುಮಕ್ಕಳು, ವಿವಿಧ ವಯೋಮಾನದವರು ಮತ್ತು ವೃದ್ಧೆಯರೂ ಸೇರಿರುತ್ತಾರೆ. ಕ್ರಿಮಿನಲ್‌ಗಳಿಗೂ ಭಯೋತ್ಪಾದಕರಿಗೂ ವ್ಯತ್ಯಾಸವಿದೆಯೆಂಬುದು ಗಮನಾರ್ಹ. ಭಯೋತ್ಪಾದನೆಯಲ್ಲಿ ತೊಡಗುವವರು ವಿದ್ಯಾವಂತರು, ಸೌಮ್ಯವಾದಿಗಳು, ಕುತರ್ಕಿಗಳು, ಬುದ್ಧಿವಂತರು ಮತ್ತು ನಿಷ್ಠಾವಂತರೂ ಆಗಿರುತ್ತಾರೆ. ಈ ಸವಾಲಿನಿಂದ ಭಯೋತ್ಪಾದನೆಯನ್ನು ಅರ್ಥಮಾಡಿಕೊಂಡು ಇದರ ವಿರುದ್ಧ ಹೋರಾಟವನ್ನು ನಡೆಸಬೇಕಿದೆ.

ಭಯೋತ್ಪಾದಕರ ಬದುಕು ಸಾವಿನೊಂದಿಗೆ ಆಟವಾಡುವುದೇ ಆಗಿದೆ. ಭಯೋತ್ಪಾದಕನೊಬ್ಬ ಹೇಳುವ ಕಥೆ ಹೀಗಿದೆ: ''ನಾನೊಬ್ಬ ಭಯೋತ್ಪಾದಕ. ನನಗೆ ೨೫ ವರ್ಷ ವಯಸ್ಸು. ಕಳೆದ ೧೦ ವರ್ಷಗಳಿಂದ ಒಂದು ನಿರ್ದಿಷ್ಟ ಭಯೋತ್ಪಾದಕ ಗುಂಪಿನೊಂದಿಗೆ ನಾನು ಸಂಬಂಧ ಹೊಂದಿರುವೆ. ಮೊದಲು ಸಂದೇಶವಾಹಕ ಹುಡುಗನಾಗಿದ್ದೆ. ಈಗ ನಾನು ಭಯೋತ್ಪಾದಕ ಸಮಿತಿ ಸದಸ್ಯ. ಕುಟುಂಬದ ಹಿನ್ನೆಲೆಯಲ್ಲಿ ನಾನು ನನ್ನ ತಂದೆ ತಾಯಿ, ಸಹೋದರಿಯರ ಪ್ರೇಮ ವಾತ್ಸಲ್ಯದಲ್ಲಿ ಬೆಳೆದವನು. ಪದವೀಧರನಾಗಿದ್ದೆ, ನಾನು ಹಾಗೆಯೇ ಮುಂದುವರಿದಿದ್ದರೆ ವಿಶೇಷ ಸಂಬಳ ಪಡೆಯುವ ಅಧಿಕಾರಿಯಾಗಿರುತ್ತಿದ್ದೆ. ನನಗೆ ದೇವರಲ್ಲಿ ನಂಬಿಕೆ ಇದೆ. ನಾನೇನು ದಡ್ಡನಲ್ಲ, ಮರುಳನಲ್ಲ, ಒಂದು ಆದರ್ಶದ ಸಲುವಾಗಿ ನನ್ನನ್ನೇ ಅರ್ಪಿಸಿಕೊಳ್ಳಲು ಸಿದ್ಧನಿರುವೆ. ಕೇವಲ ಹಣ ಮಾಡುವ ಯಂತ್ರದ ಚಕ್ರದ ಭಾಗವಾಗಲು ನನಗಿಷ್ಟವಿಲ್ಲ. ನೋವು, ದಬ್ಬಾಳಿಕೆಗಳನ್ನು ಸಹಿಸಿಕೊಳ್ಳುವುದನ್ನು ಕಲಿತಿದ್ದೇನೆ. ಅನೇಕ ದಿನಗಳ ಕಾಲ ಆಹಾರ, ನಿದ್ರೆ ಇಲ್ಲದೆ ಬದುಕಬಲ್ಲೆ. ರಾಕ್ಷಸರ ವಿರುದ್ಧ ಹೋರಾಟಕ್ಕೆ ರಕ್ತ ಮತ್ತು ಕಣ್ಣೀರು ಅನಿವಾರ್ಯವೆಂದು ತಿಳಿದಿದ್ದೇನೆ. ನನಗೆ ನಾನೇ ಕೋಮಲ ಭಾವನೆಗಳಿಂದ ವಿರಾಗಿಯಾಗಲು ತರಬೇತಿ ಪಡೆದಿದ್ದೇನೆ. ಸರಕಾರಕ್ಕೆ ಸುದ್ದಿ ಮುಟ್ಟಿಸುವುದಕ್ಕಾಗಿ ಮುಗ್ಧರನ್ನು ಬಲಿ ತೆಗೆದುಕೊಳ್ಳುವುದು ಅನಿವಾರ್ಯವೆಂದು ನನಗೆ ಗೊತ್ತಿದೆ. ತೀವ್ರ ಬದಲಾವಣೆಯಾಗಬೇಕೆಂದರೆ ಸಾವಿರಾರು ಮಂದಿ ತ್ಯಾಗ ಮಾಡಲೇಬೇಕು. ಇವೆಲ್ಲವನ್ನೂ ಕಾಲವೇ ನಿರ್ಧರಿಸುತ್ತದೆ, ನಮ್ಮವರಿಗೋಸ್ಕರ ನಾವು ಮಾಡಲಿರುವ ತ್ಯಾಗ ತುಂಬಾ ಪ್ರಯೋಜನಕಾರಿಯಾಗಬೇಕಿದೆ.''

**ಪ್ರೊ|| ಸಿ. ಎಂ. ವೀರಭದ್ರಯ್ಯ**

ಸ್ವಾತಂತ್ರ್ಯ ಹೋರಾಟಗಾರರು ನಿಸ್ಸಂಗಿಯಾಗಿರಲು ಪ್ರಯತ್ನಪಟ್ಟರು. ಆಧ್ಯಾತ್ಮಿಕ ಉನ್ನತಿಗಾಗಿ ಭಗವದ್ಗೀತೆ, ಸ್ವಾಮಿ ವಿವೇಕಾನಂದರ ಬರಹ ಮೊದಲಾದವುಗಳನ್ನು ಅಭ್ಯಾಸ ಮಾಡಿದರು. ಹಾಗೆಯೇ ಇಂದಿನ ಭಯೋತ್ಪಾದಕರಲ್ಲಿ ಈ ರೀತಿಯ ಕಠಿಣ ಹೃದಯದವರನ್ನು ಕಾಣಬಹುದು. ರಾಜಕೀಯ ಅತಿರೇಕ ಭಯೋತ್ಪಾದನೆಗೆ ಸಮವಲ್ಲ, ಅದು ಶಾಂತಿಯುತ, ರಚನಾತ್ಮಕ, ಆಮೂಲಾಗ್ರ ಬದಲಾವಣೆಗೆ ಪ್ರಯತ್ನ ಮಾಡಿದರೆ ಭಯೋತ್ಪಾದನೆ ಹಿಂಸಾತ್ಮಕ ವಿನಾಶಕ್ಕೆ ಮೂಲವಾಗುತ್ತದೆ. ಅತಿರೇಕ ಬದಲಾವಣೆಯ ನೆಪದಲ್ಲಿ ಭಯೋತ್ಪಾದನೆಯಾಗುವ ಸಾಧ್ಯತೆಯೂ ಇದೆ. ಅತಿರೇಕತೆಯ ಗುಂಪಿನ ಜನ ಭಯೋತ್ಪಾದಕರಂತೆ ರಾಜಕೀಯ ಸಿದ್ಧಾಂತಗಳೊಂದಿಗೆ ಯುದ್ಧ ಮಾಡುವರು. ರಾಜ್ಯವನ್ನಾಳುವ ನಾಯಕರು ವಿವಿಧ ಸನ್ನಿವೇಶಗಳಲ್ಲಿ ಭಯೋತ್ಪಾದಕರ ತಂತ್ರಗಳಿಗೆ ಮೊರೆಹೋಗಿ ಸಿದ್ಧಾಂತಗಳಿಗೆ ವಿದಾಯ ಹೇಳುವರು.

ಭಯೋತ್ಪಾದಕರಿಗೆ ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ತರಬೇತಿ ನೀಡುವರು. ಈ ತರಬೇತಿಯಲ್ಲಿ ತಮ್ಮದೇ ಆದ ಆಧ್ಯಾತ್ಮಿಕ ಪ್ರಕ್ರಿಯೆ ಹಾಗೂ ತರ್ಕಗಳನ್ನು ಪೋಷಿಸಲಾಗುವುದು. ಹೀಗಾಗಿ ಭಯೋತ್ಪಾದಕ ತಾನೆಂದೂ ಅನೈತಿಕ ವ್ಯಕ್ತಿಯಲ್ಲಿ, ನೈತಿಕ ದೃಷ್ಟಿಯಲ್ಲಿ ತಾನೊಬ್ಬ ಆದರ್ಶ ವ್ಯಕ್ತಿಯೆಂದು ಭಾವಿಸುತ್ತಾನೆ. ಭಯೋತ್ಪಾದಕರ ಗುಂಪುಗಳಲ್ಲಿ ಉದ್ದೇಶಗಳು ಭಿನ್ನವಾಗಿರುತ್ತವೆ. ಭಯೋತ್ಪಾದನೆಗೆ ಯುವಕರನ್ನು ನೇಮಿಸಿಕೊಂಡು ಅವರ ಪೂರ್ವ ನಂಬಿಕೆಗಳನ್ನು, ಭಾವನೆಗಳನ್ನು ಅಳಿಸಿಹಾಕಿ ಬದುಕಿಗೆ ಹೊಸ ಅರ್ಥವಿರಬೇಕೆಂಬ ಅರಿವನ್ನು ಉಂಟುಮಾಡುವರು. ೨೦೦೮ರ ಅಹಮದಾಬಾದಿನಲ್ಲಿ ಜರುಗಿದ ಸರಣಿ ಸ್ಫೋಟ ಸಂಬಂಧದಲ್ಲಿ ಸೆರೆಹಿಡಿದ ಭಯೋತ್ಪಾದಕನನ್ನು ವಿಚಾರಿಸಲಾಗಿ, ಅವರಲ್ಲೊಬ್ಬ ಹೇಳಿದ, ''ಸಾವಿನ



ನಂತರ ನನಗೆ ಸ್ವರ್ಗದಲ್ಲಿ ಶಾಶ್ವತ ಬಹುಮಾನ ದೊರೆಯಲಿದೆ.'' ''ನೀನು ಪುನಃ ಬಾಂಬ್ ಸ್ಫೋಟ ಮಾಡುವೆಯಾ'' ಎಂದು ಪ್ರಶ್ನಿಸಿದರೆ, ''ಹೌದು'' ಎಂದು ಹೇಳಿದ. ''ನಿನ್ನ ತಾಯಿ ಸಂತೆಯಲ್ಲಿ ವಸ್ತುಗಳನ್ನು ಕೊಳ್ಳುತ್ತಿರುವಾಗ ಬಾಂಬ್ ಸ್ಫೋಟ ಮಾಡುವೆಯಾ'' ಎಂದು ಕೇಳಿದಾಗ ಸ್ವಲ್ಪ ತಡವರಿಸಿ ಹೇಳಿದ : ''ನನ್ನ ತಾಯಿಯನ್ನು ಕೊಂದರೆ ಆಕೆಗೂ ಸ್ವರ್ಗದಲ್ಲಿ ಶಾಶ್ವತ ಶಾಂತಿ ಸಿಗಲಿದೆ''. ಹೀಗೆ ಪೂರ್ವದಲ್ಲಿ ಅವನಿಗಿದ್ದದ್ದು ತಾಯಿಯನ್ನು ಸಂರಕ್ಷಿಸಬೇಕೆಂಬ ಭಾವನೆ. ಅದನ್ನು ಬದಲಿಸಲಾಗಿದೆ.

ಇಂತಹವರು ಸಾಧಾರಣ ತಂತ್ರಗಳಿಗಿಂತ ಆತ್ಮಾಹುತಿ ದಾಳಿಯಿಂದ ತಮ್ಮ ಧ್ಯೇಯೋದ್ದೇಶಗಳನ್ನು ಸಾಧಿಸಬಹುದೆಂದು ನಂಬಿರುತ್ತಾರೆ.

ಬಡತನ, ಸಂಪತ್ತಿನ ಅಸಮಾನತೆ, ವಂಚನೆ ಮತ್ತು ಅನ್ಯಾಯಗಳು, ಹಿಂಸೆಯ ತುಪಾಕಿಗಳಾಗುತ್ತವೆ. ಹೀಗೆ ಹಿಂಸೆ ಸಾಮಾಜಿಕ ಅವ್ಯವಸ್ಥೆಯನ್ನು ಪೋಷಿಸುತ್ತದೆ. ಜನರು ದಾಳಿ ಮನೋಭಾವದ ಅಪಾಯಕಾರಿ ಅಂಶಗಳಿಂದ, ನೈಜತೆಯನ್ನರಿಯಲು ಅಸಮರ್ಥರಾಗುತ್ತಾರೆ. ದೈನಂದಿನ ಬದುಕಿನ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲಾಗದವರು, ಸಾಮಾಜಿಕವಾಗಿ ಅಸಮಂಜಸ ಕೌಶಲ್ಯವುಳ್ಳವರು, ಸಣ್ಣ ಆಶಾಭಂಗದಿಂದ ನರಳುವವರು, ಶೈಶವ ಹಾಗೂ ಕೌಮಾರಾವಸ್ಥೆಯಲ್ಲಿ ಲೈಂಗಿಕ ದೌರ್ಜನ್ಯಕ್ಕೆ ಒಳಗಾದವರು, ಬಾಲ್ಯ ಹಾಗೂ ಯೌವನದಲ್ಲಿ ಪ್ರೀತಿ ವಾತ್ಸಲ್ಯಕ್ಕೆ ಎರವಾಗಿ, ಪೋಷಕರಿಂದ ಗುರುಗಳಿಂದ ಯಾವುದೇ ಬಲ ಇಲ್ಲದವರು, ಈ ಅಪಾಯಕಾರಿ ಅಂಶಗಳಿಂದ ಕೋಪೋದ್ರೇಕಗೊಳ್ಳುತ್ತಾರೆ. ಕೌಟುಂಬಿಕ ಕಠಿಣ ಬದುಕು, ಪರಸ್ಪರ ಅಪನಂಬಿಕೆ, ಸ್ವಾರ್ಥಗಳಿಂದ ವ್ಯಕ್ತಿ ಹಿಂಸಾಮಾರ್ಗ ಹಿಡಿಯುತ್ತಾನೆ. ಸಾಮಾಜಿಕ ಬದುಕಿನಲ್ಲಿ ಬಡತನ, ವಿಪರೀತ ಗುಂಪುಗಾರಿಕೆ, ತಾತ್ವಿಕ ಅಧಃಪತನ, ಹಿಂಸೆಗೆ ಕಾರಣವಾಗುತ್ತವೆ. ಅತೀ ನವನಾಗರಿಕತೆ ಭಯೋತ್ಪಾದನೆಗೆ ಮೂಲ ಪ್ರೇರಣೆಯಾಗುತ್ತದೆ. ಜಾತ್ಯತೀತತೆಯ ಬಗ್ಗೆ ವಿಪರೀತ ಆದರ್ಶ ಧ್ಯೇಯವನ್ನು ಇಟ್ಟುಕೊಂಡಿರುವುದು, ರಾಜಕೀಯ ಹಿಂಸೆ, ಸಿವಿಲ್ ವಾರ್, ಕ್ರಾಂತಿ, ನಿರಂಕುಶ ಪ್ರಭುತ್ವ, ಇಂತಹ ರಾಜ್ಯಕೂಟದಲ್ಲಿ ಅಸಮರ್ಪಕ ರಾಜ್ಯಾಡಳಿತಕ್ಕೆ ಎಡೆಮಾಡಿಕೊಡುತ್ತವೆ ಎಂಬುದು ಇತಿಹಾಸದಿಂದ ತಿಳಿದುಬರುತ್ತದೆ.

**ಪ್ರೊ|| ಸಿ. ಎಂ. ವೀರಭದ್ರಯ್ಯ**
ವೃತ್ತಿನಿರತ ಲೇಖಕ, ನ್ಯಾಯವಾದಿ, ಬಳ್ಳಾರಿ - ೫೮೩ ೧೦೧

# ಕೇಪ್ ಭೂಶಿರ

ಗಾಳಿಯೊಡನೆ ಸತತ ಸಂವಾದ - ನಿರತ
ಜತೆಗೆ ರಣ ಬಿಸಿಲು ಅಥವಾ ಶೀತ ಮಾರುತ
ಮೋಡ ಸುಳಿದರೆ ನೆರಳು-ಬೆಳಕಿನ ಆಟ.
ಲಕ್ಷ ಚಂಡಮಾರುತಗಳಿಗೆ ಮೈಯೊಡ್ಡಿಯೂ
ತಲೆ ಬಾಗದ ಈ ಶಿಖರ ಸದಾ ಪರಾಕ್ರಮಿಗಳ
ನೆನಪಿಸುವ ದಿಟ್ಟ ಪ್ರತೀಕ.
ಅಗಾಧ ಇಳುಕಲಿನ ಎದುರು ಅಟ್ಲಾಂಟಿಕ್ ಮತ್ತು
ಹಿಂದೂ ಮಹಾಸಾಗರಗಳ ಮಿಲನ ಅಪೂರ್ವ.
ಕಡಲು ಕಡಲನ್ನಪ್ಪುವ ಸೂಕ್ಷ್ಮ ರೇಖೆ
ಈ ಕ್ಷಣವಿದ್ದು ಮರುಕ್ಷಣವೆ ಮಾಯ.
ಪ್ರಪಾತದಡಿ ಏಕಾಏಕಿ ಚಿಮ್ಮುವ ತುಷಾರ
ಮರೆಮಾಡುತ್ತದೆ ಆಚೆಯ ದೃಶ್ಯ ಕೆಲ ಕಾಲ.

ನಾನಾ ದೇಶಗಳ ಪ್ರವಾಸಿಗಳ ಕೂಟ
ಪುಟ್ಟ ಹಸುಳೆಗಳ ಚೇಷ್ಟೆ ಚೆಲ್ಲಾಟ
ವೃದ್ಧರಲ್ಲೂ ಶಿಖರವೇರುವ ಅದಮ್ಯ ಉತ್ಸಾಹ
ಇಲ್ಲಿ ಕಲೆತಾಗ ಗೌಣವೆನಿಸುತ್ತದೆ ವ್ಯತ್ಯಾಸ:
ಚೀನೀ ಜಾಪಾನಿ ಭಾರತಿ ಐರೋಪ್ಯ
ಜಾತಿಮತಗಳ ವೈಮನಸ್ಯ, ವರ್ಣಭೇದ
ಪ್ರಿಯವೆನಿಸುತ್ತದೆ ಪ್ರೀತಿ ವಿಶ್ವಾಸ ಮತ್ತು
ವಿಶ್ವಶಾಂತಿಯ ಮಹತ್ವ

ತಾತ್ಕಾಲಿಕ ಪರಿಚಯವೂ ಸೃಷ್ಟಿಸಬಹುದು ಒಮ್ಮೊಮ್ಮೆ
ಶಾಶ್ವತ ಸ್ನೇಹ-ಸೇತು ಹಾಗೂ ನೈಜ ಪರಿಹಾರಗಳ
ಶೃಂಗಸಭೆಗಳು ಇಂಥ ಪರಿಸರದಲ್ಲಿ ಜರುಗಿದರೆ
ಹೇಳಬಹುದೆ ಮಹಾಯುದ್ಧಗಳಿಗೆ ವಿದಾಯ ?

ಕೆಲವು ಶಿಖರಗಳು ಬೇಸಿಗೆ ಶಿಬಿರ, ವಿಹಾರ ಕೇಂದ್ರ
ಕೆಲವೆಡೆ ಸಾಧು ಸಂತರ ವಾಸ, ಪ್ರಣಯಿಗಳ ಮಧುಚಂದ್ರ
ಕೆಲವು ಕ್ಷಿಪಣಿ ನೆಲೆಗಳು, ವಿಧ್ವಂಸಕರ ಅಡಗುದಾಣಗಳು
ಇದಾದರೂ, ದರ್ಶಕರನ್ನು ಸ್ವಾಗತಿಸಲು ದಿನವಿಡೀ
ಸ್ನೇಹ-ಹಸ್ತ ಚಾಚಿ ನಿಂತಿರುವ ಪರ್ಯಾಯ ದ್ವೀಪ.
ಕಾರಿರುಳಲ್ಲಿ ನಾವಿಕರಿಗೆ ದಾರಿ ತೋರಿಸಲು
ನೆತ್ತಿಯಲಿ ಹೊತ್ತು ನಿಂತಿದೆ ಉಜ್ವಲ ದೀಪ !

**ಅಬ್ದುಲ್ ಮಜೀದ್ ಖಾನ್**
ಕೇಪ್ ಪಾಯಿಂಟ್, ದಕ್ಷಿಣ ಆಫ್ರಿಕಾ



ಕುಟುಂಬದಲ್ಲಿನ ಲೆಕ್ಕಾಚಾರ ಮತ್ತೊಂದು ರೀತಿಯಲ್ಲಿ ಬಿಚ್ಚಿಕೊಳ್ಳುತ್ತದೆ. ಎರಡು ಮೂರಾದರೆ ಸಂಸಾರದಲ್ಲಿ ನಮ್ಮ ಮುಂದಿನ ಪೀಳಿಗೆಯನ್ನು ಸಂಭ್ರಮದಿಂದ ಬರಮಾಡಿಕೊಳ್ಳುತ್ತೇವೆ. ಮೂರು ನಾಲ್ಕಾದರೆ ನಾವಿಬ್ಬರು, ನಮಗಿಬ್ಬರು ಸಾಕೆಂದುಕೊಂಡ ಕಾಲ ಒಂದಿತ್ತು. ನಮಗೆ ಒಂದೇ ಸಾಕೆಂದುಕೊಂಡ ಕಾಲ ಬಂತಾದರೂ, ನಾವಿಬ್ಬರಾಗೇ ಉಳಿದರೆ ಸಾಕೆನ್ನುವ ಮಟ್ಟಕ್ಕೆ ತಲುಪಿರುವ ಈ ಲೆಕ್ಕಾಚಾರದ ಆಟ ಎಲ್ಲಿಗೆ ತಲುಪಿದೆಯೆಂದು ಯೋಚಿಸುತ್ತಿರುವಾಗ ಮತ್ತೆ ವಾಹನಗಳ ಕಡೆ ಹೊರಳಬೇಕೆನಿಸುತ್ತದೆ.

---

ಅರುಂಧತಿ ಜೋಶಿ

# ವಿಚಿತ್ರ ಲೆಕ್ಕಾಚಾರ

ಲೆಕ್ಕಾಚಾರಾಂದ್ರೆ ಸಂಖ್ಯೆಗಳ ಎಣಿಕೆ ಅಷ್ಟೇ ಅಲ್ವಾ, ಎಂದೇ ಎಲ್ಲರೂ ಪ್ರಶ್ನಿಸುವಾಗ ನನ್ನ ಈ ಲೆಕ್ಕಾಚಾರ ನಮ್ಮ ಸುತ್ತಮುತ್ತ ಕಾಣಿಸಿಕೊಳ್ಳುವ ಸ್ವಾರಸ್ಯಕರ ಪ್ರಸಂಗಗಳಿಗೆ ಅನ್ವಯಿಸುತ್ತದೆ.

ನಗರದಲ್ಲಿ ದಟ್ಟನೆಯ ವಾಹನ ಸಂಚಾರವಿರುವ ಸ್ಥಳಗಳಲ್ಲಿ ವಾಹನಗಳನ್ನು ನಿಯಂತ್ರಿಸಲು ಸಿಗ್ನಲ್ ದೀಪಗಳನ್ನು ಅಳವಡಿಸಿರುತ್ತಾರೆ. ವಾಹನ ಚಾಲಕರ ಮತ್ತು ಪಾದಚಾರಿಗಳ ಹಣೆಬರಹವನ್ನು ನಿಯಂತ್ರಿಸುವುದು ಇವೇ ಮೂರು ದೀಪಗಳೆಂದು ಸಣ್ಣ ಹುಡುಗರಿಗೂ ಗೊತ್ತಿರುವ ವಿಷಯವಾದರೆ, ಈ ಪ್ರಪಂಚದ ಉಸ್ತುವಾರಿ, ಬ್ರಹ್ಮಾಂಡದ ಜವಾಬ್ದಾರಿ, ಹುಟ್ಟು, ಬದುಕು, ಅಳಿವಿಗೆ, ನಮ್ಮ ಅಲ್ಪ ಧಾರ್ಮಿಕ ನಂಬಿಕೆಯ ತಳಹದಿಯಲ್ಲಿ, ಆ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು ಮತ್ತು ಶಿವ ಕಾರಣೀಭೂತರೆಂದು ಹೇಳುವಾಗ, ಆ ಮೂರು ಶಕ್ತಿಗಳನ್ನು ಸಿಗ್ನಲ್ ದೀಪಗಳಿಗೆ ಹೋಲಿಸಿ ನೋಡಬೇಕೆಂದೆನಿಸುತ್ತದೆ.

ಹುಟ್ಟು ಬ್ರಹ್ಮನಿಂದ ನಿಯಂತ್ರಿತವಾದ ಕ್ರಿಯೆಯಾದರೆ, ಬದುಕು ವಿಷ್ಣುವಿನ ಅಭಯಹಸ್ತದ ಕೃಪೆಯಿಂದ ಮತ್ತು ಅಳಿವು ಶಿವನ ತಾಂಡವ ನೃತ್ಯದಲ್ಲಿ ತುಳಿದು ಅಳಿದ ದುಷ್ಟ ಶಕ್ತಿಗಳೆಂದು ಒಂದು ಸಣ್ಣ ವಿವರಣೆ ಮನಸ್ಸಿನ ಒಂದು ಮೂಲೆಯಲ್ಲಿ ಮಿಂಚಿದಾಗ, ಪುರಾಣದಲ್ಲಿನ ನಂಬಿಕೆಗೆ ಪುರಾವೆಯನ್ನು ಹುಡುಕಬಾರದು. ಈಗ ಯಾಕೀ ಪ್ರಶ್ನೆ? ತ್ರಿಮೂರ್ತಿಗಳಿಗೂ ಸಿಗ್ನಲ್ ದೀಪಗಳಿಗೂ ಏನು ಸಂಬಂಧ? ಇದನ್ನು ಮೂರು ದೀಪಗಳಿಗೆ ಯಾಕೆ ಹೋಲಿಸಬೇಕೆಂದು ಕೇಳಿದರೆ, ನನಗೆ ಇದರ ಬಗ್ಗೆ ಹೊಳೆದಿರುವ ಅಲ್ಪ ಜ್ಞಾನದ ಲೆಕ್ಕಾಚಾರವಷ್ಟೆ!

ಹುಟ್ಟನ್ನು ಬ್ರಹ್ಮ ನಿಯಂತ್ರಿಸುವಂತೆ ಹಸಿರು ಸಿಗ್ನಲ್ ದೀಪ ಪ್ರಯಾಣವನ್ನು ರಸ್ತೆಯಲ್ಲಿ ಮುಂದುವರಿಸಬಹುದೆಂದು ಓ.ಕೆ. ಸಿಗ್ನಲ್ ಕೊಡುವ ಹಾಗೆ, ಹಳದಿ ದೀಪ ಮುಂದೆ ಹೋಗುವವರನ್ನು ತಡೆದು ತಾಳ್ಮೆ ಸಂಯಮ ಬದುಕಿನಲ್ಲಿ ಎಷ್ಟು ಮುಖ್ಯವಾದದ್ದೆಂದು ಹೇಳುತ್ತದೆ ಎಂದೆನಿಸುತ್ತೆ. ಇದು ಮುಗಿಯುತ್ತಿದ್ದಂತೆಯೇ ನಿಮ್ಮನ್ನು ಪೂರ್ತಿಯಾಗಿ ನಿಸ್ತೇಜರನ್ನಾಗಿ ಮಾಡುವ ಕೆಂಪು ದೀಪ, ಕ್ರಿಯೆಗಳೆಲ್ಲ ನಿಂತುಹೋಗುವಂತೆ ಮಾಡುತ್ತದೆ. ಇದರ ಪ್ರಭಾವದಿಂದ ವಾಹನಗಳು ಸಾಲಾಗಿ ಒಂದರ ಹಿಂದೊಂದು ಕ್ಯೂ ಹಚ್ಚಿ ನಿಂತುಬಿಡುತ್ತವೆ. ಮತ್ತೆ ಚಾಲನೆಯ ಹಾದಿಯನ್ನು, ಕಣ್ಣು ಮಿಟುಕಿಸದೆ, ಕಣ್ಣು ಮಿಟುಕಿಸಿ ಚಾಲಕರು ಹಸಿರು ನಿಶಾನೆ ತೋರಿಸುವ ಹಸಿರು ದೀಪಕ್ಕಾಗಿ, ಕಾದಿರುತ್ತಾರೆ. ವಾಹನ ಚಾಲಕರ ಪರದಾಟವನ್ನು ಲೆಕ್ಕಿಸದೆ, ಕೆಲವರು ಅಳಿವಿನ ಹಾದಿಯಲ್ಲಿ ತಲೆ ಹೋಗೋ ಅವಸರವಿರುವವರ ಹಾಗೆ, ಪರರ ಚಿಂತೆಯಿಲ್ಲದೆ, ಸ್ಕೂಟರನ್ನು ವಿಮಾನವೆಂದು ಭಾವಿಸಿ ಸುಯ್ಯಂತ ನಾಗಾಲೋಟದಲ್ಲಿ ಸಾಗಿ, ಯಾರಿಗೇನಾದರೆ ಏನು ಎಂದು ಓಡಿಸಿದರೆ ನಮ್ಮ ಎದೆಗುಂಡಿಗೆ ಬಾಯಿಗೆ ಬರುವ ಹಾಗೆ ಮಾಡಿಬಿಡುತ್ತಾರೆ.

ಕ್ಯಾಮರಾಗಳನ್ನು ಅಳವಡಿಸಿ ಈ ರೀತಿಯ ತಪ್ಪು ಮಾಡಿ ಜಾರಿಕೊಳ್ಳುವ ಭೂಪರನ್ನು ಕ್ಯಾಮರಾ ಕಣ್ಣಿನಲ್ಲಿ ಸೆರೆ ಹಿಡಿದು, ಎಲ್ಲಿದ್ದರೂ ಜುಟ್ಟು ಅಥವಾ ಹೆಲ್ಮೆಟ್ಟನ್ನು ಹಿಡಿದುಕೊಂಡು ಎಳೆದು ತಂದು ದಂಡ ವಸೂಲಿ ಮಾಡಿದರೆ ಕ್ಯಾರೇ ಎಂದು ಕೇರ್ ಮಾಡದೇ ಯಥಾಪ್ರಕಾರ ರೇಸಿನಲ್ಲಿ ಭಾಗವಹಿಸುವವರ ಹಾಗೆ ಹಾರಿಬಿಡುತ್ತಾರೆ. ಹೆಲ್ಮೆಟ್





ಹಾಕಿಕೊಂಡಿದ್ದರೆ ಮುಖ ಕಾಣಿಸುವುದಿಲ್ಲವೆಂದು ವಾದ ಮಾಡಿದರೆ ಅದು ಅವರಿಗೂ ಟ್ರಾಫಿಕ್ ಪೊಲೀಸಿನವರಿಗೂ ಅಂಟಿಕೊಂಡ ತಲೆನೋವಿನ ವ್ಯಾಧಿ. ಅದನ್ನು ಹೇಗೆ ಬಗೆಹರಿಸಿಕೊಳ್ಳುತ್ತಾರೆಂಬುದು ಅವರವರ ಪರ್ಸಿನ ಗಾತ್ರದ ಪ್ರಮಾಣದ ಮೇಲೆ ನಿರ್ಧಾರವಾಗುತ್ತದೆ.

ಇದಲ್ಲದೆ, ಲೆಕ್ಕಾಚಾರದ ಮತ್ತೊಂದು ಮುಖ ನಮ್ಮ ಕಣ್ಣಮುಂದೆ ಸುಳಿದಾಡುತ್ತವೆ. ಹೊಸದಾಗಿ ಕಾಣಿಸಿಕೊಂಡಿರುವ ಎಲೆಕ್ಟ್ರಾನಿಕ್ ಟೈಮ್ ಮಾನಿಟರ್, ಮೂರು ಸಿಗ್ನಲ್ ದೀಪಗಳ ಕಾಲಾವಕಾಶವನ್ನು ನಿಯಂತ್ರಿಸುವಾಗ, ಅರವತ್ತು ಅಥವಾ ತೊಂಬತ್ತು ಸೆಕೆಂಡುಗಳಿಂದ ಹಿಂದಕ್ಕೆ ಓಡುತ್ತ, ಸೊನ್ನೆ ಬರುವ ಹಾದಿಯನ್ನೇ ಎವೆಯಿಕ್ಕದೆ ನೋಡುತ್ತಿರುವ ದ್ವಿಚಕ್ರ, ತ್ರಿಚಕ್ರ ಮತ್ತು ನಾಲ್ಕು ಚಕ್ರದ ವಾಹನಗಳ ವಾಹನ ಚಾಲಕರು, ಈ ಲೆಕ್ಕಾಚಾರ ಮುಗಿಯುವುದಕ್ಕೆ ಚಡಪಡಿಸುತ್ತ ಕಾಯುತ್ತಿರುತ್ತಾರೆ. ಪಥಿಕರ ಪಥ (ಅಲ್ಲಲ್ಲ... ಪೆಡೆಸ್ಟ್ರಿಯನ್ ಕ್ರಾಸಿಂಗ್ ಎಂದರೆ ಬೇಗ ಅರ್ಥವಾಗುತ್ತದೆ ಅಲ್ಲವೆ!)ವನ್ನು ದಾಟಲು ಕಾತರದಿಂದ ಕಾದು ನಿಂತಿರುವ ಪಥಿಕರು ಕ್ರಾಸಿಂಗಿನಲ್ಲಿ (ನಿಗದಿತ ರಸ್ತೆ ದಾಟುವ ಸ್ಥಳ) ತಮಗಾಗಿ ಅಳವಡಿಸಿರುವ ಸಿಗ್ನಲ್ ದೀಪ ಕೆಂಪಿನಿಂದ ಹಸಿರು ಬಣ್ಣಕ್ಕೆ ತಿರುಗಿದಾಗ ನಿರ್ಭಯದಿಂದ ದಾಟುವ ನಿರೀಕ್ಷಣೆಯಲ್ಲಿ ಚಡಪಡಿಸುತ್ತ ನಿಂತಿರುವ ದೃಶ್ಯ ಸರ್ವೇಸಾಮಾನ್ಯ. ಇಲ್ಲಿ ಇನ್ನೊಂದು ವಿಶೇಷವೆಂದರೆ ಎರಡೇ ಬಣ್ಣದ ದೀಪಗಳು ''ನಿಲ್ಲು'', ''ಹೋಗು'' ಎಂದು ಸೂಚನೆ ಕೊಡುತ್ತವೆ. ಇವನ್ನೆಲ್ಲ ನೋಡಿದರೆ ಎಷ್ಟು ಬ್ಯುಸಿಯಪ್ಪ ಈ ನಗರದ ಜೀವನ ಎಂದು ತಲೆ ಚಿಸಿ ಮಾಡಿಕೊಂಡರೂ ಉಪಯೋಗವಿಲ್ಲ. ನಿರ್ಧರಿತ ಸಮಯದಲ್ಲಿ ನಿರ್ಧರಿತ ಕಾರ್ಯಗಳು ನಡೆಯಬೇಕು. ಅದೇ ನಗರ ಜೀವನದ ಹೆಗ್ಗಳಿಕೆ. ವಾಹನಗಳ ಮತ್ತದರ ಚಾಲನೆಯ ಬಗ್ಗೆ ಮಾತಾಡುತ್ತಿರಬೇಕಾದರೆ ಅವೆಲ್ಲವೂ ಒಂದು ರೀತಿಯಲ್ಲಿನ ಲೆಕ್ಕಾಚಾರವನ್ನು ಹೊಂದಿರುತ್ತವೆ.

ಎರಡು ಚಕ್ರದ ಸ್ಕೂಟಿ, ಬೈಸಿಕಲ್, ಸ್ಕೂಟರ್, ಮೋಟರ್‌ಬೈಕ್, ಮೂರು ಚಕ್ರದ ಮಕ್ಕಳ ಟ್ರೈಸಿಕಲ್, ಆಟೊರಿಕ್ಷಾ, ಟೆಂಪೊ, ನಾಲ್ಕು ಚಕ್ರದ ಕಾರು, ಬಸ್ಸು, ಲಾರಿ, ಹಲವು ಚಕ್ರಗಳನ್ನೊಳಗೊಂಡಿರುವ ರೈಲು, ಅನಂತರ ಬಂದ ವಿದ್ಯುತ್ ರೈಲು – ಹೀಗೆ ಹಲವು ಪ್ರಕಾರದ ವಾಹನಗಳು ವಿವಿಧ ರೀತಿಯಲ್ಲಿ ನಮ್ಮ ಜೀವನದಲ್ಲಿ ಪ್ರಮುಖ ಸ್ಥಾನ ಪಡೆದಿವೆ.

ಮೂರು ಚಕ್ರದ ಆಟೊರಿಕ್ಷಾಗಳು ನಮ್ಮ ಕಣ್ಣ ಮುಂದೆ ದಿನನಿತ್ಯ ಓಡಾಡುತ್ತಿರುವಾಗ, ನನ್ನ ನೆನಪುಗಳು ಹಿಂದೆ ಹಿಂದೆ ಸರಿಯುತ್ತವೆ. ಸಣ್ಣವರಿದ್ದಾಗ ಮೂರು ಚಕ್ರದ ಟ್ರೈಸಿಕಲ್ಲಿನಲ್ಲಿ ಪ್ರಪಂಚವನ್ನೇ ಗೆದ್ದ ಸಂಭ್ರಮದಿಂದ ಓಡಾಡಿದ ದಿನಗಳು ನೆನಪಿನ ದೋಣಿಯಲ್ಲಿ ತೇಲಿ ಬರುತ್ತವೆ. ಬಾಲ್ಯದ ಮುಗ್ಧತೆ ಉಳಿದಿದ್ದಾಗ ಐದನೇ ಹುಟ್ಟುಹಬ್ಬದಂದು, ಉಡುಗೊರೆಯಾಗಿ ಅಪ್ಪ ತಂದು ನಿಲ್ಲಿಸಿದಾಗ ಎರಡು ಸೀಟಿನ ಟ್ರೈಸಿಕಲ್ಲನ್ನು ಮುಟ್ಟಿ ನೋಡಿ, ಅದರ ಗಂಟೆಯನ್ನು ಟ್ರಿಂಗ್-ಟ್ರಿಂಗೆಂದು ಒತ್ತಿ ಖುಷಿಪಟ್ಟಿದ್ದೆವು. ಪೆಡಲ್‌ಅನ್ನು ಒತ್ತಿ ಗಾಡಿ ಮುಂದೆ ಚಲಿಸಿದಾಗ ಅನುಭವಿಸಿದ ವಿಸ್ಮಯದ ಸಂಭ್ರಮ ಲೆಕ್ಕವಿಲ್ಲದಷ್ಟು, ಬಾಲಕರಿಗೆ ಲಭ್ಯವಾಗಿತ್ತೇ ಎಂದು ಕೇಳಿದರೆ, ಅದರ ಲೆಕ್ಕಾಚಾರವನ್ನು ಯಾರು ಮಾಡಿಲ್ಲ.

ಒಂದು ಮಗುವಿದ್ದರೆ ಸಿಂಗಲ್ ಸೀಟರ್, ಇನ್ನೊಂದು ಮಗುವಿನ ಯೋಜನೆ ರೂಪಿಸಿ ಡಬಲ್ ಸೀಟರ್ ತಂದು ನಿಲ್ಲಿಸಿದ ಅನುಭವ, ನಿಮಗೆ ನಮಗೆ, ಎಲ್ಲರಿಗೂ ಆಗಿರಬಹುದು. ಹಿಲಿಯನ್ ಸೀಟಿನ ಮೇಲೆ ಸಣ್ಣ ಮಗು; ಮತ್ತೆ ಹಿರಿಯವ ಡ್ರೈವರ್ ಸೀಟಿನಲ್ಲಿ ಕುಳಿತು ಪೆಡಲ್‌ಅನ್ನು ತುಳಿಯುವಾಗ, ಮುಖವೆಲ್ಲ ಅರಳಿ, ಆನಂದಿಸುತ್ತಿರುವ ಮಕ್ಕಳನ್ನು ನೋಡಿ ಸಂಭ್ರಮಿಸಿದ, ಲೆಕ್ಕವಿಲ್ಲದಷ್ಟು ತಂದೆ ತಾಯಂದಿರು, ಸಹಜ ಪ್ರೀತಿಯಲ್ಲಿ ಮಕ್ಕಳ ಬೆಳವಣಿಗೆಯಲ್ಲಿ ಮುಖ್ಯ ಪಾತ್ರಧಾರಿಗಳಾಗಿ ಮಿಂಚುತ್ತಿದ್ದರು.

ವಯಸ್ಸಿನಲ್ಲಿ, ಆಕಾರದಲ್ಲಿ ಬಡ್ತಿ ಹೊಂದಿದ ಮೇಲೆ ಟ್ರೈಸಿಕಲನ್ನು ತುಳಿದರೆ, ''ನೀನೇನು, ಇನ್ನೂ ಸಣ್ಣ ಹುಡುಗನೇ!'' ಎಂದು ಗೆಳೆಯ ಹಾಸ್ಯ ಮಾಡಿ ''ಇನ್ನೂ ಮೂರು ಚಕ್ರದಲ್ಲೇ ಇದ್ದಿಯಲ್ಲೋ! ಬೈಸಿಕಲ್ಲು ಕೊಡಿಸೆಂದು ಅಪ್ಪನನ್ನು ಕೇಳಿ ನೋಡು. ನನಗೆ ನಮ್ಮಪ್ಪ ತಂದಿದ್ಧಾರೆ'' ಎಂದು ಜಂಭದಿಂದ ಅದರ ಪ್ರದರ್ಶನ ಮಾಡುತ್ತ ನಿಂತರೆ ಹೊಟ್ಟೆ ಉರಿಸಿದ್ದಾನಲ್ಲಪ್ಪ ಎಂದು ದಬ್ಬಿ ಆಚೆ ಕಳುಹಿಸುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಒಂದು ಕಿಡಿ ಹಚ್ಚಿ ಹೋದಮೇಲೆ, ಅಪ್ಪನನ್ನು ಬೈಸಿಕಲ್ ಕೊಡಿಸಿರೆಂದು ಪೀಡಿಸಿ, ಕಾಡಿ ಬೇಡಿದಾಗ, ಅಪ್ಪ ಅಮ್ಮನಿಗೆ ಎಲ್ಲಿಲ್ಲದ ಆತಂಕ. ''ಬಿದ್ದು ಎದ್ದು ಗಾಯ ಮಾಡ್ಕೊಂಡ್ರೆ ಕಷ್ಟ. ಇನ್ನೊಂದು ವರ್ಷ ತಡಿ. ಆಮೇಲೆ ತಂದರಾಯ್ತು'' ಎಂದು ಸಮಜಾಯಿಷಿ ಹೇಳಿದರೆ ಸತ್ಯಾಗ್ರಹ ಶುರು ಮಾಡಿ ಅವರನ್ನು ಬಗ್ಗಿಸಿ, ಸೈಕಲ್ಲು ನನ್ನ ಕೈ ಸೇರಿದಾಗ, ನನ್ನ ಲೆಕ್ಕಾಚಾರ ತಲೆಕೆಳಗಾಗಿತ್ತು. ಅವರ ಲೆಕ್ಕದಲ್ಲಿ ನಾನಿನ್ನೂ ಸಣ್ಣವ.

ಬೈಸಿಕಲ್ಲಿನ ಮೊದಲನೇ ಅವತಾರ ಸ್ಕೂಟಿಯಾಗಿ ಅನಂತರ ಬೀಳಬಾರದೆಂದು ಜೋಡಿಸಿದ ಪುಟ್ಟ ಮೂರನೇ ಚಕ್ರವಿದ್ದ ಬೈಸಿಕಲ್ಲು ನನ್ನ ಕೈಸೇರಿದಾಗ 'ಪಾಲಿಗೆ ಬಂದದ್ದು ಪರಮಾನ್ನವೆಂದು ಅದನ್ನೇ ಸ್ವೀಕಾರ ಮಾಡಿದ್ದೆ. ಇದರಲ್ಲಿ, ಚೆನ್ನಾಗಿ ಅಭ್ಯಾಸ ಮಾಡಿದರೆ, ಮುಂದಿನ ವರ್ಷ ನಿಜವಾದ ಸೈಕಲ್ಲು ಕೊಡಿಸುವುದಾಗಿ ಹೇಳಿದ್ದರು. ಏನನ್ನೂ ಹೇಳದೇ ಯಾವ ರೀತಿಯ ಪ್ರತಿಕ್ರಿಯೆಯನ್ನೂ ತೋರದೆ ನಿಂತರೂ, ಮುಖ 'ಶುಂಠಿ ತಿಂದ ಮಂಗ' ಅಂತಾರಲ್ಲ, ಹಾಗೇ ಆಗಿತ್ತು. ಆದರೂ ಪಿತೃವಾಕ್ಯ ಪರಿಪಾಲನೆ ಮಾಡುತ್ತ ಈ ಮೊದಲನೇ ಹಂತದ ಬೈಸಿಕಲ್ಲಿನಲ್ಲೇ ದಿನಗಳನ್ನು ದೂಡಿದ್ದೆ.

ರಸ್ತೆಯ ಉದ್ದಕ್ಕೂ, ಇದೇ ಸೈಕಲ್ಲಿನ ಮೇಲೆ ಸವಾರಿ ಮಾಡುತ್ತ ಸಮಯ ಕಳೆಯುತ್ತಿದ್ದೆ.

ರಸ್ತೆಯ ಉದ್ದಕ್ಕೂ ಇದೇ ಸೈಕಲ್ಲಿನಲ್ಲಿ ಮೆರೆದಾಡಿದ ದಿನಗಳಲ್ಲಿ ವಾಹನ ಸಂಚಾರವಾಗಲಿ, ಜನಸಂಖ್ಯೆಯಾಗಲಿ ಕಡಿಮೆ ಪ್ರಮಾಣದಲ್ಲಿದ್ದವು. ಅಲ್ಲೊಂದು ಇಲ್ಲೊಂದು ನಾಲ್ಕು ಚಕ್ರದ ಮೋಟರ್ ಗಾಡಿಗಳು, ಬಸ್ಸುಗಳು ಮತ್ತು ಲಾರಿಗಳು ಓಡಾಡುತ್ತಿದ್ದವು.




ಈ ಲೆಕ್ಕಾಚಾರಕ್ಕೆ ಹೋಲಿಸಿದರೆ ಪಟ್ಟಣದಲ್ಲಿದ್ದಷ್ಟು ವಾಹನ ಸಂಚಾರ ಹಳ್ಳಿಗಳಲ್ಲಿರಲಿಲ್ಲ. ಒಂದೆತ್ತಿನ ಗಾಡಿಗಳು, ಜೋಡೆತ್ತಿನ ಗಾಡಿಗಳು, ಟಾಂಗಾಗಳಷ್ಟೇ ಓಡಾಡುತ್ತಿದ್ದವು. ಎತ್ತಿನ ಗಾಡಿಯಲ್ಲಿ ಶಾಲೆಗೆ ಬರುವವರಿದ್ದರು. ಗಂಭೀರವಾದ ಕಾಂಗೇಯಂ ಎತ್ತುಗಳು, ಒಂದು ರೀತಿಯ ತಾಳ ಲಯದಲ್ಲಿ ಕತ್ತಿನಲ್ಲಿದ್ದ ಗಂಟೆಯ ಶಬ್ದ ಮಾಡುತ್ತ ಮಂದಗತಿಯಲ್ಲಿ ಸಾಗುತ್ತಿದ್ದರೆ ನೋಡುತ್ತ ನಿಂತುಬಿಡುತ್ತಿದ್ದೆವು. ಅದರಲ್ಲಿ ಕುಳಿತು ಪ್ರಯಾಣ ಮಾಡುವುದೆಂದರೆ ಎಲ್ಲಿಲ್ಲದ ಪೈಪೋಟಿ. ನಾ ಮುಂದೆ, ತಾ ಮುಂದೆ ಎಂದು ಎಲ್ಲರಿಗೂ ಗಾಡಿ ಚಾಲಕನ ಹತ್ತಿರ ಕುಳಿತುಕೊಳ್ಳುವ ಬಯಕೆ. ಯಾರಿಗೂ ಸಮಯದ ಅಭಾವವಾಗಲಿ, ಆತುರ, ಗಡಿಬಿಡಿಯಾಗಲಿ ಇರಲಿಲ್ಲ. ಕಾಲಿಗೆ ರೆಕ್ಕೆ ಕಟ್ಟಿಕೊಂಡು ಅವಸರದ ಸೋಗು ಹಚ್ಚುವ ಜನ ಹಳ್ಳಿಗಳಲ್ಲಿ ಸಿಗುವುದು ದುರ್ಲಭ. ಸಾವಕಾಶವಾಗಿ ಊರು ತಲುಪಿದರೂ ಪ್ರಶ್ನಿಸುವವರು ಇರಲಿಲ್ಲ.

ಪ್ರಪಂಚ ಶರವೇಗದಲ್ಲಿ ಸಾಗುತ್ತಿರುವಾಗ, ಆಧುನಿಕತೆ ಲೆಕ್ಕಾಚಾರವನ್ನು ಹಾಕಿಕೊಂಡಾಗ ಹಳ್ಳಿಗಳಲ್ಲೂ ಸಹ ಬದಲಾವಣೆಯ ಗಾಳಿ ಬೀಸುತ್ತಿದೆ. ಅಲ್ಲಿಯೂ ಸಹ ಈಗ ಟ್ರ್ಯಾಕ್ಟರುಗಳು, ಮೋಟರ್‌ಸೈಕಲ್ಲುಗಳು ಮತ್ತು ಕಾರುಗಳ ಭರಾಟೆ. ರೈತಾಪಿ ಮಕ್ಕಳು ತಾವು ಯಾರಿಗೂ ಕಡಿಮೆ ಇಲ್ಲವೆಂದು ಮುಂದಿನ ಹೆಜ್ಜೆ ಇಟ್ಟಿರುತ್ತಾರೆ.

ಕುಟುಂಬದಲ್ಲಿನ ಲೆಕ್ಕಾಚಾರ ಮತ್ತೊಂದು ರೀತಿಯಲ್ಲಿ ಬಿಚ್ಚಿಕೊಳ್ಳುತ್ತದೆ. ಎರಡು ಮೂರಾದರೆ ಸಂಸಾರದಲ್ಲಿ ನಮ್ಮ ಮುಂದಿನ ಪೀಳಿಗೆಯನ್ನು ಸಂಭ್ರಮದಿಂದ ಬರ ಮಾಡಿಕೊಳ್ಳುತ್ತೇವೆ. ಮೂರು ನಾಲ್ಕಾದರೆ ನಾವಿಬ್ಬರು, ನಮಗಿಬ್ಬರು ಸಾಕೆಂದುಕೊಂಡ ಕಾಲ ಒಂದಿತ್ತು. ನಮಗೆ ಒಂದೇ ಸಾಕೆಂದುಕೊಂಡ ಕಾಲ ಬಂತಾದರೂ, ನಾವಿಬ್ಬರಾಗೇ ಉಳಿದರೆ ಸಾಕೆನ್ನುವ ಮಟ್ಟಕ್ಕೆ ತಲುಪಿರುವ ಈ ಲೆಕ್ಕಾಚಾರದ ಆಟ ಎಲ್ಲಿಗೆ ತಲುಪಿದೆಯೆಂದು ಯೋಚಿಸುತ್ತಿರುವಾಗ ಮತ್ತೆ ವಾಹನಗಳ ಕಡೆ ಹೊರಳ ಬೇಕೆನಿಸುತ್ತದೆ. ಇಬ್ಬರಿಗಾದರೆ ಸ್ಕೂಟರ್, ಬೈಕು ಸಾಕು. ಸ್ವಲ್ಪ ಮುಂದೆ ಸಾಗಿದಾಗ ಎರಡು ಚಕ್ರದ ಬೈಕಿನಲ್ಲೇ ಇಡೀ ಸಂಸಾರ ಪಯಣಿಸುವುದನ್ನು ಸಹ ಎಷ್ಟೋ ಸಲ ನೋಡಿರುತ್ತೇವೆ. ಆಟೋರಿಕ್ಷಾ, ಮೂರು ನಾಲ್ಕು ಜನರಿಗಾದರೆ, ಸ್ಥಿತಿವಂತರಿಗೆ ಕಾರು, ಸಾಮಾನ್ಯ ಮನುಷ್ಯನ ದೈನಂದಿನ ಸೌಕರ್ಯಕ್ಕೆ ಬಸ್ಸು.

ಇನ್ನೊಂದು ಲೆಕ್ಕಾಚಾರದಲ್ಲಿ, ಸುಸೂತ್ರವಾಗಿ ಪಾದಚಾರಿಗಳಾಗಿ ಉಳಿದಾಗ, ನಮ್ಮ ಎರಡು ಕಾಲುಗಳೇ ನಮ್ಮ ದ್ವಿಚಕ್ರವೆಂದುಕೊಂಡು, ನಮಗೆ ಬೇಕಾದ ವೇಗದಲ್ಲಿ ಓಡಾಡಬಹುದು. ಜಾಗಿಂಗ್, ರನ್ನಿಂಗ್ ಮಾಡಬಹುದು. ಹಿರಿಯ ನಾಗರಿಕರಿಗೆ ವಯಸ್ಸಿನ ಅಡಚಣೆಗಳು ಎದುರಾದಾಗ, ಊರುಗೋಲಿಲ್ಲದೇ ನಡೆಯುವುದು ಆಕಸ್ಮಿಕಗಳಿಗೆ ಆಹ್ವಾನ ಕೊಟ್ಟ ಹಾಗೆ ಆಗಬಾರದೆಂದು ಗುರುತಿಸಿ, ಒಂದು ಊರುಗೋಲನ್ನು ಕೈಯಲ್ಲಿ ಹಿಡಿದರೂ ಅದೇ ಮೂರನೇ ಕಾಲಾಗಿ ಕೆಲಸ ಮಾಡುತ್ತದೆ. ನಾವು ಒಂದು ರೀತಿಯಲ್ಲಿ ದ್ವಿಚಕ್ರ, ತ್ರಿಚಕ್ರ ವಾಹನವಿದ್ದ ಹಾಗೆ. ಆದರೆ ಪಾರ್ಕಿಂಗ್ ಜಾಗದ ತೊಂದರೆಯಿಲ್ಲ. ಸಾಕೆನಿಸಿದಾಗ ಆರಾಮವಾಗಿ ಪಾರ್ಕಿನ ಕಲ್ಲುಬೆಂಚಿನ ಮೇಲೆ ಕಾಲು ಚಾಚಿಕೊಂಡು ಕೂಡಲೂಬಹುದು, ಮಲಗಲೂಬಹುದು.

ಐಟಿ, ಬಿಟಿ, ಬಿಪಿಓಗಳ ದಾಳಿ ರಸ್ತೆಗಳ ಮೇಲೆ ಸರಿದುಬಂದಾಗ ಕಾಸಿಗೊಂದು, ಕೊಸರಿಗೊಂದು ಅನ್ನುವ ಹಾಗೆ ಎಲ್ಲರ ದೃಷ್ಟಿ ನಾಲ್ಕು ಚಕ್ರದ ವಾಹನಗಳತ್ತ ಹೊರಳಿದೆ. ಫುಟ್‌ಪಾತ್ ಪಾರ್ಕಿಂಗ್ ಆದರೂ ಅಡ್ಡಿಯಿಲ್ಲ, ಮನೆಯ ಮುಂದೆ ಕಾರಿರಬೇಕು. ಈಚೆಗೆ ಓದಿದ ಒಂದು ಲೇಖನ ನೆನಪಾಗುತ್ತದೆ. ಇದನ್ನು ಬರೆದ ಲೇಖಕರು ಅದನ್ನು "afflicted with affluenza", ಅಂದರೆ ಅತಿ ವೈಭವದ ಸೋಂಕು ಎಂದು ಉಲ್ಲೇಖಿಸಿರುತ್ತಾರೆ. ಅದನ್ನು ಶ್ರೀಮಂತಿಕೆಯ ಸೋಗು ಎಂದೂ ಕರೆಯುತ್ತಾರೆ. ಅವ್ಯವಸ್ಥೆಯ ಅಡ್ಡಗಾಲೊಗೆದು ಲೆಕ್ಕಾಚಾರಗಳು ತಲೆಕೆಳಗಾದರೆ, ಜನಜೀವನ ಹದಗೆಟ್ಟರೆ ಎಂದು ಲೆಕ್ಕ ಹಾಕುವಷ್ಟರಲ್ಲಿ ಸಣ್ಣ ಅಗ್ಗದ ಕಾರಿನ ಸೃಷ್ಟಿಯಲ್ಲಿ ಪೈಪೋಟಿ ನಡೆದಿದೆ.

ರಸ್ತೆಗಳ, ವಾಹನ ಪ್ರದೂಷಣೆಯ ವಾಹನ ದಟ್ಟಣೆಯ ಸಮಸ್ಯೆಗಳು ಬೃಹದಾಕಾರವಾಗಿ, ಪೆಡಂಭೂತದಂತೆ ಕಾಡುತ್ತದೆ ಎಂದು ಚಿಂತೆ ಮಾಡಬೇಕಿಲ್ಲ. ಸರಕಾರದ ಲೆಕ್ಕಾಚಾರದಲ್ಲಿ ಮೆಟ್ರೋ ರೈಲು, ಮಾನೋ ರೈಲುಗಳ ಆಗಮನ ಇದಕ್ಕೆ ಪರಿಹಾರವಾದರೂ, ಈಗಿರುವ ಕಾರುಗಳು ಮತ್ತು ಇತರ ವಾಹನಗಳಿಗೆ ಓಡಾಡುವ ವ್ಯವಸ್ಥೆ ಸಹ ಆಗಬೇಕಲ್ಲವೇ! ಡಬಲ್ ಡೆಕರ್ ಬಸ್ಸುಗಳು, ರೈಲುಗಳು ಓಡಾಡುತ್ತಿದ್ದ ಹಾಗೆ, ಟೂ-ಟಯರ್, ಥ್ರೀ-ಟಯರ್ ರಸ್ತೆಗಳ ನಿರ್ಮಾಣ ಹೆಚ್ಚಾಗಬಹುದು. ಫ್ಲೈ-ಓವರ್ ಬಗ್ಗೆ ಈಗಾಗಲೇ ನಮಗೆ ಪರಿಚಯವಿದೆ.

ಒಂದೊಂದು ಮುಗಿಲಿಗೂ ಒಂದು ಬೆಳ್ಳಿ ಗೆರೆ ಇರುತ್ತದಂತೆ. ಹಾಗೆಯೇ ಲೆಕ್ಕಾಚಾರಕ್ಕೂ, ಒಂದು ಹಂತದಲ್ಲಿ ಮಾನ್ಯತೆ ಕೊಟ್ಟು ಪೋಷಿಸಬೇಕಾಗುತ್ತದೆ.

**ಅರುಂಧತಿ ಜೋಶಿ**
ಬಿ-೦೦೩, ಕೃಷ್ಣ ಡಯಮಂಡ್ ಅಪಾರ್ಟ್‌ಮೆಂಟ್
೪೭/೨, 'ಎ' ಬ್ಲಾಕ್, ಸಹಕಾರನಗರ
ಬೆಂಗಳೂರು - ೫೬೦ ೦೯೨

ಭಾರತದಲ್ಲಿ ನಾವು ಇಂದು ಅಭಿವೃದ್ಧಿಶೀಲ ಬಂಡವಾಳದ ವ್ಯವಸ್ಥೆಯ ಹಂತದಲ್ಲಿ ಇದ್ದೇವೆ. ಯಾಜಮಾನ್ಯ ಸಂಸ್ಕೃತಿಯ ಮೌಲ್ಯಗಳು, ಸಾಮಾಜಿಕ ಸಂಸ್ಥೆಗಳು, ಬೇರುಗಳು ಕಳಚಿಕೊಳ್ಳುತ್ತಿವೆ, ಅಂತ್ಯಗೊಳ್ಳುತ್ತಿವೆ. ಅತ್ಯುಚ್ಚಮಟ್ಟ ಏರಿರುವ ನಮ್ಮ ಬಂಡವಾಳಿಗ ದೊರೆಗಳು – ಅಂಬಾನಿ ೨೦೧೭ಕ್ಕೆಲ್ಲಾ ಜಗತ್ತಿನ ಅತಿದೊಡ್ಡ ಶ್ರೀಮಂತನಾಗುತ್ತಾನೆಂದು ಈಗಷ್ಟೆ ಅಮೆರಿಕದ ಫೋರ್ಬ್ಸ್ ಪತ್ರಿಕೆ ಭವಿಷ್ಯ ನುಡಿದಿದೆ – ಅತಿ ಮುಂದುವರಿದ ಬಂಡವಳಿಗ ದೇಶಗಳೊಂದಿಗೆ, ಅದರಲ್ಲೂ ಅಮೆರಿಕದೊಂದಿಗೆ ತಮ್ಮನ್ನು ಹೋಲಿಸಿಕೊಳ್ಳುವ ತವಕದಲ್ಲಿದ್ದಾರೆ. ಈ ವ್ಯವಸ್ಥೆಯನ್ನು ಆಡಿಸುವ ಅನೇಕ ಅರ್ಥಶಾಸ್ತ್ರದ ಪದಗಳ ಅರ್ಥವನ್ನು ನಾವು ಒಂದಿಷ್ಟು ಗ್ರಹಿಸುವುದು ಸೈದ್ಧಾಂತಿಕವಾಗಿಯೂ ಸಾಮಾಜಿಕವಾಗಿಯೂ ಅಗತ್ಯ.

ಇಲ್ಲಿ ಚರ್ಚೆ ವಿದೇಶೀ ಬಂಡವಾಳ ಹೂಡಿಕೆ ಕುರಿತದ್ದು, ಅದು ಬೇಕೆ ? ಏಕೆ ಬೇಕು ? ಅದು ಹೀಗೆ ಬರುತ್ತದೆ, ಹಾಗೆ ಹೋಗುತ್ತದೆ. ಮೊದಲಿಗೆ ವಿದೇಶೀ ಬಂಡವಾಳ ಅಂದರೆ ಬೇರೆ ದೇಶದವರು ನಮ್ಮ ದೇಶದಲ್ಲಿನ ಹಲವು ರೂಪದ ಆಸ್ತಿಯಲ್ಲಿ ತಮ್ಮ ಹಣವನ್ನು ತೊಡಗಿಸುವುದು, ಹೂಡುವುದು. ಅದು ನಮ್ಮ ಪಾಲಿಗೆ ಒಳಗೆ ಬಂದ ವಿದೇಶೀ ಬಂಡವಾಳ, ಇವು ಹಲವು ರೂಪದವು. ನೇರವಾಗಿ ನಮ್ಮ ಉದ್ದಿಮೆಯೊಂದರಲ್ಲಿ ಪಾಲುದಾರರಾದರೆ ಅದು ನೇರ ಹೂಡಿಕೆ – **ಫಾರಿನ್ ಡೈರೆಕ್ಟ್ ಇನ್‌ವೆಸ್ಟ್‌ಮೆಂಟ್ – ಎಫ್‌ಡಿಐ**. ಹೊಸ ಕಂಪೆನಿಯಲ್ಲಿ ಪಾಲುಗಾರಿಕೆ, ಇರುವ ಕಂಪೆನಿಯನ್ನು ಕೊಂಡುಕೊಳ್ಳುವುದು, ತಮ್ಮ ಕಂಪೆನಿಯ ಶಾಖೆ ತೆರೆಯುವುದು. ತಂತ್ರಜ್ಞಾನ, ನಿರ್ವಹಣೆ, ಬ್ಯಾಂಕ್ ಮುಂತಾದ ಹಣಕಾಸು ಸಂಸ್ಥೆಗಳನ್ನು, ಭೂಮಿ, ಗಣಿ ಮುಂತಾದುವುಗಳನ್ನು ಕೊಳ್ಳುವುದು ಹೀಗೆ ಇಲ್ಲೆಲ್ಲಾ ವಿದೇಶಿ ಹಣ ಹೂಡಿಕೆಯಾಗಬಹುದು. ಇಂಥ ಹೂಡಿಕೆ ಮಾಡುವವರು ವಿದೇಶದ ಕಂಪೆನಿಗಳು, ವೈಯಕ್ತಿಕ ಮಾಲಿಕರು, ಬಂಡವಾಳ ಉಳ್ಳವರು, ಸರ್ಕಾರಗಳು ಆಗಿರುತ್ತವೆ. ಇದಲ್ಲದೆ, ಸಹಸ್ರಾರು ವಿದೇಶೀಯರು ಸಣ್ಣ ಸಣ್ಣ ಪ್ರಮಾಣದ ಹಣ ಉಳ್ಳವರು, ತಮ್ಮದೇ ಸಂಸ್ಥೆ ಮಾಡಿಕೊಂಡು, ಆ ಸಂಸ್ಥೆ ಈ ಹೂಡಿಕೆ ಮಾಡಬಹುದು. ಅವು **ಫಾರಿನ್ ಇನ್‌ಸ್ಟಿಟ್ಯೂಷನಲ್ ಇನ್‌ವೆಸ್ಟ್‌ಮೆಂಟ್ – ವಿದೇಶಿ ಸಾಂಸ್ಥಿಕ ಹೂಡಿಕೆ – ಎಫ್‌ಐಐ** – ಎನಿಸಿಕೊಳ್ಳುತ್ತವೆ. ಮತ್ತೊಂದು ಪದ

## ಒಂದಿಷ್ಟು ಅರ್ಥಶಾಸ್ತ್ರ

# ವಿದೇಶೀ ಬಂಡವಾಳ ಹೂಡಿಕೆ ಒಳ ಹರಿವು, ಹೊರ ಹರಿವು

ಕೇಳಿಬರುತ್ತಿರುವುದು **ಪೋರ್ಟ್‌ಫೋಲಿಯೋ ಇನ್‌ವೆಸ್ಟ್‌ಮೆಂಟ್** – ಸಣ್ಣ ಸಣ್ಣ ಹೂಡಿಕೆದಾರರು ಯಾವುದೇ ಒಂದು ಕಂಪನಿಯ ಷೇರುಗಳನ್ನು ಕೊಳ್ಳಬಹುದು, ಅಥವಾ ಅಂಥದು ಎಲ್ಲವನ್ನು ಒಂದರಲ್ಲೇ ಹೂಡಿ ಆ ಕಂಪನಿಯೇ ಮುಳುಗಿ ಹೋದರೆ ? ಹಲವಾರು ಕಂಪನಿಗಳ ಷೇರುಗಳಲ್ಲಿ ವಿನಿವೇಶ ಮಾಡುವುದು – ನಮ್ಮ ಯುಟಿಐ ಸಂಸ್ಥೆ, ಉದಾಹರಣೆಗೆ, ಇಂಥದೇ ವಿನಿವೇಶ (ಇನ್‌ವೆಸ್ಟ್‌ಮೆಂಟ್) ಮಾಡುವುದು. ಪೋರ್ಟ್‌ಫೋಲಿಯೋ ಹಾಗೂ ಎಫ್‌ಐಐಗಳು ನಮ್ಮ ಷೇರುಪೇಟೆಯಲ್ಲಿ ಈ ತರಹದ ವಿನಿವೇಶ ಮಾಡುತ್ತವೆ. ನಮ್ಮ ಷೇರುಗಳು ಬೇರೆ ದೇಶದ ಷೇರುಗಳಿಗಿಂತ ಶೀಘ್ರ ಬೆಲೆ ಏರುತ್ತವೆ ಅಥವಾ ಇಲ್ಲ ಎನ್ನುವ ಲೆಕ್ಕಾಚಾರದ ಮೇಲೆ ಈ ವ್ಯವಹಾರ - ಒಳಕ್ಕೆ ಬರುವುದು ಹೊರಗೆ ಹೋಗುವುದು ನಿರಂತರ ನಡೆಯುತ್ತಿರುತ್ತದೆ. ಇದನ್ನು ಕೆಲವು ಕಾನೂನುಗಳಿಂದ ನಿಯಂತ್ರಿಸದೆ ಹೋದರೆ ಕೆಟ್ಟ ಕಳ್ಳಕಾಕರ ಹಣ ಒಳಬರಬಹುದು ಹಾಗೂ ತೊಂಭತ್ತರ ದಶಕದಲ್ಲಿ ಪೂರ್ವ ಏಷ್ಯ ರಾಷ್ಟ್ರಗಳ ಷೇರು ಮಾರುಕಟ್ಟೆಗಳು ಕೆಲವೇ ದಿನದಲ್ಲಿ ಅಲ್ಲಿನ ವಿದೇಶಿ ಹೂಡಿಕೆ ಹೊರ ನುಸುಳಿದ್ದರಿಂದ ಅನುಭವಿಸಿದ ವಿಪರೀತ ಆಘಾತ ಇವೆಲ್ಲಾ ಆಗುತ್ತವೆ. ಇಂಥವೆಲ್ಲಾ ಅಲ್ಪಕಾಲೀನ ಹೂಡಿಕೆಗಳು. ಅದೇ ಎಫ್‌ಡಿಐ ಮತ್ತು ಎಫ್‌ಐಐಗಳು ದೀರ್ಘಕಾಲೀನ ಹೂಡಿಕೆಗಳಾಗಿದ್ದು ಅವು ನಮ್ಮಲ್ಲಿ ಉದ್ದಿಮೆಗಳನ್ನು ಬೆಳೆಸಲು ಅಗತ್ಯವಾಗುತ್ತವೆ. ವಾಣಿಜ್ಯ ವ್ಯಾಪಾರದಲ್ಲಿ, ಆಮದು ರಫ್ತುಗಳಿಂದ ಸಂಪಾದಿಸುವ ವಿದೇಶಿ ವಿನಿಮಯ ಈ ಲೆಕ್ಕಕ್ಕೆ ಸೇರುವುದಿಲ್ಲ. ಅದು ನಾವೇ ಸಂಪಾದಿಸಿದ್ದು ಬಂಡವಾಳದ ಚಮತ್ಕಾರದಲ್ಲಿ **ಕಮಾಡಿಟೀಸ್ ಮಾರುಕಟ್ಟೆ**, **ವಿದೇಶಿ ವಿನಿಮಯದ ಮಾರುಕಟ್ಟೆ** ಅಥವಾ **ಕರೆನ್ಸಿ ಮಾರುಕಟ್ಟೆ** ಮುಂತಾದುವೆಲ್ಲಾ ಇವೆ. ಇಂಥ ಮಾರುಕಟ್ಟೆಯಲ್ಲಿ ಪ್ರತಿದಿನ ಅಪಾರ ಮಟ್ಟದ ವಿದೇಶಿ ಹಣವನ್ನು ಸರಕಿನಂತೆ ಕೊಂಡುಕೊಳ್ಳುವ, ಮಾರುವ ಕ್ರಿಯೆಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಆದಕಾರಣ ಈ ಬೇರೆ ಬೇರೆ ದೇಶದ ಹಣದ ಬೆಲೆ – ಇತರ ದೇಶದ ಹಣದೊಡನೆ ವಿಷ್ಟಕ್ಕೆ ಎಷ್ಟು ಎಂದು ನಿರ್ಧಾರವಾಗುತ್ತದೆ. ಒಂದಿಷ್ಟು ಆರ್ಥಿಕ ಅಂಶಗಳ ಆಧಾರದ ಮೇಲೆ, ಬಹುವಾಗಿ ಸಟ್ಟಾ ಜೂಜಿನಂತೆ ಊಹಾಪೋಹಗಳ ಮೇಲೆ ನಡೆಯುವ ವ್ಯವಹಾರ. ವಿದೇಶಿ ಹಣದ ಹೂಡಿಕೆಗೆ ಇದು ಸೇರುವುದಿಲ್ಲ.

ವಿದೇಶಿ ಹೂಡಿಕೆ ನಮಗೆ ಬೇಕೆ ? ಜಾಗತಿಕವಾಗಿ ಅತ್ಯಂತ ಶ್ರೀಮಂತ ರಾಷ್ಟ್ರ ಅಮೆರಿಕ ಸಂಯುಕ್ತ ಸಂಸ್ಥಾನಕ್ಕೂ ಇದರ ಅಗತ್ಯವಿದೆ ಎಂದ ಮೇಲೆ ಅದೇ ಉತ್ತರ ಈ ಪ್ರಶ್ನೆಗೆ. ಬಂಡವಾಳ ಚಲಿಸುವುದು ಅತ್ಯಂತ ಹೆಚ್ಚು ಲಾಭ ಹುಡುಕಿಕೊಂಡು. ಜಾಗತಿಕ ಬಂಡವಾಳಕ್ಕೆ ಮುಕ್ತವಾಗಿ ಹರಿಯುವ ಅವಕಾಶದ ಬಯಕೆ. ನಮ್ಮಲ್ಲೂ ತೊಂಭತ್ತರ ದಶಕದಿಂದ ಈಚೆಗೆ, ಬಂಡವಾಳ ವ್ಯವಸ್ಥೆಯು ಸ್ಥಾಪನೆಗೆ ಹೊರಟದ್ದು ಯೋಜನಾಬದ್ಧ ಆರ್ಥಿಕ ವ್ಯವಸ್ಥೆಯನ್ನು ಕೈಬಿಟ್ಟ ಮೇಲೆ (ಇಂದಿನ ಯೋಜನಾ ಆಯೋಗ ಏನು ಮಾಡುತ್ತಿದೆ ಎನ್ನುವ ಚರ್ಚೆ ಇಲ್ಲಿ ನಡೆಸುತ್ತಿಲ್ಲ. ಅದರ ಉಪಾಧ್ಯಕ್ಷ ಸಂಪೂರ್ಣ ಮುಕ್ತ ಮಾರುಕಟ್ಟೆ ಬಂಡವಾಳ ವ್ಯವಸ್ಥೆಯ ಸಮರ್ಥಕ ಅರ್ಥಶಾಸ್ತ್ರಜ್ಞ ಎನ್ನುವುದು ಮುಖ್ಯ) ವಿದೇಶೀ ಬಂಡವಾಳದ ಒಳ ಹರಿವು ಹೆಚ್ಚಿದೆ. ಈ ಕುರಿತ ಕೆಲವು ಅಂಕಿ-ಅಂಶಗಳನ್ನು **ಕೋಷ್ಟಕ** - ೧ರಲ್ಲಿ ನೋಡಿರಿ.

**ಆರ್ಥಿಕವಲ್ಲದ ಹಲವಾರು ರಾಜಕೀಯ ಕಾರಣಗಳಿಂದಾಗಿ ನಮಗೆ ಅಣು ಕ್ಷೇತ್ರದಲ್ಲಿ ವಿದೇಶಿ ಬಂಡವಾಳ ದೊರೆಯದೆ ನಾವು ತುಂಬ ಶ್ರಮಿಸಬೇಕಾಯ್ತು, ಹಿಂದೆ ಬೀಳಬೇಕಾಯ್ತು. ಅದೇ ಇಂದು ಒಂದು ರೀತಿಯ ಅಂತರರಾಷ್ಟ್ರೀಯ ಒಪ್ಪಂದಕ್ಕೆ ಸಹಿ ಹಾಕಿ, ಅದನ್ನು ಪಡೆಯುವ ಸಾಧ್ಯತೆ ಹೆಚ್ಚಿದೆ. ಹೌದು, ಕಳೆದ ನಾಲ್ಕು ದಶಕದಲ್ಲಿ ನಮ್ಮ ದೇಶಭಕ್ತ ವಿಜ್ಞಾನಿಗಳು ಈ ಕ್ಷೇತ್ರದಲ್ಲಿ ಯಾರ ಸಹಾಯವೂ ಇಲ್ಲದೆ ಮಹತ್ತರ ಸಾಧನೆಗಳನ್ನು ಮಾಡಿದ್ದಾರೆ. ಆದರೂ ಅದು ಅಗತ್ಯದ ಮಟ್ಟದಲ್ಲಿ ಆಗಿಲ್ಲ; ಹಾಗೂ ಅದನ್ನು ವಿಕಾಸ ಮಾಡಲು ಬೇಕಾದ ಬಹು ಹಿರಿಯ ಪ್ರಮಾಣದ ಬಂಡವಾಳ ಮತ್ತು ಯುರೇನಿಯಂ ಥರದ ಮೂಲ ವಸ್ತುಗಳು ನಮ್ಮಲ್ಲಿ ಸಾಕಷ್ಟಿಲ್ಲ. ಈ ಕ್ಷೇತ್ರದಲ್ಲಿ ಅಪಾರವಾದ ವಿಸ್ತಾರದ ಬೆಳವಣಿಗೆ ನಮಗೆ ಇಂದು ತ್ವರಿತವಾಗಿ ಆಗುವ ಜರೂರಿದೆ. ಪಶ್ಚಿಮ ರಾಷ್ಟ್ರಗಳು ಅಣುಶಕ್ತಿಯನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಲು ಮುಖ್ಯ ಕಾರಣ ಬಾಂಬಿನ ಭೀತಿಯಲ್ಲ, ಅದು ನೆಪ ಅಷ್ಟೆ. ಅದು ಭವಿಷ್ಯದ ಅತಿ ಮೌಲ್ಯದ ಆರ್ಥಿಕ ಸರಕಾಗಿರುವುದರಿಂದ. ನಮಗೆ ಅವರ ರಿಯಾಕ್ಟರ್ ನೀಡಲು ಅವರು ಒಡ್ಡಿರುವ ವಾಣಿಜ್ಯ ಷರತ್ತುಗಳು ಇದನ್ನು ಸ್ಪಷ್ಟಪಡಿಸುತ್ತವೆ. ಅಂಥ ಪರಿಸ್ಥಿತಿಯಲ್ಲಿ ನಾವು ಬಂಡವಾಳ ಬೇಡಿದಾಗ, ಅದನ್ನು ನೀಡುವವರು ವಿಧಿಸುವ ಅನ್ಯಾಯವೆನಿಸುವ ಷರತ್ತುಗಳು, ರಾಜಕೀಯ ತೀರ್ಮಾನಗಳು, ನಮ್ಮ ಸಾರ್ವಭೌಮತ್ವವನ್ನು ಸ್ವಲ್ಪ ಕುಗ್ಗಿಸುವ ವಿಧಿಗಳನ್ನು ಒಪ್ಪಿ ಕೊಳ್ಳುವ ಅನಿವಾರ್ಯತೆಗೆ ಒಳಗಾಗಿದ್ದೇವೆ.**

**ಕೆ. ಎಸ್. ಪಾರ್ಥಸಾರಥಿ**

**ಕೋಷ್ಟಕ - ೧**

**ಕೆಲವು ಮುಖ್ಯ ರಾಷ್ಟ್ರಗಳಿಂದ ಭಾರತದಲ್ಲಿ ವಿದೇಶಿ ಬಂಡವಾಳದ ನೇರ ಹೂಡಿಕೆ - ಎಫ್‌ಡಿಐ (೨೦೦೦ - ಜೂನ್ ೨೦೧೦)**

*(ಮೂಲ : ವಾಣಿಜ್ಯ ಮಂತ್ರಾಲಯ)*

| ಪ್ರಮುಖ ರಾಷ್ಟ್ರಗಳು | ಒಟ್ಟು (ಕೋಟಿ ರೂ.) | ಒಟ್ಟಿನ ಶೇಕಡ |
|---|---|---|
| ಮಾರಿಷಸ್ | ೨,೧೯,೪೨೬ | ೪೨ |
| ಸಿಂಗಪೂರ | ೪೯,೩೯೨ | ೧೬ |
| ಅಮೆರಿಕಾ ಸಂ.ಸಂ. | ೩೮,೩೫೧ | ೭ |
| ಇಂಗ್ಲೆಂಡ್ | ೨೬,೭೦೬ | ೫ |
| ನೆದರ್‌ಲ್ಯಾಂಡ್ | ೨೧,೬೯೧ | ೪ |
| ಜಪಾನ್ | ೧೮,೮೬೧ | ೪ |
| ಸೈಪ್ರೆಸ್ | ೧೮,೨೬೩ | ೪ |
| ಜರ್ಮನಿ | ೧೨,೬೫೭ | ೨ |
| ಯುಎಇ | ೭,೫೫೩ | ೧ |
| ಫ್ರಾನ್ಸ್ | ೭,೨೩೧ | ೧ |
| **ಒಟ್ಟು** | ೫,೪೨,೯೨೧ | ೮೦ |

*ಗಮನಿಸಿ :* ೧. ಅಷ್ಟೇನೂ ದೊಡ್ಡ ದೇಶ, ಆರ್ಥಿಕ ವ್ಯವಸ್ಥೆ ಅಲ್ಲದ ಮಾರಿಷಸ್‌ನಿಂದ ಹೇಗೆ ಅಷ್ಟೊಂದು ಹಣ ಬರಲು ಸಾಧ್ಯ ? ನಮ್ಮವರದೇ ಒಳದಾರಿಯದೆ ?

೨. ನಮಗೆ ಬಂಡವಾಳ ನೀಡಲು ಅಷ್ಟೊಂದು ಗಲಾಟೆ ಎಬ್ಬಿಸಿ, ಎಲ್ಲ ವಿಧದ ವಿನಾಯ್ತಿ ಕೇಳುವ ಪಶ್ಚಿಮದ ಮತ್ತು ಜಪಾನಿನ ಪಾತ್ರ ಎಷ್ಟು ಕಡಿಮೆ !

ನಾವು ಕೇವಲ ವಿದೇಶಿ ನೆರವಿನ ಮೇಲೆ, ಅವುಗಳು ಒಡ್ಡುವ ಷರತ್ತುಗಳ ನಿರ್ಬಂಧಕ್ಕೆ ಒಳಗಾಗಿ, ಅವಲಂಬಿಸಿದ್ದ ಒಂದು ಕಾಲವಿತ್ತು. ಅದು ಯಾವಾಗಲೂ ವಾರ್ಷಿಕ ಐದು ಬಿಲಿಯನ್ ಡಾಲರಿಗಿಂತ ಏರಿರಲಿಲ್ಲ. ಈ ಪರಿಸ್ಥಿತಿಯನ್ನು ಸ್ವಲ್ಪಮಟ್ಟಿಗೆ ಉತ್ತಮಪಡಿಸಿಕೊಳ್ಳಲು ರಾಜೀವ್ ಗಾಂಧಿ ಕಾಲದಲ್ಲಿ ಹಲವಾರು ಕಠಿಣ ಷರತ್ತುಗಳಿಗೆ ಒಪ್ಪಿ ವಿಶ್ವ ಬ್ಯಾಂಕ್, ವಿಶ್ವ ಹಣಕಾಸು ಸಂಸ್ಥೆಯಿಂದ ಒಂದಿಷ್ಟು ವಿದೇಶಿ ಬಂಡವಾಳ ಪಡೆದಿದ್ದೆವು. ಷರತ್ತುಗಳು ನಮ್ಮ ಯೋಜನಾ ಮಾರ್ಗ ಬಿಟ್ಟು, ಮುಕ್ತ ಮಾರುಕಟ್ಟೆಯ ಬಂಡವಾಳದ ಹಾದಿಯನ್ನು ಅನುಸರಿಸುವುದು ಎಂದು ಅರ್ಥ. ಅದು ಆರ್ಥಿಕವಾಗಿ ಯಾವ ವಿಕಾಸವನ್ನೂ ಸಾಧಿಸದೆ ನಮ್ಮ ವಾಣಿಜ್ಯ ಆಯಾತ ನಿರ್ಯಾತ ಸೋತು, ನಮ್ಮಲ್ಲಿ ದಾಸ್ತಾನಿದ್ದ ವಿದೇಶಿ ಹಣ ಸಂಗ್ರಹ ಶೂನ್ಯವಾಗುವ ಪರಿಸ್ಥಿತಿಗೆ ನಮ್ಮನ್ನು ದೂಡಿತು. ೧೯೯೧ರಲ್ಲಿ ಅದು ನಮ್ಮಲ್ಲಿದ್ದ ಚಿನ್ನವನ್ನು ಅಡವಿಟ್ಟು ಕೇವಲ ಅರ್ಧ ಬಿಲಿಯನ್ ಡಾಲರ್ ಸಾಲ ತೆಗೆಯುವ ದಯನೀಯ ಪರಿಸ್ಥಿತಿಗೆ ದೂಡಿತ್ತು. ರಾಜೀವರ ಅರ್ಥನೀತಿ ಮನಮೋಹನರ ಅರ್ಥನೀತಿಗೆ ದಾರಿ ಮಾಡಿಕೊಟ್ಟಿತು. ಆ ಸನ್ನಿವೇಶದ ಲಾಭ ಪಡೆದುಕೊಂಡ ಆಳುವ ವರ್ಗ ಸಂಪೂರ್ಣವಾಗಿ ನಮ್ಮ ಅರ್ಥನೀತಿಯನ್ನು ಬದಲಾಯಿಸಿ, ಮುಕ್ತ ಮಾರುಕಟ್ಟೆಯ ಬಂಡವಳಿಗ ಮಾರ್ಗವನ್ನು ಅಪ್ಪಿಕೊಂಡಿತು. ಸೋವಿಯತ್ ರಷ್ಯಾ ಪತನವಾಗಲು ಒಂದು ಮುಖ್ಯ ಕಾರಣ ಅದಕ್ಕೆ ಅಗತ್ಯವಿದ್ದ ವಿದೇಶಿ ಬಂಡವಾಳವನ್ನು ಅದಕ್ಕೆ ಸೈದ್ಧಾಂತಿಕ ವಿರೋಧದಿಂದಾಗಿ ನೀಡಲಿಲ್ಲವಾದ್ದರಿಂದ. ಎಪ್ಪತ್ತರ ದಶಕದಲ್ಲೇ, ಸೋವಿಯತ್ ಪತನಕ್ಕೂ ಮುಂಚೆ ಚೀನಾ ತನ್ನ ಸಿದ್ಧಾಂತಗಳೊಡನೆ ರಾಜಿ ಮಾಡಿಕೊಂಡು ವಿದೇಶಿ ಬಂಡವಾಳಕ್ಕೆ ಮುಕ್ತ ಪ್ರವೇಶ ನೀಡಿತು – ಅದಕ್ಕೆಂದೇ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸಿಕೊಟ್ಟಿತು. ಇಂದು ಅದು ಅತ್ಯಂತ ಹೆಚ್ಚು ವಿದೇಶಿ ಬಂಡವಾಳದ ಹೂಡಿಕೆಯನ್ನು ಪಡೆಯುತ್ತಿದೆ. ರಾಜಕೀಯ ಕಾರಣಗಳಿಂದಾಗಿ ಸೋವಿಯತ್ ರಷ್ಯಾಕ್ಕೆ ವಿದೇಶಿ ಬಂಡವಾಳ ಹೂಡಿಕೆಯನ್ನು ನಿರಾಕರಿಸಿದಂತೆ, ಚೀನಾದಲ್ಲಿ ಅತಿ ಹೆಚ್ಚಿನ ವಿದೇಶಿ ಬಂಡವಾಳವನ್ನು ಹೂಡುವುದರಿಂದ, ಅಲ್ಲಿಯ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸಬಹುದು ಎಂಬ ಎಣಿಕೆ ಸಾಮ್ರಾಜ್ಯಶಾಹಿಗೆ ಇತ್ತು ಎನಿಸುತ್ತದೆ. ಪಾಕಿಸ್ತಾನದ ಮಧ್ಯಸ್ತಿಕೆಯಲ್ಲಿ ರಹಸ್ಯವಾಗಿ ನಿಕ್ಸನ್-ಕಿಸಿಂಗರ್ ಚೀನಾಕ್ಕೆ ಹೋದದ್ದನ್ನು ಜ್ಞಾಪಿಸಿಕೊಳ್ಳಿ. ಅದು ಈಗ ಕೈಗೂಡುತ್ತಿದೆ ಎಂದೆನಿಸುತ್ತದೆ. ಅಲ್ಲಿಯ ಪ್ರವರ್ಧಮಾನ ಬಂಡವಾಳ ವ್ಯವಸ್ಥೆ ಚೀನಿ ಮಾದರಿ ಸಮಾಜವಾದವಂತೆ! ಅಂದರೆ ರಾಜಕೀಯ ಕಾರಣಗಳಿಗಾಗಿ, ಮುಕ್ತ ಮಾರುಕಟ್ಟೆಯ ಪ್ರತಿಪಾದಕರು ವಿದೇಶಿ ಬಂಡವಾಳದ ಹೂಡಿಕೆಯನ್ನು ನೀಡುವ ಇಲ್ಲವೆ ನಿರಾಕರಿಸುವ ತಂತ್ರ ಹೂಡಿ, ರಾಷ್ಟ್ರಗಳನ್ನು ಬಗ್ಗುಬಡಿಯುತ್ತಾರೆ. ದಕ್ಷಿಣ ಅಮೆರಿಕದಲ್ಲಿ ಶತಮಾನಗಳ ಕಾಲ ಈ ಶೋಷಣೆಗೆ ಸಿಕ್ಕ ರಾಷ್ಟ್ರಗಳು ಈಗ ಸೆಡ್ಡುಹೊಡೆದು ಸ್ವತಂತ್ರವಾಗಿ ನಿಲ್ಲುವ ದೊಡ್ಡ ಪ್ರಯೋಗದಲ್ಲಿ ತೊಡಗಿವೆ. ನಾವಾದರೋ ಸಂಪೂರ್ಣವಾಗಿ ಅಮೆರಿಕದ ವ್ಯವಸ್ಥೆಯೊಡನೆ ಸಮೀಕರಿಸಿಕೊಳ್ಳುತ್ತಿದ್ದೇವೆ! ಗುಲಾಮರಾಗುತ್ತಿದ್ದೇವೆ ಅಂದರೆ ಕೋಪಿಸಿಕೊಂಡಾರು! ಎಷ್ಟಾದರೂ ಇಬ್ಬರದೂ ಪ್ರಜಾಪ್ರಭುತ್ವ ವ್ಯವಸ್ಥೆ ಅಲ್ಲವೆ? ಈ ಸಂದರ್ಭದಲ್ಲಿ ಹೊಸತು ಮಾರ್ಚ್ ೨೦೦೧ರಂದು ಪ್ರಕಟಿಸಿದ **ಅಂತರರಾಷ್ಟ್ರೀಯ ಬಂಡವಾಳ ಹೂಡಿಕೆ ಒಪ್ಪಂದ** ಎಂಬ ಲೇಖನವನ್ನು ಮತ್ತೊಮ್ಮೆ ಓದಿಕೊಳ್ಳಬಹುದು.

ವಿದೇಶಿ ಬಂಡವಾಳ ಬೇಕು. ಅದು ಮುಂದುವರಿದ ಅರ್ಥ ವ್ಯವಸ್ಥೆಯ ಸ್ಥಾಪನೆಗೆ ಅವಕಾಶ ತಂದುಕೊಡುತ್ತದೆ. ಸಾಮಾನ್ಯವಾಗಿ ಮುಂದುವರಿದ ತಂತ್ರಜ್ಞಾನ, ಉತ್ತಮವೆನಿಸುವ ನಿರ್ವಹಣ ತಂತ್ರ, ಯಂತ್ರ ಸಾಮಗ್ರಿಗಳು, ನುರಿತ ತಂತ್ರಜ್ಞರು, ತಂತ್ರಜ್ಞಾನದಲ್ಲಿ ತರಬೇತಿ ಇವೆಲ್ಲಾ ದಕ್ಕಿ, ನಮ್ಮದೇ ವ್ಯವಸ್ಥೆಗೆ ಲಾಭವಾಗುತ್ತದೆ. ಹಿಂದುಳಿದ ಅರ್ಥ ವ್ಯವಸ್ಥೆಯಲ್ಲಿ ಆಧುನಿಕ ಉದ್ಯಮಗಳು ಸೃಷ್ಟಿಯಾಗುತ್ತವೆ. ಸಾಕಷ್ಟು ಉದ್ಯೋಗ ಸೃಷ್ಟಿಯಾಗುತ್ತದೆ. ಒಟ್ಟಾರೆ ಉತ್ಪಾದಕತೆ, ಗುಣಮಟ್ಟ ಹೆಚ್ಚುತ್ತದೆ. ರಫ್ತು ಬೆಳೆಯಲು ಸಾಧ್ಯವಾಗುತ್ತದೆ. ಇವೆಲ್ಲಾ ಧನಾತ್ಮಕ ಪರಿಣಾಮಗಳು. ವ್ಯಾಪಾರದೊಂದಿಗೇ ಅನಿವಾರ್ಯವಾಗಿ ಬರುವ

**ಕೋಷ್ಟಕ - ೨**

**ಎಫ್‌ಐಪಿಬಿ ವಿದೇಶಿ ಹೂಡಿಕೆಯನ್ನು ನಿಯಂತ್ರಿಸುವ ಕೆಲವು ಮಾಹಿತಿಗಳು**

| ಕ್ಷೇತ್ರ | ಶೇಕಡವಾರು ಈಕ್ವಿಟಿ ಬಂಡವಾಳದ ಮಿತಿ | ಷರತ್ತುಗಳು |
|---|---|---|
| ಖಾಸಗಿ ಬ್ಯಾಂಕುಗಳಲ್ಲಿ | ೭೪ | ರಿಸರ್ವ್ ಬ್ಯಾಂಕ್ ಅನುಮತಿ, ಶಾಖೆಗಳ ಸಂಖ್ಯೆಯ ನಿಗದಿ... |
| ಸರ್ಕಾರಿ ಬ್ಯಾಂಕು | ೨೦ | ಪೂರ್ವಾನುಮತಿ |
| ವಿಮೆ | ೨೬ | ವಿಮಾ ನಿಯಂತ್ರಣ ಪ್ರಾಧಿಕಾರದಿಂದ ಅನುಮತಿ |
| ಸರಕುಗಳ ಮಾರುಕಟ್ಟೆ | ೪೯ | -- |
| ಟೆಲಿಕಮ್ಯುನಿಕೇಷನ್ | ೭೪ | ೪೯%ರ ವರೆಗೆ ಅನುಮತಿ ಬೇಕಿಲ್ಲ, ನಂತರ ಎಫ್‌ಐಬಿಬಿ ಅನುಮತಿ |
| ವ್ಯಾಪಾರ | ೫೧ | -- |
| ರಫ್ತು ವ್ಯಾಪಾರ | ೧೦೦ | ಕೆಲವು ಷರತ್ತುಗಳು |
| ಮೂಲ ಸೌಕರ್ಯಗಳು | ೪೯ | ಎಫ್‌ಐಪಿಬಿ ಅನುಮತಿ |
| ವಿಮಾನ ಯಾನ | ೪೯ | ಅನಿವಾಸಿ ಭಾರತೀಯರಿಗೆ ಅವಕಾಶವಿಲ್ಲ. |
| ರಕ್ಷಣಾ ಉತ್ಪಾದನೆ | ೨೬ | ಎಫ್‌ಐಪಿಬಿ ಅನುಮತಿ ಇತ್ಯಾದಿ |
| ಮುದ್ರಣ ಮಾಧ್ಯಮ (ಪತ್ರಿಕೆಗಳು) | ೨೬ | ಎಫ್‌ಐಪಿಬಿ ಅನುಮತಿ |

*ಗಮನಿಸಿ :* ೧. ಶೇ. ಎಷ್ಟು ಈಕ್ವಿಟಿ ಅನ್ನುವುದು ನಿರ್ವಹಣಾ ಮಂಡಲಿಯಲ್ಲಿ ಅಧಿಕಾರವನ್ನು ಪಾಲುಗಾರಿಕೆಯನ್ನು ಸೂಚಿಸುತ್ತದೆ. ಷೇರಿಗಿಂತ ಭಿನ್ನವಾದುದು.

೨. ಅನುಮತಿಯ ಮಾರ್ಗ ಅಂದರೆ, ಪ್ರಸ್ತಾವನೆಯಿಂದ ಆಗುವ ಪ್ರಯೋಜನ-ತೊಂದರೆಗಳನ್ನು ಗಮನಿಸಿ, ಷರತ್ತು ಹಾಕುವ ಮಾರ್ಗ.

೩. ವ್ಯಕ್ತಿ ಅಥವಾ ಕಂಪನಿಗಳು ಸಂಪಾದಿಸುವ ಲಾಭವನ್ನು ಎರಡೂ ದೇಶಗಳಲ್ಲೂ ತೆರಿಗೆ ವಿಧಿಸದ ಒಪ್ಪಂದಗಳು, ಹೂಡಿಕೆಗೆ ನೀಡುವ ಪ್ರೋತ್ಸಾಹದಲ್ಲಿ ಒಂದು.

ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ಪರಿಣಾಮಗಳು ನಮ್ಮ ಸಮಾಜ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸುತ್ತವೆ. ನಾವು ಈಗ ವಿಶ್ವದಲ್ಲೇ ಅತಿ ಹೆಚ್ಚು ಮದ್ಯ ತಯಾರಿಸುತ್ತೇವೆ !? ಕೋಕಾಕೊಲಾಗೆ ಆದ್ಯತೆ ನೀಡಿದ್ದೇವೆ ! ಇಂಥ ಪರಿಣಾಮಗಳೂ ಉಂಟು ! ಒಪ್ಪಿಕೊಳ್ಳುವ ಷರತ್ತುಗಳು ಬಂಡವಾಳ ವ್ಯವಸ್ಥೆಯ ಸ್ವರೂಪದ್ದಾಗಿದ್ದು, ಪ್ರಜಾಪ್ರಭುತ್ವವನ್ನು ಬುಡಮೇಲು ಮಾಡುವಷ್ಟು ಸಂಪತ್ತಿನ ಕೇಂದ್ರೀಕರಣ, ಸಂಪತ್ತಿನ ಹಂಚಿಕೆಯಲ್ಲಿ ಅಪಾರ ಅಸಮತೋಲನ, ಪ್ರಾದೇಶಿಕ ಅಸಮತೋಲನ ಉಂಟಾಗುತ್ತದೆ. ವಿಶೇಷ ಆರ್ಥಿಕ ವಲಯದ ಉದ್ದೇಶವೇ ವಿದೇಶಿ ಬಂಡವಾಳಕ್ಕೆ, ಆಂತರಿಕವಾಗಿ ನಮ್ಮದೆ ಬಂಡವಳಿಗರಿಗೂ ನೀಡದ ತೆರಿಗೆ ವಿನಾಯ್ತಿ, ಕಾರ್ಮಿಕ ಕಾನೂನುಗಳಿಂದ ವಿನಾಯ್ತಿ (ಅದಕ್ಕೆ ಅವುಗಳನ್ನು ಸ್ವೆಟ್‌ಷಾಪ್-ಬೆವರಿನ ಕಾರ್ಖಾನೆ ಎನ್ನುವುದು) ಕೊರತೆ ಇರುವ ಮೂಲ ಸೌಕರ್ಯ ಮತ್ತು ಕಚ್ಚಾವಸ್ತುಗಳನ್ನು ಒದಗಿಸುವಲ್ಲಿ ಆದ್ಯತೆ, ತಾರತಮ್ಯ ಹೀಗೆಲ್ಲಾ ಅನುಕೂಲ ಕಲ್ಪಿಸುವುದು. ಉದಾಹರಣೆಗೆ, ಬಿಡದಿಯಲ್ಲಿ ಟೊಯೋಟಾ ಕಂಪನಿ ಬರಬೇಕಾದರೆ ಅವರಿಗೆ ಗೋಲ್ಫ್ ಕ್ಲಬ್ಬಿಗೆ ಜಾಗವನ್ನು ಕೊಡಬೇಕು ! ಪರಿಣಾಮ ಹಲವು ಹಂತದಲ್ಲಿ ನಮ್ಮ ಸಾರ್ವಭೌಮತ್ವ ಮುಕ್ಕಾಗುತ್ತದೆ. ನಮ್ಮ ದೇಶದ ಅತ್ಯುನ್ನತ ಹಂತದ ಬಂಡವಳಿಗರಿಗೆ ವಿದೇಶಗಳಲ್ಲಿ ಅವರದೇ ಬಂಡವಾಳವನ್ನು ಹೂಡುವ ಅವಕಾಶ ದೊರೆಯುವುದರಿಂದ ಅವರಿಗೆ ಇದೆಲ್ಲಾ ಸ್ವಾಗತವೆನಿಸುತ್ತದೆ. ಮಧ್ಯಮ ಮತ್ತು ಕೆಳಮಟ್ಟದ ಉದ್ಯಮಿಗಳಿಗೆ, ಸಣ್ಣ ಲಘು ಉದ್ಯಮಿಗಳಿಗೆ, ಕಾರ್ಮಿಕರಿಗೆ ಇದು ಅಸಹ್ಯ ಪರಿಸ್ಥಿತಿಯನ್ನು ಉಂಟುಮಾಡುತ್ತದೆ. ಈ ಎರಡೂ ಪರಿಸ್ಥಿತಿಯನ್ನು ತುಲನೆ ಮಾಡಿ ಕೈಗಾರಿಕಾ ನೀತಿಯನ್ನು ಸರ್ಕಾರ ಎಷ್ಟರಮಟ್ಟಿಗೆ ನಿರ್ವಹಿಸಬಲ್ಲದು ಎಂಬುದು ಮುಖ್ಯ ವಿಷಯವಾಗುತ್ತದೆ. ವಿದೇಶಿ ನೇರ ಹೂಡಿಕೆಗೆ ಸಂಬಂಧಪಟ್ಟಂತೆ ಪ್ರಸ್ತಾವನೆಗಳಿಗೆ ಎಷ್ಟು, ಹೇಗೆ, ಎಲ್ಲಿ, ಎಂದು ಅನುಮತಿ ನೀಡುವ ಸಂಸ್ಥೆ **ಫಾರಿನ್ ಇನ್‌ವೆಸ್ಟ್‌ಮೆಂಟ್ ಪ್ರಮೋಷನ್ ಬೋರ್ಡ್ – ಎಫ್‌ಐಪಿಬಿ – ವಿದೇಶಿ ವಿನಿವೇಶ ಪ್ರೋತ್ಸಾಹಕ ಮಂಡಳಿ**. ಇದರ ನೀತಿಯನ್ನು ಪ್ರತಿಬಿಂಬಿಸುವ ಮಾಹಿತಿಯನ್ನು **ಕೋಷ್ಟಕ - ೨** ಸೂಚಿಸುತ್ತದೆ. ಉದಾಹರಣೆಗೆ, ಇಲ್ಲಿ ಗಮನಿಸಿ – ವಿದೇಶಿ ಹೂಡಿಕೆಗೆ ವಿಮಾ ಕ್ಷೇತ್ರದಲ್ಲಿ ಶೇಕಡ ೨೫ರಷ್ಟು ಬಂಡವಾಳ ಮಿತಿ ಇದೆ. ಬಲಪಕ್ಷಗಳು ಇದನ್ನು ಕ್ರಮವಾಗಿ ಹೆಚ್ಚಿಸಿ, ಮುಕ್ತಗೊಳಿಸಬೇಕೆಂದು ಅಪೇಕ್ಷಿಸುತ್ತವೆ; ಎಡಪಕ್ಷಗಳು, ಕಾರ್ಮಿಕರು ಇದನ್ನು ವಿರೋಧಿಸುತ್ತಿದ್ದಾರೆ.

ಅದರಂತೆಯೇ ಬ್ಯಾಂಕಿಂಗ್ ಕ್ಷೇತ್ರದಲ್ಲಿನ ಚರ್ಚೆ ಶೇಕಡ ೨೫, ೫೦ ಅಂದರೆ ವಿದೇಶಿಯರಿಗೆ ಆ ಕಂಪನಿಯ ಆಡಳಿತ ಮಂಡಳಿಯಲ್ಲಿ ಎಷ್ಟು ಅಧಿಕಾರ ಅನ್ನುವ ವಿಷಯ. ಕೆಲವು ಒಪ್ಪಂದಗಳಲ್ಲಿ ನಿರ್ವಹಣೆ ಭಾರತೀಯರದು. ಆದರೆ ಬಂಡವಾಳ ವಿದೇಶೀಯರದು ಎಂದೂ ಇರುವುದುಂಟು. ಕೆಲವು ಆರ್ಥಿಕ ಕ್ಷೇತ್ರಗಳು ರಾಷ್ಟ್ರದ ಆಂತರಿಕ ರಕ್ಷೆಯನ್ನು ನೀಡುವಂಥ ಸ್ವರೂಪದವು. ಅವುಗಳಲ್ಲಿ ವಿದೇಶಿಯರು ಪ್ರವೇಶಿಸಿ, ಮುಕ್ತವಾಗಿ ವ್ಯವಹರಿಸಿದರೆ, ವಸಾಹತುಶಾಹಿ ಕಾಲದಂತೆ ಪರಾಧೀನತೆ ಉಂಟಾಗಬಲ್ಲುದು. ಇದು ದಕ್ಷಿಣ ಅಮೆರಿಕ ದೇಶಗಳ ಅನುಭವ. ಈಸ್ಟ್ ಇಂಡಿಯಾ ಕಂಪನಿಯ ನಮ್ಮ ಅನುಭವಗಳು ಹಳೆಯ ಕಾಲದ್ದಾದರೂ ಮರೆಯುವಂಥವಲ್ಲ ಅಥವಾ ಹೀಗೆ ಹೇಳಬಹುದು: ವಿದೇಶಿ ಬಂಡವಾಳ ಬೇಕು, ಆದರೆ ಅದರ ಮೇಲೆ ಲಗಾಮಿರಬೇಕು. ನಮ್ಮ ಬಂಡವಾಳಕ್ಕಿಂತ ಅದು ಎಂದೂ ವಿಪರೀತ ಹೆಚ್ಚಾಗಬಾರದು. ಯುದ್ಧವೋ, ಮನಸ್ತಾಪವೋ ಎಂದು ವಿದೇಶಿ ಬಂಡವಾಳವನ್ನು ಮುನ್ಸೂಚನೆಯಿಲ್ಲದೆ ಹಿಂತೆಗೆದುಕೊಳ್ಳಬಹುದಾದ ಸಂದರ್ಭವನ್ನು ಊಹಿಸಿ, ಅದಕ್ಕೆ ತಕ್ಕಂತೆ ನಮ್ಮ ನಮ್ಮ ನೀತಿಗಳನ್ನು ನಿರ್ಮಿಸಿಕೊಳ್ಳಬೇಕಾಗುತ್ತದೆ. ಈ ಆತಂಕಗಳು ವಾಸ್ತವವೆಂಬ ಉದಾಹರಣೆಗಳು ಇತಿಹಾಸದಲ್ಲಿ ಪದೇಪದೇ ದೊರೆಯುತ್ತವೆ. ನಾವು ಬನಾನಾ ರಿಪಬ್ಲಿಕ್ ಆಗಬಾರದು. ಆರ್ಥಿಕ ಅಭಿವೃದ್ಧಿ ರಾಜಕೀಯ ಸ್ವತಂತ್ರವನ್ನು ರಕ್ಷಿಸಿಕೊಳ್ಳಲು ಅಗತ್ಯ. ಜಾಗತೀಕರಣವನ್ನು ವಿರೋಧಿಸುವ ಕಾರಣಗಳೆ ಬೇರೆ. ವಿದೇಶೀ ಬಂಡವಾಳ ಬೇಡವೇ ಬೇಡ, ಅಗತ್ಯವಿಲ್ಲ ಎಂಬುದು ಅಷ್ಟು ಸರಿಯಲ್ಲ. ಅತ್ಯಂತ ಶ್ರೀಮಂತ ರಾಷ್ಟ್ರಕ್ಕೂ ವಿದೇಶೀ ಬಂಡವಾಳ ಅಭಿವೃದ್ಧಿಗೆ ಅಗತ್ಯ. ಜಪಾನಿನ, ಜರ್ಮನಿಯ ಅತ್ಯಾಧುನಿಕ ತಂತ್ರಜ್ಞಾನ ಅಮೆರಿಕದ ಅರ್ಥವ್ಯವಸ್ಥೆಗೆ ದೊರೆಯುವುದು ವಿದೇಶೀ ಬಂಡವಾಳದಿಂದ. ಭಾರತ ಇಂದು ಸ್ವಲ್ಪಮಟ್ಟಿಗೆ ಉಕ್ಕು, ಕಬ್ಬಿಣ ಕೈಗಾರಿಕೆಯಲ್ಲಿ ಜಾಗತಿಕ ಮಟ್ಟದಲ್ಲಿ ಹಾಗೂ ಸ್ವಯಂ ನಿರ್ಧಾರವನ್ನು ಸಾಧಿಸಿದ್ದರೆ ಅದಕ್ಕೆ ಕಾರಣ ನಮಗೆ ಅಂದು ದೊರೆತ ರಷ್ಯಾ, ಇಂಗ್ಲೆಂಡ್ ಮತ್ತು ಜರ್ಮನಿಯ ತಂತ್ರಜ್ಞಾನ ರೂಪದ ಬಂಡವಾಳದಿಂದ.

ಆರ್ಥಿಕವಲ್ಲದ ಹಲವಾರು ರಾಜಕೀಯ ಕಾರಣಗಳಿಂದಾಗಿ ನಮಗೆ ಅಣು ಕ್ಷೇತ್ರದಲ್ಲಿ ವಿದೇಶಿ ಬಂಡವಾಳ ದೊರೆಯದೆ ಹಿಂದೆ ಬೀಳಬೇಕಾಯ್ತು. ಇಂದು ಒಂದು ರೀತಿಯ ಅಂತರರಾಷ್ಟ್ರೀಯ ಒಪ್ಪಂದಕ್ಕೆ ಸಹಿ ಹಾಕಿ, ಅದನ್ನು ಪಡೆಯುವ ಸಾಧ್ಯತೆ ಹೆಚ್ಚಿದೆ. ಕಳೆದ ನಾಲ್ಕು ದಶಕಗಳಲ್ಲಿ ನಮ್ಮ ದೇಶಭಕ್ತ ವಿಜ್ಞಾನಿಗಳು ಈ ಕ್ಷೇತ್ರದಲ್ಲಿ ಯಾರ ಸಹಾಯವೂ ಇಲ್ಲದೆ ಮಹತ್ತರ ಸಾಧನೆಗಳನ್ನು ಮಾಡಿದ್ದಾರೆ. ಆದರೂ ಅದು ಅಗತ್ಯದ ಮಟ್ಟಕ್ಕೆ ಆಗಿಲ್ಲ; ಹಾಗೂ ಅದನ್ನು ವಿಕಾಸ ಮಾಡಲು ಬೇಕಾದ ದೊಡ್ಡ ಪ್ರಮಾಣದ ಬಂಡವಾಳ ಮತ್ತು ಯುರೇನಿಯಂ ಥರದ ಮೂಲ ವಸ್ತುಗಳು ಸಾಕಷ್ಟು ನಮ್ಮಲ್ಲಿಲ್ಲ. ಈ ಕ್ಷೇತ್ರದಲ್ಲಿ ಅಪಾರವಾದ ವಿಸ್ತಾರದ ಬೆಳವಣಿಗೆ ನಮಗೆ ಇಂದು ತ್ವರಿತವಾಗಿ ಜರೂರಿದೆ. ಪಶ್ಚಿಮ ರಾಷ್ಟ್ರಗಳು ಅಣುಶಕ್ತಿಯನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಲು ಮುಖ್ಯ ಕಾರಣ ಬಾಂಬಿನ ಭೀತಿಯಲ್ಲ. ಅದು ನೆಪ. ಅದು ಭವಿಷ್ಯದ ಅತಿ ಮೌಲ್ಯದ ಆರ್ಥಿಕ ಸರಕಾಗಿರುವುದರಿಂದ. ನಮಗೆ ರಿಯಾಕ್ಟರ್ ನೀಡಲು ಅವರು ಒಡ್ಡಿರುವ ವಾಣಿಜ್ಯ ಷರತ್ತುಗಳು ಇದನ್ನು ಸ್ಪಷ್ಟ ಪಡಿಸುತ್ತದೆ. ನಾವು ಬಂಡವಾಳ ಬೇಡಿದಾಗ, ಅದನ್ನು ನೀಡುವವರು ವಿಧಿಸುವ ಅನ್ಯಾಯ ವೆನಿಸುವ ಷರತ್ತುಗಳು, ರಾಜಕೀಯ ತೀರ್ಮಾನಗಳಿಂದಾಗಿ ನಮ್ಮ ಸಾರ್ವಭೌಮತ್ವವನ್ನು ಸ್ವಲ್ಪ ಕುಗ್ಗಿಸುವಂತಹ ವಿಧಿಗಳಿಗೆ ಒಪ್ಪಿಗೆ ನೀಡುವ ಅನಿವಾರ್ಯತೆಗೆ ಒಳಗಾಗುತ್ತೇವೆ. ಈ ಕ್ಷೇತ್ರದಲ್ಲಿ ಹೆಚ್ಚು ಬಂಡವಾಳ ಹೂಡದೆ ಹಿಂದಿನ ದಶಕಗಳಲ್ಲಿ ನಮ್ಮ ಆಳುವ ವರ್ಗ ಇದರ ಬಗ್ಗೆ ತಾಳಿದ ಹಲವು ರೂಪದ ಹೊಣೆಗೇಡಿತನವೂ ಇಂದಿನ ಅಂಗಲಾಚುವಿಕೆಗೆ ಕಾರಣ. ಇವೆಲ್ಲ ಏನೇ ಇರಲಿ, ವಾಸ್ತವವೆಂದರೆ ನಮಗೆ ಇದು ಬೇಕು. ಇದನ್ನು ವಿರೋಧಿಸುವವರ ರಾಜಕೀಯ ಕಾರಣಗಳು ನ್ಯಾಯವಾದುವೇ. ಅವಕ್ಕೆ ತಮ್ಮದೆ ಆದ ಸಮರ್ಥನೆ ಇದೆ. ಮುಖ್ಯವಾಗಿ ಹಾಗೆಯೇ ಅಮೆರಿಕದ ನಂಟು ಬಯಸುವ ನಮ್ಮ ನಾಯಕರಿಗೆ ಆ ಹೀನಾಯದ ಅನುಭವ ಆಗದಿರಬಹುದು. ಆದರೂ ಭವಿಷ್ಯದಲ್ಲಿ ಆಗಬಹುದಾದ ಅಪಾಯಗಳನ್ನು ಊಹಿಸಿ, ಅದಕ್ಕೆ ಎಚ್ಚರದಿಂದ ಸಿದ್ಧರಿರಬೇಕಾಗುತ್ತದೆ. ಅಣುಶಕ್ತಿಯ ಮೇಲೆ ಅಮೆರಿಕಕ್ಕೆ ಪ್ರಶ್ನಾತೀತ ಸಾರ್ವಭೌಮತ್ವ ನೀಡಲು ಜಗತ್ತು ಒಪ್ಪುವುದಿಲ್ಲ. ಹೀಗೆ ಹೇಳಿದಾಗ ಇದೇನು ನೀವು ಎರಡೂ ಕಡೆಗೆ ಮಾತನಾಡುತ್ತೀರಾ ಎನ್ನಬಹುದು. ಆದರೆ ರಾಜಕೀಯ ಅರ್ಥಶಾಸ್ತ್ರದ ಸ್ವಭಾವವೆ ಇಂಥದು. ಇಬ್ಬಂದಿತನದಂತೆ ಭಾಸವಾಗುತ್ತದೆ.

ಈ ವ್ಯವಸ್ಥೆ ಹೋಗುವವರೆಗೆ, ಅದರೊಡನೆ ಗುದ್ದಾಡಬೇಕಲ್ಲ! ಬಂಡವಾಳ ವ್ಯವಸ್ಥೆಯ ಬೆಳವಣಿಗೆ ದೇಶದ ಒಳಗೂ, ಜಾಗತಿಕವಾಗಿಯೂ ಎಲ್ಲ ಕಡೆಯೂ ಒಂದೇ ಮಟ್ಟದಲ್ಲಿ ಆಗುವುದಿಲ್ಲ. ಆ ವ್ಯವಸ್ಥೆಯ ಸ್ವರೂಪವೇ ಅಂಥದು. ನಮ್ಮ ದೇಶದ ದಕ್ಷಿಣ ಮತ್ತು ಪಶ್ಚಿಮದಲ್ಲಿ ಅರ್ಥವ್ಯವಸ್ಥೆ ವಿಕಾಸವಾದಂತೆ ಬೀಮಾರು ರಾಜ್ಯಗಳಲ್ಲಿ ಅಂದರೆ

**ಕೋಷ್ಟಕ - ೩**

**ಅನಿವಾಸಿ ಭಾರತೀಯರು ನಮ್ಮ ಬಡ್ಡಿದರ ಉತ್ತಮವೆಂದು ನಮ್ಮಲ್ಲಿ ಹೂಡುವ ವಿದೇಶಿ ವಿನಿಮಯದ ನಿವ್ವಳ ಇಡುಗಂಟು ($ ಅಮೆರಿಕಾ ಸಂಸ್ಥಾನದ ಡಾಲರ್ ಮಿಲಿಯನ್‌ಗಳಲ್ಲಿ)**

| | ಒಳ ಹರಿವು | ಹೊರ ಹರಿವು | ನಿವ್ವಳ | ಒಟ್ಟು ವಿದೇಶಿ ಬಂಡವಾಳದ ಶೇಕಡ |
|---|---|---|---|---|
| ೧೯೭೫-೭೬ | – | – | ೪೨ | ೪.೬ |
| ೧೯೮೦-೮೧ | – | – | ೨೨೬ | ೧೩.೬ |
| ೧೯೮೫-೮೬ | – | – | ೧೪೪೪ | ೩೨.೦ |
| ೧೯೯೦-೯೧ | ೭೩೪೮ | ೫೮೧೧ | ೧೫೩೬ | ೨೧.೮ |
| ೧೯೯೫-೯೬ | ೬೭೭೫ | ೩೪೨೫ | ೧೧೦೩ | ೨೭.೦ |
| ೨೦೦೦-೦೧ | ೮೯೮೮ | ೬೬೭೨ | ೨೩೧೬ | ೨೬.೨ |
| ೨೦೦೫-೦೬ | ೧೭೮೩೫ | ೧೫೦೪೬ | ೨೭೮೯ | ೧೧.೯ |
| ೨೦೦೮-೦೯ | ೨೭೭೬೦ | ೨೫೬೪೫ | ೨೧೧೫ | ೧೩.೮ |

**ಗಮನಿಸಿ :** ೧. ಅನಿವಾಸಿ ಭಾರತೀಯರ ಇಡುಗಂಟು ನಮಗೆ ಒಂದು ಮುಖ್ಯ ವಿದೇಶಿ ವಿನಿಮಯದ ಮೂಲ. ಇದು ತಾತ್ಕಾಲಿಕ ರೂಪದ್ದು. ಹೆಚ್ಚು ಬಡ್ಡಿ ಎಲ್ಲಿ ದೊರೆಯುತ್ತದೋ ಅಲ್ಲಿಗೆ ಹರಿಯುವಂಥದು. ನಮ್ಮಲ್ಲೇ ಇರುವಂತೆ ಪ್ರೋತ್ಸಾಹಿಸಬೇಕಾಗುತ್ತದೆ.

೨. ವಿದೇಶಿ ವಿನಿಮಯ ದರದಲ್ಲಿ ಏರುಪೇರಾದರೆ ಇಡುಗಂಟನ್ನು ಹಿಂತೆಗೆಯುವ ಒಳ ಹರಿಯುವ ಪ್ರವೃತ್ತಿ ಉಂಟಾಗುತ್ತದೆ. ಡಾಲರಿಗೆ ಎಷ್ಟು ರೂಪಾಯಿ ಎನ್ನುವ ವಿಷಯ.

**ಕೋಷ್ಟಕ - ೪**

**ಕೆಲವು ಪ್ರದೇಶಗಳಿಗೆ ಬಂದ ವಿದೇಶಿ ಹೂಡಿಕೆ**
**ಏಪ್ರಿಲ್ ೨೦೦೦ರಿಂದ ಜೂನ್ ೨೦೧೦**

| ಪ್ರದೇಶ | ಒಟ್ಟು ಕೋಟಿ ರೂಪಾಯಿಗಳು | ಒಟ್ಟಾರೆಯ ಶೇಕಡವಾರು |
|---|---|---|
| ಮುಂಬಯಿ | ೧೮೦,೭೯೧ | ೩೫ |
| ನವದೆಹಲಿ | ೧೦೮,೩೬೧ | ೨೧ |
| ಬೆಂಗಳೂರು | ೩೨,೧೩೦ | ೬ |
| ಅಹಮದಾಬಾದ್ | ೨೯೦,೫೨ | ೬ |
| ಚೆನ್ನೈ ಮತ್ತು ಪಾಂಡಿಚೆರಿ | ೨೫,೯೮೩ | ೫ |
| ಹೈದರಾಬಾದ್ | ೨೨,೨೦೧ | ೪ |
| ಕೊಲ್ಕತಾ | ೫,೯೫೦ | ೧ |
| ಇತರ ಕಡೆ | ೭೦,೯೦೦ | ೧೨ |
| **ಒಟ್ಟು** | **೫,೪೨,೯೨೧** | **೧೦೦** |

*ಗಮನಿಸಿ : ಬೆಂಗಳೂರಿನ ನಾವು ಏಕೆ ಹೆಚ್ಚು ಆಕರ್ಷಿಸಲಾಗಲಿಲ್ಲ? ಸರ್ಕಾರದ ನೀತಿ ವೈಫಲ್ಯ, ಪವರ್, ಭೂಮಿ, ಸಾರಿಗೆ ಎಲ್ಲದರಲ್ಲೂ ನಾವು ಹಿಂದೆ ಬಿದ್ದಿದ್ದೇವೆ ?*

ಬಿಹಾರ, ಉತ್ತರ ಪ್ರದೇಶ, ಮಧ್ಯಪ್ರದೇಶ, ರಾಜಾಸ್ತಾನಗಳಲ್ಲಿ ಬಂಡವಾಳ ಹೂಡಿಕೆ ಆಗಿಲ್ಲ. ಪಶ್ಚಿಮ ಬಂಗಾಳ ಎಡಪಂಥೀಯ ಸರ್ಕಾರವನ್ನು ಹೊಂದಿದ್ದು, ಬಂಡವಳಿಗರ ಅನಾದರಕ್ಕೆ ಒಳಗಾಗಿದೆ. ಕೇರಳ ಅತಿ ಹೆಚ್ಚು ಬಂಡವಾಳ ಹೂಡಿಕೆಯನ್ನೇ ಅಭಿವೃದ್ಧಿಯ ಆಧಾರ ಮಾಡಿಕೊಳ್ಳದೆ, ಕೈಗಾರಿಕೆಯಲ್ಲಿ ಹಿಂದುಳಿದಿದ್ದರೂ, ಜಾಗತಿಕವಾಗಿ ಅಚ್ಚರಿಮೂಡಿಸಿರುವ ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಅಪಾರ ಪ್ರಗತಿ ಸಾಧಿಸಿದೆ. ಇದು ಅಲ್ಲಿಯ ಎಡ ಪ್ರಜಾಪ್ರಭುತ್ವವಾದಿ ರಾಜಕೀಯದ ಸಾಧನೆ. ಈ ಸಾಧನೆ ಮುಂದುವರಿಯಲಿದೆಯೇ, ಸಸ್ಟೈನಬಲ್ಲೇ ಎಂಬುದನ್ನು ಕಾದುನೋಡಬೇಕು. ಹೀಗೆ ದೇಶದಲ್ಲಿ ಬಂಡವಾಳ ವ್ಯವಸ್ಥೆ ಅಸಮಾನವಾಗಿ ಹರಡಿದೆ. ಬಿಹಾರದೊಳಕ್ಕೆ ಬಂಡವಳಿಗ ಹೋಗಬೇಕಾದರೆ ಅವನು ಅನೇಕ ಸವಲತ್ತುಗಳನ್ನು ಆರ್ಥಿಕ ನೀತಿಗಳನ್ನು ಅಲ್ಲಿಯ ಸರ್ಕಾರದಿಂದ ಒತ್ತಾಯಿಸುತ್ತಾನೆ. ಅವಕ್ಕೆ ಒಪ್ಪಿದರೆ ಅಲ್ಲಿಗೆ ಬಂಡವಾಳ ಹೋಗುತ್ತದೆ. ಪಶ್ಚಿಮ ಮತ್ತು ದಕ್ಷಿಣ ಭಾಗದಲ್ಲಿ ಕೊಬ್ಬಿ ಬೆಳೆದ ರಾಷ್ಟ್ರೀಯ ಬಂಡವಾಳ ಈಗ ಸಾಕಷ್ಟು ನಿವ್ವಳ ಬಂಡವಾಳವನ್ನು ಶೇಖರಿಸಿಕೊಂಡು, ಹಿಂದುಳಿದ ಭಾಗಗಳಿಗೆ, ಹೆಚ್ಚು ಲಾಭ ಗಳಿಸಲು ಮುನ್ನುಗ್ಗಲು ಹವಣಿಸುತ್ತಿದೆ. ಅಷ್ಟೆ ಅಲ್ಲ ವಿದೇಶಗಳಲ್ಲೂ ಹೂಡಿಕೆ ಮಾಡುವ ಪ್ರಕ್ರಿಯೆ ಬಿರುಸಿನಿಂದ ಸಾಗಿದೆ. ಈಚೆಗಷ್ಟೆ ರಿಲೈಯನ್ಸ್ ಅಮೆರಿಕದಲ್ಲಿ ಗ್ಯಾಸ್ ಕಂಪನಿಯನ್ನು ಕೊಂಡುಕೊಂಡಿದೆ. ಅಮೆರಿಕ ಇವರ ಬಂಡವಾಳ ಒಳಬರಲು ಸಮ್ಮತಿಸುತ್ತದೆ. ಹೀಗೆ ಬಂಡವಾಳ ವ್ಯವಸ್ಥೆ ಬೆಳೆದಂತೆಲ್ಲಾ ಅದು ಹೆಚ್ಚು ಹೆಚ್ಚು ನಿವ್ವಳ ಬಂಡವಾಳವನ್ನು ಸಂಚಯಿಸಿಕೊಳ್ಳುತ್ತಾ, ಅದನ್ನು ಎಲ್ಲಾದರೂ, ಎಂದರೆ ಎಲ್ಲಿ ಹೂಡಿಕೆಗೆ ಅನುಕೂಲ ಹಾಗೂ ಹೆಚ್ಚು ಲಾಭ ಗಳಿಸಲು ಅವಕಾಶ ದೊರೆಯುತ್ತದೆ ಅಲ್ಲಿಗೆ ದೌಡಾಯಿಸುತ್ತದೆ. ಅಷ್ಟೆ ಅಲ್ಲ ಅಂಥ ಅವಕಾಶಗಳನ್ನು ಪಡೆಯಲು ಅದಕ್ಕೆ ಈ ವಿಷಯದಲ್ಲಿ ಸ್ವದೇಶ ವಿದೇಶ ಎಂಬ ನಿಯತ್ತಿಲ್ಲ. ಅದು ಎಂದೂ ಪರದೇಶಿ! ದುರ್ಬಲ ರಾಷ್ಟ್ರಗಳಿಗೆ ಬೆದರಿಕೆ, ಒತ್ತಾಯ, ದಬ್ಬಾಳಿಕೆ, ಅಗತ್ಯಬಿದ್ದರೆ ಯುದ್ಧ ಮಾಡಲೂ ಮುಂದಾಗುತ್ತದೆ. ಬಂಡವಾಳದ ಈ ಜಾಗತಿಕ ಪ್ರಭಾವದ ವ್ಯಾಪಕತೆಯ ಆಭಾಸವೇ ಜಾಗತೀಕರಣ. ಬಂಡವಾಳ ಆಕ್ರಮಣಕಾರಿ. ಹಾಗೆಯೇ ಸರಿಯಾದ ಆಡಳಿತವಿಲ್ಲದ, ಸದಾ ಸಂತ್ರಸ್ತ ರಾಷ್ಟ್ರದೊಳಕ್ಕೆ ಬಂಡವಾಳ ಹರಿದುಬರುವುದಿಲ್ಲ. ಅದಕ್ಕೆ ಒಂದಿಷ್ಟು ರಾಜಕೀಯ ಸುಸ್ಥಿರತೆ ಬೇಕು. ಹೂಡಿಕೆ ಬರದೆ ಅಲ್ಲಿಯ ಆರ್ಥಿಕತೆ ಸೊರಗುತ್ತದೆ. ಎಡಪಂಥೀಯ ಸರ್ಕಾರದ ಆಡಳಿತದಲ್ಲಿ ಪಶ್ಚಿಮ ಬಂಗಾಳ ಕೈಗಾರಿಕಾ ಕ್ಷೇತ್ರದಲ್ಲಿ ಹಿಂದೆ ಬಿತ್ತು. ಕಾರಣ ರಾಷ್ಟ್ರೀಯ ಬಂಡವಾಳ ಅಲ್ಲಿ ಹೂಡಲು ಹಿಂತೆಗೆದದ್ದಲ್ಲದೆ, ಹಲವು ರೀತಿಯಲ್ಲಿ ವಿದೇಶಿ ಬಂಡವಾಳವೂ ಬರದಂತೆ ತಡೆದವು. ಪ್ರಜಾಪ್ರಭುತ್ವಾತ್ಮಕವಾಗಿ ಎಡಪಕ್ಷಗಳನ್ನು ಸೋಲಿಸಲಾಗದ ರಾಜಕೀಯ ಶಕ್ತಿಗಳಿಗೆ ಬಂಡವಾಳವನ್ನು ನಿರಾಕರಿಸುವ ಜೇರು ಗುಣಿಕೆಯನ್ನು ಪಶ್ಚಿಮ ಬಂಗಾಳದ ಕತ್ತಿಗೆ ಎಸೆದು, ಇಂದು ಅದು ಅದರ ಕುತ್ತಿಗೆ ಹಿಸಕುವುದರಲ್ಲಿ ಜಯಪ್ರದವಾಗಿದೆ. ಮಮತಾ ಕೇವಲ ಹ್ಯಾಂಗ್ ವುಮನ್, ಅಷ್ಟೆ. ಎಡಪಂಥೀಯ ಸರ್ಕಾರ ತಾನು ದೇಶದ ವಿಸ್ತೃತ ಬಂಡವಳಿಗ ವ್ಯವಸ್ಥೆಯಲ್ಲಿ ಅಂತರ್ಗತ ವ್ಯವಸ್ಥೆಯಾಗಿದ್ದು, ಬಂಡವಾಳವನ್ನು ಆಕರ್ಷಿಸಲು ಕೆಲವು ರಾಜಿಗಳನ್ನು ಮಾಡಿಕೊಳ್ಳುವುದು ಅನಿವಾರ್ಯವೆಂದು ಇತ್ತೀಚಿನವರೆಗೂ ಗಮನಿಸಲಿಲ್ಲ. ತನ್ನದೇ ಸರ್ಕಾರವಿದ್ದಾಗ, ರಾಜಕೀಯವಾಗಿ ತಾವು ನಿಯಂತ್ರಿಸುವ ಕಾರ್ಮಿಕ ಸಂಘಗಳಿಗೂ ಈ ಕುರಿತು ತಿಳುವಳಿಕೆ ನೀಡಿ, ಕಾರ್ಖಾನೆಗಳಲ್ಲಿ ಕಾರ್ಮಿಕರ ಹೋರಾಟಗಳು, ಜವಾಬ್ದಾರಿಯಿಂದ ಅವರು ಕೆಲಸ ಮಾಡುವ ಕೈಗಾರಿಕೆಗೇ ಆಪತ್ತು ತರದಂತೆ ನಡೆಸುವ ಪ್ರಯತ್ನ ಮಾಡಲಿಲ್ಲ. ಆರ್ಥಿಕ ವಿಕಾಸವೆಂದರೆ ಬಂಡವಾಳದ ಹೂಡಿಕೆ, ಅದಕ್ಕಾಗಿ ಬಂಡವಾಳ ಕೂಡಿಕೆಯೂ ಅಗತ್ಯ. ಸರ್ಕಾರದ ನೀತಿಗಳು ಬಂಡವಾಳ ಕೂಡಿಕೆಗೆ ನೆರವಾಗಬೇಕು. ಕೊನೆಗೂ ಬಹಳ ತಡವಾಗಿ ಇಂಥ ಬದಲಾವಣೆಗಳ ಅಗತ್ಯವನ್ನು ಗುರುತಿಸಿದ ಇತ್ತೀಚಿನ ಪಶ್ಚಿಮ ಬಂಗಾಳ ಸರ್ಕಾರ ವಿಶೇಷ ಆರ್ಥಿಕ ವಲಯದ ಸ್ಥಾಪನೆಗೆ ಕೈಹಾಕಿದಾಗ, ಅಲ್ಲಿ ಬಂಡವಳಿಗ ಪಕ್ಷಗಳನ್ನು ಮೀರಿಸುವಂತೆ ಅವರದೆ ಮಾರ್ಗವನ್ನು ಅನುಸರಿಸಲು ಹೋದಾಗ ಅಥವಾ ಎಡಪಂಥಕ್ಕೇ ವಿಶಿಷ್ಟವಾಗಬಲ್ಲ ಮಾರ್ಗವನ್ನು ಅನುಸರಿಸದೆ, ಅವರ ವಿರೋಧಿಗಳ ಮಾರ್ಗವನ್ನೇ ಅನುಕರಣೆ ಮಾಡಹೊರಟಾಗ, ಇಂದು ಅವರು ಎದುರಿಸುತ್ತಿರುವ ವಿರೋಧದ ಬೆಳವಣಿಗೆ ಅನಿವಾರ್ಯವಾಯಿತು. ಆ ಮಾರ್ಗವನ್ನೇ ಆರಿಸಿಕೊಳ್ಳುವುದಾದರೆ ಎಡಪಂಥೀಯ ಸರ್ಕಾರದ ಅಗತ್ಯವೇನು ಎಂಬಲ್ಲಿಗೆ ಬಂದಂತಾಗಿದೆ. ಅಂದರೆ ಸೈದ್ಧಾಂತಿಕವಾಗಿ ಇಂದಿನ ಪರಿಸ್ಥಿತಿಯಲ್ಲಿ ಬಂಡವಾಳವಾದೀ ಹೂಡಿಕೆಯ ಮಾರ್ಗ ಅನಿವಾರ್ಯ, ಅದನ್ನು ಸಾಮಾಜಿಕವಾಗಿ ಸಹ್ಯವಾಗುವಷ್ಟು ಒಂದಿಷ್ಟು ಪ್ರಜಾಪ್ರಭುತ್ವಾತ್ಮಕ ನಿಯಂತ್ರಣಕ್ಕೆ ಒಳಪಡಿಸುವುದು ಸಾಧ್ಯ ಎಂದು ಅರ್ಥೈಸಿ, ಅದರಂತೆ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಬೇಜವಾಬ್ದಾರಿ ಬಂಡವಾಳದ ವಿರುದ್ಧ ಚಳುವಳಿ ಮಾಡುವುದು, ಪ್ರಜಾಪ್ರಭುತಾತ್ಮಕ ಹೋರಾಟ ನಡೆಸುವುದು, ಜವಾಬ್ದಾರಿಯುತ ಬಂಡವಾಳಕ್ಕೆ (ಟಾಟಾ ಬಂಡವಾಳ ಎನ್ನುತ್ತಾರೆ

**ಕೋಷ್ಟಕ - ೫**

**ಭಾರತದ ಕೆಲವು ಕ್ಷೇತ್ರಗಳಿಗೆ ಎಷ್ಟು ಬಂಡವಾಳದ ಒಳ ಹರಿವು**
*(ಮೂಲ : ಭಾರತ ಸರ್ಕಾರ)*
**(ಏಪ್ರಿಲ್ ೨೦೦೦ದಿಂದ ಜೂನ್ ೨೦೧೦)**

| ಕ್ಷೇತ್ರ | ಎಷ್ಟು | ಒಟ್ಟಾರೆಯ ಶೇಕಡ |
|---|---|---|
| ಸೇವಾಕ್ಷೇತ್ರ (ಹಣಕಾಸು ಕ್ಷೇತ್ರಗಳೂ ಸೇರಿ) | ೧,೦೮,೩೭೮ | ೨೧ |
| ಕಂಪ್ಯೂಟರ್, ಮಾಹಿತಿ ತಂತ್ರಜ್ಞಾನ, ಸಾಫ್ಟ್‌ವೇರ್ ಹಾರ್ಡ್‌ವೇರ್ | ೪೫,೨೭೩ | ೯ |
| ದೂರಸಂಪರ್ಕ | ೪೪,೮೮೭ | ೮ |
| ಮನೆ ಮತ್ತು ರಿಯಲ್ ಎಸ್ಟೇಟ್ | ೩೮,೯೬೪ | ೮ |
| ನಿರ್ಮಾಣ ಕ್ಷೇತ್ರ | ೩೬,೭೦೦ | ೭ |
| ಪವರ್ | ೨೨,೯೨೩ | ೪ |

*ಗಮನಿಸಿ : ೧ (ಅ) ಮೂಲ ಕೈಗಾರಿಕೆಗಳನ್ನು ವೃದ್ಧಿಪಡಿಸುವ ಕ್ಷೇತ್ರದಲ್ಲಿ ಸಾಕಷ್ಟು ಹೂಡಿಕೆ ಬರುತ್ತಿಲ್ಲ, ೧(ಆ) ಮೊದಲಿನ ಮೂರರಲ್ಲೂ ಹೊರಗುತ್ತಿಗೆ ಹೂಡುವ ಉದ್ಯಮವೂ ಸೇರಿದೆ. ಈ ಕ್ಷೇತ್ರಗಳ ಅಭಿವೃದ್ಧಿ ಬಹಳ ಕಾಲ ಹೆಚ್ಚುತ್ತಲೇ ಇರುವುದಿಲ್ಲ. ೧(ಇ)ನಮ್ಮ ಕೈಗಾರಿಕೆಗಳಿಗೆ ವಿದೇಶಿ ಹೂಡಿಕೆ ಆಕರ್ಷಿಸಲು ಏಕೆ ಆಗಲಿಲ್ಲ?*

*೨. ಪವರ್ ಕ್ಷೇತ್ರದಲ್ಲಿ ನಮ್ಮ ನಿಯಮಗಳನ್ನು ಸಡಿಲಗೊಳಿಸಿ, ಹೆಚ್ಚು ಬೆಲೆ ನೀಡಿದರೆ, ಬಂಡವಾಳ ಹೆಚ್ಚು ದೊರಕಬಹುದು ಎನ್ನುತ್ತಾರೆ.*

*೩. ಮತ್ತೊಂದು ಮಾಹಿತಿಯ ಪ್ರಕಾರ, ಸೇವಾಕ್ಷೇತ್ರಕ್ಕೆ ಶೇಕಡ ೩೨.೭ ಮತ್ತು ಕೈಗಾರಿಕಾ ಕ್ಷೇತ್ರಕ್ಕೆ ಶೇಕಡ ೧೯.೨ ಎಂದು ಹೇಳಲಾಗಿದೆ.*

### ಕೋಷ್ಟಕ - ೬

**ಕೆಲವು ದೇಶಗಳ ವಿದೇಶಿ ಬಂಡವಾಳ ಒಳ ಹರಿವು - ಹೊರ ಹರಿವು - ಡಿಸೆಂಬರ್ ೨೦೦೯ರಂದು (ಅಂದಾಜು) ಅಮೆರಿಕದ ಡಾಲರಿನಲ್ಲಿ ($)**

*(ಆಕರ : 'ಸಿಐಎ ಜಾಗತಿಕ ಮಾಹಿತಿ ಪುಸ್ತಕ')*

| ಶ್ರೇಯಾಂಕ | ರಾಷ್ಟ್ರ | ಒಳ ಹರಿವು | ಶ್ರೇಯಾಂಕ | ಹೊರ ಹರಿವು (ಬಿಲಿಯನ್) |
|---|---|---|---|---|
| ೧. | ಅಮೆರಿಕ ಸಂ.ಸಂ. | ೨೩೯೭.೦ ಬಿಲಿಯನ್ | ೧. | ೩೩೧೬.೦ ಬಿಲಿಯನ್ |
| ೨. | ಫ್ರಾನ್ಸ್ | ೧೧೯೧.೦ - " - | ೨. | ೧೭೬.೦ - " - |
| ೩. | ಇಂಗ್ಲೆಂಡ್ (ಯುಕೆ) | ೧೦೩೨.೦ - " - | ೩. | ೧೫೮೬.೦ - " - |
| ೪. | ಜರ್ಮನಿ | ೧೦೦೮.೦ - " - | ೪. | ೧೪೫೪.೦ - " - |
| ೬. | ನೆದರ್‌ಲ್ಯಾಂಡ್ಸ್ | ೬೭೧.೬ - " - | ೫. | ೮೪೩.೭ - " - |
| ೫. | ಚೀನಾ | ೪೫೬.೩ - " - | ೧೮. | ೧೯೧.೮ - " - |
| ೧೩. | ಬ್ರೆಸಿಲ್ | ೩೧೯.೯ - " - | ೨೪. | ೧೧೭.೪ - " - |
| ೧೬. | ಸಿಂಗಪುರ | ೨೭೫.೨ - " - | ೧೯. | ೧೯೦.೮ - " - |
| ೧೯. | ರಷ್ಯಾ | ೨೫೮.೮ - " - | ೧೬. | ೨೨೬.೨ - " - |
| ೨೪. | ಭಾರತ | ೧೫೭.೯ - " - | ೨೬. | ೭೬.೬೨ - " - |
| ೨೫. | ಜಪಾನ್ | ೧೫೧.೫ - " - | ೮. | ೭೪೭.೧ - " - |
| ೬೧. | ಪಾಕಿಸ್ತಾನ | ೨೮.೨ - " - | ೭೦. | ೧.೦೫ - " - |

ಗಮನಿಸಿ : ೧. ಸಿಐಎ ಗೊತ್ತಲ್ಲ? ಜಗತ್ತಿನ ಅತಿದೊಡ್ಡ ಗೂಢಚಾರಿ ಒಳಸಂಚಿನ ಬಲೆ? ಅವರು ಇಂಥ ಮಾಹಿತಿಗಳನ್ನೂ ಸಂಗ್ರಹಿಸುತ್ತಾರೆ. ಇವು ಅಧಿಕೃತವಂತೆ!

೨. ಒಂದು ಮಿಲಿಯನ್ = ಹತ್ತು ಲಕ್ಷ, ಒಂದು ಬಿಲಿಯನ್ ಸಾವಿರ ಮಿಲಿಯನ್, ಒಂದು ಟ್ರಿಲಿಯನ್ = ಸಾವಿರ ಬಿಲಿಯನ್.

೩. ಇದು ಪಿಪಿಪಿ ಎಣಿಕೆಯಂತೆ. ಹಾಗೆಂದರೇನು ಎಂದು ಹಿಂದೊಮ್ಮೆ ಪ್ರಸ್ತಾಪಿಸಲಾಗಿದೆ. ರಿಸರ್ವ್ ಬ್ಯಾಂಕ್ ಡಾಲರ್‌ಗೆ ೪೫ ರೂ. ಅಂದರೆ, ಮಾರುಕಟ್ಟೆ ಅದನ್ನು ೪೬ ರೂ. ಎನ್ನಬಹುದು. ಒಂದು ಡಾಲರಿಗೆ ಅಮೆರಿಕದಲ್ಲಿ ಕೊಳ್ಳಬಹುದಾದಷ್ಟು ಸರಕಿಗೆ, ಭಾರತದಲ್ಲೇ ಎಷ್ಟಾಗಬಹುದು, ಎಂದೂ ಅಂದರೆ, ಆಗ ಡಾಲರಿನ ರೂಪಾಯಿಯ ಪಿಪಿಪಿ - ದರ ೩೦ ರೂ. – ಪರ್ಚೆಸ್ ಪವರ್ ಪ್ಯಾರಿಟಿಕೊಳ್ಳುವ ಶಕ್ತಿಯ ಸಮೀಕರಣ ವಾಸ್ತವಾದುದು. ಆದರೆ ನಮ್ಮೂರಿನ ೩೦ ರೂ. ಸರಕು ಅವರಲ್ಲಿ ಒಂದು ಡಾಲರಿಗಿಂತ ಕಡಿಮೆ ಮೌಲ್ಯದ್ದು. ಎರಡೂ ಅರ್ಥವ್ಯವಸ್ಥೆಯಲ್ಲಿನ ಅಸಮಾನತೆ ಮಾರುಕಟ್ಟೆಯ ಅಸಮಾನತೆಯಾಗುತ್ತದೆ. ನಾವು ಹಲವು ನಿಯಂತ್ರಣಗಳನ್ನು ಇನ್ನೂ ಇಟ್ಟುಕೊಂಡಿದ್ದೇವೆ.

೪. ಭಾರತದ ಉದ್ಯಮಿಗಳು, ಹಾಗೆ ಚೀನವೂ, ಹಿಂದುಳಿದ ರಾಷ್ಟ್ರಗಳಲ್ಲಿ ಪೆಟ್ರೋಲ್, ಗ್ಯಾಸ್, ಖನಿಜ ಮುಂತಾಗಿ ಮೂಲ ವಸ್ತುಗಳ ಉದ್ಯಮದಲ್ಲಿ ಬಂಡವಾಳ ತೊಡಗಿಸುತ್ತಾರೆ. ನಮ್ಮ ಸರ್ಕಾರದ ಗ್ಯಾರಂಟಿ ಪಡೆದು, ಹೊರದೇಶದಲ್ಲಿ ಸಾಲ ಎತ್ತುತ್ತಾರೆ (ಇಸಿಬಿ-ಎಕ್ಸ್‌ಟರ್ನಲ್ ಕಮರ್ಷಿಯಲ್ ಬಾರೊಯಿಂಗ್). ಅವರು ಗಳಿಸಿದ ಲಾಭವನ್ನು ಸರ್ಕಾರದ ಅನುಮತಿ ಪಡೆದ ಅಲ್ಲೆ ಮತ್ತಷ್ಟು ಹೂಡಿಕೆಗೆ ಉಳಿಸಿಕೊಳ್ಳಬಹುದು.

ಕೆಲವರು) ಸಹಕರಿಸುವುದು ಇಂದಿನ ಸಾಧ್ಯತೆ ಮತ್ತು ಅಗತ್ಯ ಎನಿಸುತ್ತಿದೆ. ಸಮಾಜವಾದ ವಿರೋಧಿಸುವುದು ಬಂಡವಾಳವನ್ನಲ್ಲ, ಹೂಡಿಕೆಯನ್ನಲ್ಲ, ಅದರ ಖಾಸಗೀ ಒಡೆತನವನ್ನು. ಬಂಡವಾಳದ ಸ್ವರೂಪ ಸಾಮಾಜಿಕವಾದದ್ದು ಎನ್ನುವುದು ಪ್ರಶ್ನಾತೀತ. ಈ ಅಸಂಗತ ಪರಿಸ್ಥಿತಿ ಪರಿವರ್ತನೆಯ ಹಾದಿಯ ಒಂದು ಹಂತ. ಹೋರಾಟ ಬೇಕು, ಈ ವೈರುದ್ಧ್ಯದ ಪರಿಹಾರಕ್ಕೆ. ಅರ್ಥಶಾಸ್ತ್ರ ಎಲ್ಲ ಸಾಧ್ಯತೆ ಗಳನ್ನು ಬಿಚ್ಚಿಡಬೇಕು. ವಾಸ್ತವವನ್ನೇ ಆಧರಿಸಿರ ಬೇಕು ಯಾವ ಹಾದಿ ಹಿಡಿಯುವುದು ಎನ್ನುವುದನ್ನು ಸಾಮಾಜಿಕ ಅಗತ್ಯವನ್ನು ಗಮನಿಸಿ ರಾಜಕೀಯವಾಗಿ ತೀರ್ಮಾನಿಸ ಬೇಕು. ರಾಜಕೀಯವನ್ನು ಅರ್ಥಶಾಸ್ತ್ರ, ಈಗಿನಂತೆ ನಿರ್ಧರಿಸಲು ಹೊರಟರೆ ಸಮಾಜಕ್ಕೆ ಘಾಸಿ ಆಗುತ್ತದೆ.

ಕೆ. ಎಸ್. ಪಾರ್ಥಸಾರಥಿ
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ,
ಚಿಟ್ಟಹಲಸೂರು ಅಂಚೆ. ಬೆಂಗಳೂರು - ೫೬೨ ೧೫೭

## ಡಾ|| ಪುಟ್ಟರಾಜ ಗವಾಯಿ



ಗಾನಯೋಗಿ ಪಂಡಿತ ಕವಿ ಪುಟ್ಟರಾಜ ಗವಾಯಿ ಅವರು ೯೭ ವರ್ಷಗಳ (೩-೩-೧೯೧೪ – ೧೭-೯-೨೦೧೦) ಜೀವನ ಗಾಯನವನ್ನು ಪೂರ್ತಿಗೊಳಿಸಿ ಇಹಲೋಕ ತ್ಯಜಿಸಿದ್ದಾರೆ. ಅಂಧರಾಗಿದ್ದರೂ ನೂರಾರು ಮಂದಿ ಅಂಧರ ಬಾಳಿಗೆ ಬೆಳಕಾಗಿದ್ದರು. ಸಂಗೀತವೇ ಇವರ ಜೀವದ ಜೀವಾಳವಾಗಿತ್ತು. ಗದುಗಿನ ವೀರೇಶ್ವರ ಪುಣ್ಯಾಶ್ರಮವೆಂದರೆ ಗವಾಯಿಗಳ ಸಾವಿರಾರು ಅನುಯಾಯಿಗಳ ಆಶ್ರಯಧಾಮ. ಅವರೆಲ್ಲರಿಗೆ ಗವಾಯಿಗಳು 'ಅಪ್ಪ', 'ಅಜ್ಜ' ಆಗಿದ್ದರು. ಹಲವು ಸಂಗೀತ ವಾದ್ಯಗಳನ್ನು ನುಡಿಸಬಲ್ಲವರಾಗಿದ್ದರು. ಕನ್ನಡ, ಹಿಂದಿ ಮತ್ತು ಸಂಸ್ಕೃತ ಭಾಷೆಗಳಲ್ಲಿ ೭೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ 'ಹೊಸತು' ನಮನ ಸಲ್ಲಿಸುತ್ತದೆ.

## ರಂಗಕರ್ಮಿ ಆರ್. ನಾಗೇಶ್



೧೮-೯-೨೦೧೦ರಂದು ನಮ್ಮನ್ನಗಲಿದ ಕನ್ನಡ ಹವ್ಯಾಸಿ ರಂಗಭೂಮಿಯ ಖ್ಯಾತ ನಿರ್ದೇಶಕ, ಕರ್ನಾಟಕ ನಾಟಕ ಅಕಾಡೆಮಿಯ ಮಾಜಿ ಅಧ್ಯಕ್ಷ ಆರ್. ನಾಗೇಶ್ 'ತಬರನ ಕಥೆ', 'ಯಯಾತಿ', 'ತಾಮ್ರಪತ್ರ'ದಂತಹ ಅನೇಕ ನಾಟಕಗಳನ್ನು ನಿರ್ದೇಶಿಸಿದವರು. ರಂಗ ಸಂಪದ, ಸೂತ್ರದಾರ ದಂತಹ ಹಲವು ಕಲಾ ತಂಡಗಳನ್ನು ಕಟ್ಟಿ ಬೆಳೆಸಿದವರು. ರಾಜ್ಯ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸೇರಿದಂತೆ ಅನೇಕ ಪ್ರಶಸ್ತಿಗಳಿಗೆ ಪಾತ್ರರಾದವರು. ರಂಗಭೂಮಿಗೆ ದಿವಂಗತರು ಸಲ್ಲಿಸಿರುವ ಸೇವೆ ಬಹುಕಾಲ ನಿಲ್ಲುವಂತಹುದು.

ದಿವಂಗತ ನಾಗೇಶ್ ಅವರಿಗೆ 'ಹೊಸತು'ವಿನ ಗೌರವಪೂರ್ವಕ ನಮನಗಳು.

# ಹೀಗೊಂದು ಜೀವನವೃತ್ತಾಂತ

ನಾ. ದಿವಾಕರ

ನನಗೆ ಮೂಲತಃ ಒಂದು ಅನುಮಾನವಿದೆ. ನಾನು ಜಗತ್ತಿನ ಎಲ್ಲಾ ಚರಾಚರ ಜೀವಿಗಳು, ನಿರ್ಜೀವಿಗಳಂತೆ ಪ್ರಕೃತಿಯ/ದೈವ ಸೃಷ್ಟಿಯೋ, ಬಲ್ಲವರೇ ಹೇಳಬೇಕು. ನನಗಂತೂ ಸ್ವಂತಿಕೆ ಇಲ್ಲ, ಆದರೆ ಅಸ್ತಿತ್ವ ಇದೆ; ಅಸ್ಮಿತೆಯೂ ಇದೆ. ವಿಶ್ವದ ಯಾವುದೇ ಮೂಲೆಯಲ್ಲಿ ಹೋದರೂ ನನ್ನನ್ನು ವಿಭಿನ್ನ ನಾಮಾಂಕಿತಗಳಿಂದ ಗುರುತಿಸುತ್ತಾರೆ. ನನ್ನ ಅಸ್ತಿತ್ವ ಏಕಿದೆ ಎಂದರೆ ನಾನಿಲ್ಲದೆ ಪ್ರಪಂಚವೇ ಇಲ್ಲ, ನಾನಿಲ್ಲದ ಸ್ಥಳವೇ ಇಲ್ಲ. ಒಂದು ರೀತಿಯ ಸರ್ವಾಂತರ್ಯಾಮಿ ನಾನು. ಆದರೂ ಯಾರಿಗೂ ಬೇಡವಾದವನು. ನನ್ನನ್ನು ಸ್ವ-ಇಚ್ಛೆಯಿಂದ ಸ್ವೀಕರಿಸುವುದಿರಲಿ ಬಲಾತ್ಕಾರದಿಂದಲೂ ಯಾರೂ ಸ್ವೀಕರಿಸುವುದಿಲ್ಲ. ಆದರೂ ಜಗತ್ತಿನ ಚರಾಚರ ಜೀವಿಗಳ ನಡುವೆ, ಅದರಲ್ಲೂ ಮಾನವ ಜೀವಿಗಳ ನಡುವೆ ನನಗೊಂದು ಅಸ್ತಿತ್ವವಿದೆ. ಸಮಸ್ತ ಕೋಟಿ ಸಮುದಾಯಗಳ ನಡುವೆ ದಿನನಿತ್ಯ ರಾರಾಜಿಸಿದರೂ ನನ್ನ ಜಿಜ್ಞಾಸೆ ಇನ್ನೂ ತೀರಿಲ್ಲ, ನಾನು ದೈವ ಸೃಷ್ಟಿಯೋ ? ಮನುಜ ಸೃಷ್ಟಿಯೋ ?

ಇಷ್ಟು ಹೇಳಿದ ಮೇಲಾದರೂ ನಾನ್ಯಾರೆಂದು ಅರಿವಾಯಿತೇ ? ಅಯ್ಯೋ ಹುಚ್ಚಪ್ಪಗಳಿರಾ ! (ಹುಚ್ಚಮ್ಮಗಳೂ – ಇಲ್ಲದಿದ್ದರೆ ಮಹಿಳಾ ಮಣಿಗಳು ಸಿಟ್ಟಾದಾರು) ಇನ್ನೂ ನನ್ನ ಗುರುತು ಸಿಗಲಿಲ್ಲವೇ ! ಹೆತ್ತವರಿಗೆ ಹೆಗ್ಗಣ ಮುದ್ದು ಎಂಬ ಗಾದೆ ಮಾಡಿದವರೇ ನೀವು. ಅಂದರೆ ಹೆಗ್ಗಣ ಎಂಬ ಪಾಪದ ಪ್ರಾಣಿಯನ್ನು ವಿನಾಕಾರಣ ನಿಕೃಷ್ಟವಾಗಿ ಎಣಿಸಿದವರು ನೀವೇ ಅಲ್ಲವೇ ? ನನ್ನನ್ನು



ಸೃಷ್ಟಿಸಿದವರು ನೀವೇ ಎಂದು ನಿಮ್ಮಲ್ಲೇ ಯಾರೋ ಕೆಲವು ಜ್ಞಾನಿಗಳು ಹೇಳಿದ್ದು ನನಗೆ ನೆನಪಿದೆ. ಏಕೆಂದರೆ, ಅವರ ಸುತ್ತಲೂ ನಾನಿದ್ದೆನಲ್ಲವೇ ? ನಿಮಗೇಕೆ ನನ್ನ ಗುರುತು ಹತ್ತಿಲ್ಲ? ಹೋಗಲಿ ಬಿಡಿ, ನಿಮಗೆ ನನ್ನನ್ನು ನಿಮ್ಮದೇ ಸೃಷ್ಟಿ ಎಂದು ಹೇಳಿಕೊಳ್ಳಲು ಅಳುಕು ಇರಬಹುದು. ಅಂದ ಮೇಲೆ ಹೆಗ್ಗಣದ ಗಾದೆ ಏಕೆ ಮಾಡಿದಿರಿ ? ಇನ್ನು ನಿಮಗೆ ಸತಾಯಿಸಲಾರೆ. ನಾನ್ಯಾರೆಂದು ಹೇಳಿಬಿಡುತ್ತೇನೆ ಕೇಳಿ.

ಹ್ಞಾ... ಹ್ಞಾ... ತಾಳಿ... ಸ್ವಲ್ಪ ತಾಳಿ. ಹೇಳುವ ಮುನ್ನ ಕೆಲವು ಸೂಚನೆಗಳನ್ನು ಕೊಡುತ್ತೇನೆ, ಊಹಿಸಬಲ್ಲಿರಾ ? ನನಗೆ ಒಂದೇ ಭಾಷೆಯಲ್ಲಿ ನಾನಾ ಹೆಸರುಗಳಿವೆ. ಎಲ್ಲ ದೇಶಗಳಲ್ಲಿ ಎಲ್ಲ ಜನಸಮುದಾಯಗಳ ನಡುವೆಯೂ ಇರುತ್ತೇನೆ. ಸೂರ್ಯೋದಯವಾದರೂ ತಪ್ಪೀತು ನನ್ನ ದರ್ಶನ ತಪ್ಪುವುದಿಲ್ಲ. ಆದರೂ ನನ್ನನ್ನು ನೀವು ಹತ್ತಿರ ಸೇರಿಸುವುದಿಲ್ಲ. ಏನೋ ಅಸಡ್ಡೆ ನನ್ನನ್ನು ಕಂಡರೆ. ನನ್ನಿಂದ ಅಲ್ಪಸ್ವಲ್ಪ ಅನುಕೂಲಗಳು ಇವೆಯಾದರೂ ನನ್ನ ಬಗ್ಗೆ ಇರುವ ಅಸಡ್ಡೆ ಮಾಸುವುದಿಲ್ಲ. ನೀವೇ ಸೃಷ್ಟಿಸಿದ ನನ್ನನ್ನು ದೂರ ಬಿಸಾಡುತ್ತೀರಿ. ನಾನೆಂದೂ ನಿಮ್ಮ ಹತ್ತಿರ ಸ್ವತಃ ಸುಳಿಯುವುದಿಲ್ಲ. ನೀವೇ ನನ್ನ ಸನಿಹ ಬಂದು ಅಸಹ್ಯಪಡುತ್ತೀರಿ. ಇನ್ನೂ ಹೊಳೆಯಲಿಲ್ಲವೇ ? ನಾನೊಂದು **ಹೊಲಸು** ! ಇದನ್ನು ಮೊದಲೇ ಹೇಳಿಬಿಡಬೇಕಿತ್ತು.

ನನ್ನನ್ನು ಏನೆಲ್ಲಾ ಕರೆಯುತ್ತೀರಿ, ಹೊಲಸು, ಕಸ, ತ್ಯಾಜ್ಯ, ತಿಪ್ಪೆ, ಗಲೀಜು ಇತ್ಯಾದಿ ಇತ್ಯಾದಿ. ನೀವಾಡುವ ಪ್ರತಿಯೊಂದು ಭಾಷೆಯಲ್ಲೂ ನನಗೆ ನಾನಾ ಹೆಸರುಗಳು. ನಾನೇನು ಸ್ವಯಂಭೂ ಅಲ್ಲವಲ್ಲ! ನೀವೇ ನನ್ನನ್ನು ದಿನನಿತ್ಯ ಸೃಷ್ಟಿಸುತ್ತೀರಿ, ನನ್ನನ್ನು ಎತ್ತಿ ಒಗೆಯುತ್ತೀರಿ, ಎಲ್ಲೋ ಊರಾಚೆ ಸುರಿಯುತ್ತೀರಿ, ಬೆಂಕಿ ಹಚ್ಚುತ್ತೀರಿ. ಆದರೂ ನನ್ನ ಸಂತತಿ ಮುಗಿಯುವುದೇ ಇಲ್ಲ. ನಾನೊಂದು ರೀತಿಯಲ್ಲಿ ಫೀನಿಕ್ಸ್ ಪಕ್ಷಿಯಂತೆ ಮತ್ತೆ ಮತ್ತೆ ಪುಟಿದೇಳುತ್ತಿರುತ್ತೀನಿ. ಎಷ್ಟೇ ಆದರೂ, ನಿಮ್ಮ ಬಾಳಿನ ಅವಿಭಾಜ್ಯ ಅಂಗವಲ್ಲವೇ ನಾನು ? ಮಾನವರಾದ ನಿಮಗಿಂತಲೂ ನನಗೆ ಪ್ರಾಣಿಗಳೇ ಇಷ್ಟ. ಅವು ಎಷ್ಟು ಬೇಕೋ ಅಷ್ಟನ್ನು ಮಾತ್ರ ಮಿತವಾಗಿ ಉಂಡು ಮಿತವಾಗಿಯೇ ನನ್ನ ಸಂತತಿಯನ್ನು ಸೃಷ್ಟಿಸುತ್ತವೆ. ನೀವಾದರೋ ಹಾಗಲ್ಲ. ನೀವು ಉಪಯೋಗಿಸುವ ಪ್ರತಿಯೊಂದು ವಸ್ತುವಿನಿಂದಲೂ ನನ್ನನ್ನು ಸೃಷ್ಟಿಸುತ್ತೀರಿ. ನನ್ನೊಡನೆ ಬಾಳುವ ಕೆಲವು ಪ್ರಾಣಿಗಳೂ ನಿಮಗೆ ನಿಕೃಷ್ಟವೇ. ನನ್ನ ಸನಿಹ ಬಂದು ಮೈದಡವಿ, ಹೊರಗೊಯ್ಯುವ ಮೂಲಕ ನಿಮ್ಮ ನಾಸಿಕಗಳನ್ನು ರಕ್ಷಿಸುವ ಸೋದರರನ್ನೂ ನೀವು ನಿಕೃಷ್ಟವಾಗಿಯೇ ನೋಡುತ್ತೀರಿ. ಏಕೆ ಹೀಗೆ ?

ನನ್ನಿಂದಲೂ ಕೆಲವು ಉಪಯೋಗಗಳಿವೆ ಎಂದು ನನ್ನ ವಿದೇಶಿ ಸಂತತಿಯವರು ಹೇಳುತ್ತಾರೆ. ಅಲ್ಲೆಲ್ಲಾ ಅವರನ್ನು ಗೌರವದಿಂದ ಕಾಣುತ್ತಾರಂತೆ. ನನ್ನೊಡನಾಟದ ಪ್ರಾಣಿಗಳನ್ನು ಗೌರವದಿಂದ ನೋಡುತ್ತಾರಂತೆ. ನನ್ನನ್ನು ಊರಾಚೆ ರವಾನಿಸುವವರಿಗೂ ಘನತೆ ಇದೆಯಂತೆ. ಇಲ್ಲೇಕೆ ಹಾಗಿಲ್ಲ? ನಿಮ್ಮ ಹಿತ್ತಲಿನಲ್ಲೇ ಬೆಳೆಯುವ ನನ್ನನ್ನು ದಿನನಿತ್ಯ ಸಹಿಸಿಕೊಳ್ಳುತ್ತೀರಿ. ಆದರೆ ಒಮ್ಮೆ ಊರಾಚೆ ಒಗೆದರೆ ನನ್ನ ಬಳಿ ಬರಲು ಅಸಹ್ಯಪಟ್ಟುಕೊಳ್ಳುತ್ತೀರಿ. ಮೂಗು ಮುಚ್ಚಿಕೊಳ್ಳುತ್ತೀರಿ. ನಿಮ್ಮ ದೇಹದಲ್ಲೂ ನನ್ನ ಸಹಚರರೇ ಇದ್ದಾರೆಂದು ನಿಮ್ಮ ದಾಸರುಗಳೇ ಹೇಳಿದ್ದಾರಲ್ಲವೇ ? ಆದರೂ ನನ್ನ ಬಗ್ಗೆ ಏಕೆ ಈ ದ್ವೇಷ ? ಹೋಗಲಿ ನಾನು ಅನಾಥ, ನನಗೆ ಅಸ್ತಿತ್ವವೇ ಇಲ್ಲ ಎಂದೇ ಭಾವಿಸೋಣ. ನಿಮಗೆ ಅಸ್ತಿತ್ವ ಇದೆಯೇ ? ಕೊನೆಗೆ ನೀವೂ ನನ್ನೊಡನೆಯೇ ಸೇರುವಿರಲ್ಲವೇ ?

ಆದರೂ ನನ್ನೊಡನೆ ಸ್ನೇಹದಿಂದಿರುವ ನಿಮ್ಮ ಸೋದರರನ್ನೇಕೆ ದೂರ ಮಾಡುವಿರಿ ? ಅವರೂ ನನ್ನ ಸೃಷ್ಟಿಯಲ್ಲಿ ಪಾಲುದಾರರೇ ಅಲ್ಲವೇ ? ನಿಮ್ಮಂತೆಯೇ ನನ್ನ ಸೃಷ್ಟಿಗೆ ಕಾರಣರಲ್ಲವೇ ? ಅವರು ನನ್ನೊಡನೆ ಹೊರಳಾಡಬಹುದು ಆದರೆ ಅವರ ಮನಸ್ಸು ನಿರ್ಮಲವಾದ್ದು, ಅಲ್ಲವೇ ? ಇಲ್ಲವಾದಲ್ಲಿ ನೀವು ಸೃಷ್ಟಿಸಿದ ನನ್ನ ಸಂತತಿಯನ್ನು ಅವರೇಕೆ ನಿರ್ಮೂಲ ಮಾಡುತ್ತಾರೆ ? ಅದೂ ಶ್ರದ್ಧೆ, ಬದ್ಧತೆ ಮತ್ತು ಪ್ರಾಮಾಣಿಕತೆಯಿಂದ ?

ನನಗೂ ವಿಮುಕ್ತಿ ಬೇಕಿದೆ. ನಿಮ್ಮ ಸಹವಾಸ ನನಗೂ ಸಾಕಾಗಿದೆ. ನಿಮ್ಮ ಸುತ್ತಲಿನ ಪರಿಸರವನ್ನು ಸ್ವಚ್ಛವಾಗಿಟ್ಟರೆ ನಾನೂ ನನ್ನ ಸಂತತಿಯವರೂ ಸ್ವರ್ಗ ಸೇರುತ್ತೇವೆ. ನನ್ನಿಂದ ನಿಮ್ಮ ಅವಕೃಪೆಗೆ ಪಾತ್ರರಾಗಿರುವ ನಿಮ್ಮ ಸಹಚರರೂ ಹರ್ಷಚಿತ್ತರಾಗಿರುತ್ತಾರೆ. ನಿಮ್ಮದೇ ಆದ ಸಮಾಜವೂ ಆರೋಗ್ಯಪೂರ್ಣವಾಗಿರುತ್ತದೆ. ನೀವು ಹೆತ್ತವರೂ ಅಲ್ಲ, ನಾನು ಹೆಗ್ಗಣವೂ ಅಲ್ಲ ಎಂದು ನೆಮ್ಮದಿಯಿಂದ ವಿರಮಿಸುತ್ತೇನೆ, ಅನಂತದಲ್ಲಿ ಲೀನವಾಗಿ.

ನಾನೂ ಶತಮಾನಗಳಿಂದ ನೋಡುತ್ತಲೇ ಇದ್ದೇನೆ. ಮಾನವ ಸಮಾಜ ಸೃಷ್ಟಿಯಾದ ದಿನದಿಂದಲೂ ನಿಮ್ಮೊಡನೆ. ನಿಮ್ಮ ಸುತ್ತಲಿನ ಪರಿಸರದಲ್ಲಿ ನಾನೂ ಭಾಗಿಯಾಗಿದ್ದೇನೆ. ನಿಮ್ಮ ಸಂತತಿ ಅಳಿದು ಪುನಃ ಜನಿಸುತ್ತದೆ. ನನ್ನ ಸಂತತಿ ಅಳಿಯುವುದೇ ಇಲ್ಲ. ಏಕೆ ಹೇಳಿ ? ನೀವು ಅಳಿಯಲು ಬಿಡುವುದೇ ಇಲ್ಲ.

ನಿಮ್ಮ ಸುತ್ತಲೂ ದಿನನಿತ್ಯ ಹರಡುವ ನನ್ನನ್ನು ನೀವು ಎತ್ತಿ ಬಿಸಾಡುತ್ತೀರಿ. ಅಸಹ್ಯಪಟ್ಟು ದೂರ ಒಗೆಯುತ್ತೀರಿ. ನನಗೂ ಈ ಜಂಜಾಟ ಸಾಕಾಗಿಹೋಗಿದೆ. ಅದಕ್ಕೇ ನಾನೂ ನನ್ನ ಸಂತತಿಯವರೂ ಒಂದು ನಿರ್ಣಯಕ್ಕೆ ಬಂದಿದ್ದೇವೆ. ಈ ನಿರ್ಣಯವನ್ನು ಈಗಾಗಲೇ ಅನುಷ್ಠಾನಕ್ಕೆ ತಂದದ್ದೂ ಆಗಿದೆ. ನಿಮಗೆ ಅರಿವಾಗದಿರಬಹುದು ಅಥವಾ ಅರಿವಾಗಿದ್ದರೂ ಆತ್ಮಗೌರವ ತೋರ್ಪಡಿಸಲು ಅಡ್ಡಿಬರುತ್ತಿರಬಹುದು. ಒಮ್ಮೆ ನಿಮ್ಮೊಳಗಿನ ಕನ್ನಡಿ ಯಲ್ಲಿ ನಿಮ್ಮದೇ ದೇಹಾತ್ಮಗಳನ್ನು ನೋಡಿಕೊಳ್ಳಿ. ಆಗ ತಿಳಿಯುತ್ತದೆ. ಶತಮಾನಗಳಿಂದ ನಿಮ್ಮ ಸುತ್ತಲೂ ಹರಡಾಡುತ್ತಿದ್ದ ನಾನು ಈಗ ನಿಮ್ಮ ದೇಹದಲ್ಲಿ ಸೇರಿಕೊಂಡಿದ್ದೇನೆ. ಮನಸ್ಸು, ಹೃದಯ, ಆತ್ಮಗಳನ್ನು ಆವರಿಸಿದ್ದೇನೆ. ನನ್ನನ್ನು ನೋಡಿದರೆ ಅಸಹ್ಯಪಡುವ ನೀವು ನಿಮ್ಮೊಳಗೇ ಇರುವ ನನ್ನನ್ನು ಹೇಗೆ ಸಹಿಸಿಕೊಳ್ಳುತ್ತಿರುವಿರೋ ದೇವರೇ ಬಲ್ಲ!

ನನಗೂ ಹೃದಯ ಇದೆ, ಮನಸ್ಸು ಇದೆ ಎಂಬುದನ್ನು ಅರಿತುಕೊಳ್ಳಿ. ನಿಮ್ಮ ಸಮಸ್ತ ಬಾಂಧವರನ್ನು ನಾನಾಗಲೀ ನನ್ನ ಸಂತತಿಯವರಾಗಲೀ ಆವರಿಸಿಲ್ಲ. ನನ್ನನ್ನು ಅಸಹ್ಯವಾಗಿ ಕಂಡರೂ ನನ್ನ ಬಾಂಧವರನ್ನು, ನನ್ನ ಒಡನಾಡಿಗಳನ್ನು, ಪ್ರೀತಿಯಿಂದ ಕಾಣುವವರನ್ನು ನಾವು ಗೌರವಿಸುತ್ತೇವೆ. ಯಾವುದೇ ಕಪಟ ಅರಿಯದೆ ತಮ್ಮ ಪಾಡಿಗೆ ತಾವಿರುವ ಪ್ರಾಣಗಳನ್ನು ನಾವು ಕಾಡುವುದಿಲ್ಲ. ಆದರೆ ವಿಷಾದದ ಸಂಗತಿ ಎಂದರೆ ಮಾನವ ಜನ್ಮ ದೊಡ್ಡದಯ್ಯಾ ಎಂದು ಹೇಳಿಕೊಳ್ಳುವ ನಿಮ್ಮೊಳಗೆ ಬಹುಪಾಲು ಮಂದಿ ನಮ್ಮ ಆಕ್ರಮಣಕ್ಕೆ ತುತ್ತಾಗಿದ್ದಾರೆ. ನಿಮ್ಮ ಮನಸ್ಸು, ಹೃದಯಗಳನ್ನು ಆವರಿಸಿರುವ ನಾವು ನಿಮ್ಮ ಅಂತರ್ಯವನ್ನೇ ಕಲುಷಿತಗೊಳಿಸಿದ್ದೇವೆ. ಆದರೆ ಇದು ನಮ್ಮ ಅಪರಾಧವಲ್ಲ. ನೀವೇ ನಮ್ಮನ್ನು ಆವಾಹನೆ ಮಾಡಿಕೊಂಡಿದ್ದೀರಿ.

ನಿಮ್ಮ ಭಾವನೆಗಳು ನನ್ನನ್ನು ಬೆನ್ನಟ್ಟಿವೆ. ನಿಮ್ಮನ್ನು ಮೀರಿ ಬಾಳುವ ಶಕ್ತಿ ನನಗೂ ಇಲ್ಲ. ಎಷ್ಟಾದರೂ ನಾನು ನಿಮ್ಮದೇ ಸೃಷ್ಟಿಯಲ್ಲವೇ ? ನನ್ನನ್ನು ನೀವು ನಿಮ್ಮ ಅಂತರ್ಯದಿಂದ ಹೊರಹಾಕಿದರೆ ನನಗೂ ಸಂತಸವೆ. ಆದರೆ ಅದು ನಿಮ್ಮಿಂದ ಸಾಧ್ಯವಾಗುತ್ತಿಲ್ಲ. ಏಕೆಂದರೆ ನಾನು ನಿಮ್ಮ ದೇಹಾತ್ಮದಲ್ಲಿ ಲೀನವಾಗಿಬಿಟ್ಟಿದ್ದೇನೆ. ನನ್ನ ಸಹವಾಸದಿಂದ ನೀವು ಕೊಳೆತು ನಾರುತ್ತಿದ್ದೀರಿ. ಮಾನವತೆಯನ್ನೇ ಕಳೆದುಕೊಂಡು ಜೀವಂತ ಶವಗಳಾಗಿಬಿಟ್ಟಿದ್ದೀರಿ. ನಿಮ್ಮ ಅವತಾರಗಳನ್ನು ನೀವೇ ಸೃಷ್ಟಿಸುವ ಸಂಘರ್ಷಗಳಲ್ಲಿ ಕಂಡಿದ್ದೇನೆ. ಕೌಟುಂಬಿಕ ಜೀವನದಲ್ಲಿ ಕಂಡಿದ್ದೇನೆ. ಮನುಜ ಸಂಬಂಧಗಳಲ್ಲಿ ಕಂಡಿದ್ದೇನೆ. ನಿಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡಿದ್ದೇನೆ. ನನಗೆ ಸ್ವಂತಿಕೆ, ಅಸ್ತಿತ್ವ ಇಲ್ಲವೆಂದು ಬೀಗುತ್ತಿದ್ದ ನೀವು ಸ್ವಂತಿಕೆ ಕಳೆದು ಕೊಂಡಿದ್ದೀರಿ. ನನ್ನ ಗುಲಾಮನಾಗಿದ್ದೀರಿ. ನನ್ನ ಒಡನಾಡಿಗಳನ್ನು ಗುಲಾಮರಂತೆ ಕಾಣುತ್ತೀರಿ.

ನನಗೂ ವಿಮುಕ್ತಿ ಬೇಕಿದೆ. ನಿಮ್ಮ ಸಹವಾಸ ನನಗೂ ಸಾಕಾಗಿದೆ. ನಿಮ್ಮ ಸುತ್ತಲಿನ ಪರಿಸರವನ್ನು ಸ್ವಚ್ಛವಾಗಿಟ್ಟರೆ ನಾನು ನನ್ನ ಸಂತತಿಯವರೂ ಸ್ವರ್ಗ ಸೇರುತ್ತೇವೆ. ನನ್ನಿಂದ ನಿಮ್ಮ ಅವಕೃಪೆಗೆ ಪಾತ್ರರಾಗಿರುವ ನಿಮ್ಮ ಸಹಚರರೂ ಹರ್ಷಚಿತ್ತರಾಗಿರುತ್ತಾರೆ. ನಿಮ್ಮದೇ ಆದ ಸಮಾಜವೂ ಆರೋಗ್ಯಪೂರ್ಣವಾಗಿರುತ್ತದೆ. ನೀವು ಹೆತ್ತವರೂ ಇಲ್ಲ, ನಾನು ಹೆಗ್ಗಣವೂ ಇಲ್ಲ ಎಂದು ನೆಮ್ಮದಿಯಿಂದ ವಿರಮಿಸುತ್ತೇನೆ, ಅನಂತದಲ್ಲಿ ಲೀನವಾಗಿ.

ಇಂತಿ ನಿಮ್ಮೊಳಗಿನ,

?




ಸಾ. ದಿವಾಕರ

ನಂ. ೩೦೪, 'ಚಿರಂತನ', ೧೩ನೇ ಅಡ್ಡರಸ್ತೆ

ಶ್ರೀರಾಂಪುರ ೨ನೇ ಹಂತ, ಮೈಸೂರು - ೫೭೦ ೦೨೩




# ಜಡತ್ವ



ಮುಚ್ಚಿದ ಕಣ್ಣುಗಳಲ್ಲಿ ಮೂವತ್ತು
ಕೋಟಿ ಕನಸುಗಳು
ಕಾಣುವಾಗೆಲ್ಲಾ ಕಾರಿರುಳು ಆವರಿಸುತ್ತದೆ.
ಕಲ್ಪನೆಗಳು ಮಾತ್ರ ಕನಸಾಗಿರಲು
ನೆನಪುಗಳೆಲ್ಲಾ ನಿಜವಾಗಲು ನಿರಾಕರಿಸುತ್ತವೆ.

ಉಸಿರಿನ ತುಡಿತ ನೋವು, ಭಾವನೆಗಳಲ್ಲಿ
ಗೋಚರಿಸುತ್ತದೆ.

ಭಾವನೆಗಳಲ್ಲಿ ನೋವುಂಟಾದಾಗ
ಉಸಿರು ಏನು ಮಾಡುವುದೆಂದು ತೋಚದೆ
ದಿಕ್ಕೆಡುತ್ತದೆ.
ಉಸಿರಿಗೂ – ಭಾವನೆಗೂ ನಡುವೆ
ದೇಹ ಜಡವಾಗಿ ಕಂಗಾಲಾಗುತ್ತದೆ.
ಸಂವೇದನೆಗಳು ನಿರಾಕರಿಸಲಿಕ್ಕೆ ಇನ್ನು
ಎಡೆಯಿಲ್ಲ
ಏಕೆಂದರೆ ಭಾವನೆಗಳು ಈಗಾಗಲೇ
ಸತ್ತುಹೋಗಿವೆ.


ತಮಿಳು ಮೂಲ : ಸುರೇಶ್ ಕುಮಾರ್ ಎಸ್.

ಕನ್ನಡ ಅನುವಾದ : ಮಲರ್ ವಿಳಿ ಕೆ.

ಸಿಂಧಿ ಕಾಲೇಜು, ಕೆಂಪಾಪುರ, ಹೆಬ್ಬಾಳ

ಬೆಂಗಳೂರು - ೨೪

# ಆತ್ಮಕಥನಗಳ ಬಗ್ಗೆ

ಆತ್ಮಕಥನಗಳ ಓದು ತುಂಬ ಕುತೂಹಲಕರವಾದುದು. ಏಕೆಂದರೆ ಸಾಹಿತ್ಯದ ಇನ್ನುಳಿದ ಪ್ರಕಾರಗಳಂತೆ ಆತ್ಮಕಥನಗಳು ಓದಿಸಿಕೊಳ್ಳುವುದಿಲ್ಲ. ಅವುಗಳನ್ನು ಓದಲು ಅಂತಹ ದೊಡ್ಡ ಮಾನಸಿಕ ತಯಾರಿಯ ಅವಶ್ಯಕತೆಯೂ ಇಲ್ಲ, ಸ್ವಲ್ಪ ಚಿಕಿತ್ಸಕ ಮನಃಸ್ಥಿತಿ ಇದ್ದರೆ ಸಾಕು. ಸಾಮಾಜಿಕ ನೆಲೆಯಲ್ಲಿ ಅವು ಎಷ್ಟರಮಟ್ಟಿಗೆ ಗಟ್ಟಿತನ ಪಡೆದುಕೊಂಡಿವೆ ? ಆತ್ಮನಿವೇದನೆಯು ಯಾವ ಮಟ್ಟದ್ದು? ಎಂಬ ಪ್ರಶ್ನೆಗಳು ಎದುರಾಗುತ್ತವೆ. ಇದಕ್ಕೆ ಉತ್ತರ ಹುಡುಕುತ್ತ ಹೋದಂತೆ ದೊಡ್ಡ ದೊಡ್ಡ ಗುಣಗಳೊಂದಿಗೆ ಸಣ್ಣತನವನ್ನೂ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಆ ವ್ಯಕ್ತಿಯ ಮೇಲ್ನೋಟದ ವ್ಯಕ್ತಿತ್ವದ ಜೊತೆಗೆ ಅಂತರಮುಖಿತ್ವವೂ ದರ್ಶನವಾಗುತ್ತದೆ. ಹೊರ ಜಗತ್ತಿನಲ್ಲಿ ನಮಗೆ 'ಕಾಣಸಿಗುವುದು' ಒಂದು ಬಗೆಯಾದರೆ, 'ಇರುವುದು' ಇನ್ನೊಂದು ಬಗೆಯ ಬದುಕು. ವೈಯಕ್ತಿಕ ಮತ್ತು ಸಾಮಾಜಿಕ ಬದುಕಿನ ಮಧ್ಯೆ ಗೋಡೆ ಕಟ್ಟಿಕೊಂಡು ಜೀವಿಸುವ 'ಇರುವಿಕೆ' ಎಂಬುದು ಬರವಣಿಗೆಯಲ್ಲಿ ಒಮ್ಮೊಮ್ಮೆ ತನಗೆ ಗೊತ್ತಿಲ್ಲದೆಯೇ ನಗ್ನಗೊಂಡಿರುತ್ತದೆ. ಬುದ್ಧಿವಂತಿಕೆಯಿಂದ ಕೊಳಕು ಗುಣಗಳನ್ನು ಮುಚ್ಚಲು ಪ್ರಯತ್ನಿಸಿದರೂ ಅವು ಹೊರಗೆ ಬರುತ್ತವೆ. ಹೀಗಾಗಿ ಆತ್ಮಚರಿತ್ರೆಗಳನ್ನು ಮುತುವರ್ಜಿ ವಹಿಸಿ ಓದಬೇಕಾಗುತ್ತದೆ.

ಆತ್ಮಚರಿತ್ರೆಗಳ ಪರಿಶೀಲನಕಾರ ಸಂಭವಿಸಬಹುದಾದ ಎರಡು ಮಹತ್ವದ ಅಪಾಯಗಳ ಬಗ್ಗೆ ತುಂಬಾ ಎಚ್ಚರ ವಹಿಸಬೇಕಾಗುತ್ತದೆ. ಒಂದು, ಆತ್ಮಚರಿತ್ರೆಗಳನ್ನು ತುಂಬಾ ಅಭಿಮಾನ, ಅತಿಯಾದ ಪ್ರೀತಿ, ಗೌರವಗಳೊಂದಿಗೆ ಗ್ರಹಿಸಿದರೆ ನಿಜವಾದ ವ್ಯಕ್ತಿತ್ವವನ್ನು ಅರಿತುಕೊಳ್ಳಲು ಸಾಧ್ಯವಾಗದು. ಒಬ್ಬ ಭ್ರಷ್ಟ ವ್ಯಕ್ತಿಯನ್ನು ವೈಭವೀಕರಿಸಿ ಪಟ್ಟಕ್ಕೇರಿಸಿದರೆ ಸಾಮಾಜಿಕವಾಗಿ ಕ್ಷಮಿಸಲು ಸಾಧ್ಯವಾಗದ ಅಪರಾಧವಾಗುತ್ತದೆ. ಇನ್ನೊಂದು, ಆತ್ಮಕಥನಗಳ ಬಗ್ಗೆ ದ್ವೇಷ, ಅಸೂಯೆ, ಹೊಟ್ಟೆಕಿಚ್ಚಿನಂತಹ ಸಣ್ಣತನಗಳ ಪೂರ್ವಗ್ರಹಪೀಡಿತ ತಿಪ್ಪೆರಾಶಿಯನ್ನು ತಲೆಯಲ್ಲಿ ತುಂಬಿಕೊಂಡರೆ ವ್ಯಕ್ತಿಗೆ ದ್ರೋಹ ಬಗೆದಂತಾಗುತ್ತದೆ.

ಸಾಮಾನ್ಯವಾಗಿ 'ಆತ್ಮಚರಿತ್ರೆಗಳು' ಎಂದಾಕ್ಷಣ ಆದರ್ಶ ವ್ಯಕ್ತಿತ್ವಗಳು, ರಾಷ್ಟ್ರನಾಯಕರ ಚಿತ್ರಗಳು ನಮ್ಮ ಎದುರಿಗೆ ನಿಲ್ಲುತ್ತವೆ. ರಾಜ್ಯ, ರಾಷ್ಟ್ರ, ಅಂತರರಾಷ್ಟ್ರೀಯ ಮಟ್ಟದಲ್ಲಿ ಹಾಗೂ ಸಾಮಾಜಿಕವಾಗಿ, ಸಾಹಿತ್ಯಿಕವಾಗಿ ಮಹತ್ ಸಾಧನೆ ಮಾಡಿದವರು ಮಾತ್ರ ತಮ್ಮ ಆತ್ಮಚರಿತ್ರೆಗಳನ್ನು ಬರೆಯುವ ಸಂಪ್ರದಾಯವನ್ನು ಕಾಣುತ್ತೇವೆ. ಅವರಲ್ಲಿನ ಅಸಾಮಾನ್ಯ ವ್ಯಕ್ತಿತ್ವ ಸಾಮಾನ್ಯ ವ್ಯಕ್ತಿಗಳಿಗೆ ಪರಿಚಯವಾಗಲಿ ಅಥವಾ ಮಾದರಿಯಾಗಲಿ ಎಂಬುದು ಇಂತಹ ಆತ್ಮನಿವೇದನೆಗಳ ಉದ್ದೇಶ. 'ಜೀವನದಲ್ಲಿ ನಾನು ಯಾವುದೇ ಗುರುತರವಾದ ತಪ್ಪು ಮಾಡಿಲ್ಲ, ಅಷ್ಟಿಷ್ಟು ಸಣ್ಣಪುಟ್ಟ ತಪ್ಪು ಮಾಡಿದ್ದರೂ ಅದೊಂದು ಬದುಕಿನ ಪಾಠವೆಂದು ಬಗೆದು ಸುಧಾರಿಸಿಕೊಂಡು ಆದರ್ಶ ವ್ಯಕ್ತಿಯಾಗಿ ನಿಂತಿದ್ದೇನೆ. ಎಂಥ ತೊಂದರೆಗಳು ಬಂದರೂ ಸಹಿಸಿಕೊಂಡು ಸಾಧಿಸಿದ್ದೇನೆ' ಎಂಬುದನ್ನು ಢಾಳಾಗಿ ಪ್ರದರ್ಶಿಸಲ್ಪಡುವ ಕಟೌಟ್ ವ್ಯಕ್ತಿತ್ವಗಳು ನಮಗೆ ಕಾಣಸಿಕೊಳ್ಳುತ್ತವೆ.

ಶೋಷಣೆಗೊಳಗಾದ ದಲಿತರು, ಮಹಿಳೆಯರು, ಬಡವರ ಆತ್ಮಕತೆಗಳು ಅವರ ಬದುಕಿನ ಭಯಾನಕ ಚರಿತ್ರೆ ಮತ್ತು ಆ ಭಯಾನಕತೆಯ ಸೃಷ್ಟಿಗೆ ಕಾರಣವಾದ ವ್ಯವಸ್ಥೆಯ ಕ್ರೌರ್ಯ ಅವುಗಳ ಅಮಾನವೀಯ ವರ್ತನೆಗಳನ್ನು ಅರಿತುಕೊಳ್ಳಲು ಸಾಧ್ಯವಾಗಿಸಿ, ಸಾಮಾನ್ಯ ವ್ಯಕ್ತಿಯನ್ನು ಜಾಗೃತಗೊಳಿಸಿವೆ. 'ಸನಾತನ ಪರಂಪರೆ' ಎಂದು ಬೀಗುವ ಹಿಂದೂ ಸಂಸ್ಕೃತಿಯೊಳಗಿನ ಕ್ರೂರ ವ್ಯವಸ್ಥೆ, ಮನಃಸ್ಥಿತಿಗಳನ್ನು ಇಂಥ ಆತ್ಮಕಥನಗಳು ನೇರವಾಗಿ ಅನಾವರಣಗೊಳಿಸುವುದರ ಮೂಲಕ ಜನವಿರೋಧಿ ಮೌಲ್ಯಗಳಿಗೆ ಕೊಳ್ಳಿ ಇಡುತ್ತವೆ.

ಕಳ್ಳತನದ ಅಪರಾಧೀಕರಣದ ಪಟ್ಟ ಅಂಟಿಸಿಕೊಂಡು, ಹೊಟ್ಟೆಪಾಡಿಗಾಗಿ ಮಾಂಸ ತಿನ್ನುವುದೇ ತಮ್ಮ ನಿತ್ಯ ಬದುಕಿನ ಆಹಾರ ಪದ್ಧತಿಯನ್ನಾಗಿಸಿ, ಉತ್ತಮರಿಂದ ನಡೆಯುವ ಲೈಂಗಿಕ ಶೋಷಣೆಯನ್ನು ಸಹಿಸಿಕೊಂಡು ಸಾವಿರಾರು ವರ್ಷಗಳಿಂದ ಶ್ರೇಣೀಕೃತ ವ್ಯವಸ್ಥೆಯ ಅತ್ಯಂತ ಕೆಳಹಂತದಲ್ಲಿ ಬದುಕುತ್ತ ಬಂದಿರುವ ಈ ದೇಶದಲ್ಲಿನ ದಲಿತ ಲೋಕದಿಂದ, ಮಹಿಳಾ ಜಗತ್ತಿನಿಂದ ಆತ್ಮಕಥನಗಳು ಬಂದೂಕಿನ ಗುಂಡುಗಳಾಗಿ ಹೊರಬರಲು ಪ್ರಾರಂಭಿಸಿದಾಗ ಹೊಸದೊಂದು ಲೋಕವೇ ತೆರೆದುಕೊಳ್ಳುತ್ತಿದೆ. ಮೇಲಿದ್ದವರ ಕಿತಾಪತಿಗಳು ಬಯಲಾಗಿ ನಡುಬೀದಿಯಲ್ಲಿ ಅಂಥವರು ಬೆತ್ತಲಾಗಲು ಪ್ರಾರಂಭಿಸಿದ್ದಾರೆ. ಇದರಿಂದ ಆತ್ಮಚರಿತ್ರೆಗಳನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತಿದೆ. ವ್ಯವಸ್ಥೆಯೊಳಗಿನ ಕಠೋರ ಸತ್ಯಗಳು ದಾಖಲೆ ಸಹಿತ ಹೊರಬೀಳಲಾರಂಭಿಸಿವೆ. ಇದರಿಂದಾಗಿ ಯಾವುದು ಸಾಮಾಜಿಕ ಮೌಲ್ಯ ಯಾವುದು ಅಪಮೌಲ್ಯ ಎಂಬ ನೆಲೆಯಲ್ಲಿ ಸಾಂಸ್ಕೃತಿಕ ಲೋಕದಲ್ಲಿ ಚರ್ಚೆ ನಡೆಯುತ್ತಿದೆ. ಸಮಾಜದಲ್ಲಿ ಸಣ್ಣವನೆನಿಸಿಕೊಂಡವನು ದೊಡ್ಡ ವ್ಯಕ್ತಿಗಳ ಬಗ್ಗೆಯೂ ಆ ಮೂಲಕ ಮಾತನಾಡಲು ಪ್ರಾರಂಭಿಸಿದ್ದಾನೆ.

ಆತ್ಮಚರಿತ್ರೆಗಳ ಕುರಿತಾದ ಪರಿಸ್ಥಿತಿ ಹೀಗಿರಬೇಕಾದರೆ, ಆಧುನಿಕ ಸಾಹಿತ್ಯಕ ವ್ಯಾಪಾರೀಕರಣದ ಸಂದರ್ಭದಲ್ಲಿ ಇತ್ತೀಚೆಗೆ ಬುದ್ಧಿವಂತರೆನಿಸಿಕೊಂಡವರು, ದೊಡ್ಡವರಾದವರು ಬೇರೆಯವರಿಂದ ಆತ್ಮಚರಿತ್ರೆಗಳನ್ನು ಬರೆಯಿಸಿಕೊಳ್ಳುವ ದಂಧೆಗೆ ಇಳಿದಿರುವುದು ಆತ್ಮಕತೆಗಳ ಪಯಣದ ಇನ್ನೊಂದು ದುರಂತಮಯ ಬೆಳವಣಿಗೆಯಾಗಿದೆ.

ಆತ್ಮಚರಿತ್ರೆಗಳ ರಚನೆ ಸ್ವಚ್ಛವಾದ ಕನ್ನಡಿಯಲ್ಲಿ ಮುಖ ನೋಡಿಕೊಂಡಂತಿರಬೇಕು. ಮುಖದ ನಿಜವಾದ ಸೌಂದರ್ಯ ಕಾಣಿಸಿಕೊಳ್ಳಬೇಕಾದರೆ, ಮುಖ ಯಾವುದೇ ಬಗೆಯ ಮೇಕಪ್ ಇಲ್ಲದೆ ಇರಬೇಕು. ತನ್ನ ಮುಖವನ್ನು ತನ್ನ ಚರಿತ್ರೆಯ ಕನ್ನಡಿಯಲ್ಲಿ ನೋಡಿಕೊಂಡಾಗ ಅದು ಮೇಕಪ್‌ನಿಂದ ಆಗಿದೆಯೋ, ಸಹಜತೆಯಿಂದ ಕೂಡಿದೆಯೋ ಎಂಬ ದರ್ಶನವಾಗುತ್ತದೆ. ಸಹಜ ಸೌಂದರ್ಯವರ್ಧಕವನ್ನು ಬಳಿಸಿಕೊಂಡು ಕನ್ನಡಿಗೆ ಮೋಸ ಮಾಡಲು ಹೋದಾಗ ಕನ್ನಡಿ ಮೋಸ ಮಾಡುವುದಿಲ್ಲ. ಅದು ನಿಜಸ್ಥಿತಿಯನ್ನೇ ತೋರಿಸಿಕೊಡುತ್ತದೆ. ಅದು ಕನ್ನಡಿಯ ದೋಷವಲ್ಲ, ಕನ್ನಡಿಯಲ್ಲಿ ನೋಡುವ ಕಣ್ಣಿನ ದೋಷ. ಹೀಗೆ ಆತ್ಮಚರಿತ್ರೆಗಳನ್ನು ಬರೆದವರು ಒಂದು ಸಲ ತಮ್ಮ ಚರಿತ್ರೆಯ ಕನ್ನಡಿಯಲ್ಲಿ ಮುಕ್ತವಾಗಿ ತಮ್ಮ ಮುಖ ತಾವೇ ನೋಡಿಕೊಳ್ಳುವ ಪ್ರಶ್ನೆ ಹಾಕಿಕೊಳ್ಳಬಹುದು.



ಡಾ|| ಕೆ. ಎಸ್. ದೊಡ್ಡಮನಿ

ನಿವೇದನೆಗೆ ಒಳಪಡುವ ವ್ಯಕ್ತಿ ಅನಕ್ಷರಸ್ಥನಾಗಿದ್ದರೆ ಬೇರೆಯವರು ಬರೆಯುವುದರಲ್ಲಿ ತಪ್ಪಿಲ್ಲ. ಆದರೆ ಎಲ್ಲ ಅನುಕೂಲತೆಗಳು ಇದ್ದಾಗ್ಯೂ ಬೇರೆಯವರ ಕಡೆಯಿಂದ ಬರೆಯಿಸಿಕೊಳ್ಳುವುದು ಎಷ್ಟರಮಟ್ಟಿಗೆ ಪ್ರಾಮಾಣಿಕವಾಗಿರುತ್ತದೆ, ಸತ್ಯದಿಂದ ಕೂಡಿರುತ್ತದೆ ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ.

ಆತ್ಮಕಥನಗಳನ್ನು ಅವು ಹೇಗೆ ಇವೆಯೋ ಹಾಗೆಯೇ ನೋಡಬೇಕು. ಬೇರೊಂದು ಆತ್ಮಕಥನದೊಂದಿಗೆ ಹೋಲಿಸಿ ತೌಲನಿಕವಾಗಿ ನೋಡುವುದು ಸೂಕ್ತ ಅನ್ನಿಸುವುದಿಲ್ಲ. ಆ ಕೃತಿಯ ಪ್ರಾಥಮಿಕ ಅವಲೋಕನ ದೃಷ್ಟಿಯಿಂದ ಒಂದು ಹಂತದವರೆಗೆ ಈ ಹೇಳಿಕೆ ಸರಿ ಎನಿಸಬಹುದು. ಆದರೆ ಶ್ರೇಣೀಕೃತ ವ್ಯವಸ್ಥೆಯಲ್ಲಿ ವೈಯಕ್ತಿಕ ಬದಲಾವಣೆ ಹಾಗೂ ಸಾಂಸ್ಕೃತಿಕ ಪಲ್ಲಟಕ್ಕೆ ಆತ್ಮಚರಿತ್ರೆಗಳು ಪ್ರಮುಖ ದಾಖಲಾತಿಗಳಾಗುತ್ತವೆ. ಹಾಗಾಗಿ, ಅವನ್ನು ತೌಲನಿಕವಾಗಿ ಜಾಲಾಡಿಸುವುದು ತುಂಬಾ ಅಗತ್ಯ.

ದಲಿತ, ಮಹಿಳಾ ಆತ್ಮಕಥನಗಳು ಬಿಚ್ಚಿಕೊಡುವ ಐತಿಹಾಸಿಕ ಭಿನ್ನ ಸತ್ಯತೆಗಳು ವಿಶೇಷ ಗಮನ ಸೆಳೆಯುವುದರಿಂದ ಸದ್ಯದ ಮಟ್ಟಿಗೆ ಒಟ್ಟು ಆತ್ಮಚರಿತ್ರೆಗಳನ್ನು ದಲಿತ, ದಲಿತೇತರ ಹಾಗೂ ಮಹಿಳಾ ಆತ್ಮಚರಿತ್ರೆಗಳು ಎಂದು ಸ್ಥೂಲವಾಗಿ ವರ್ಗೀಕರಿಸಬಹುದು. ಭಾರತೀಯ ಸಾಮಾಜಿಕ ವ್ಯವಸ್ಥೆ ಶ್ರೇಣೀಕೃತ ವ್ಯವಸ್ಥೆಯಾಗಿದ್ದು, ಪುರುಷಪ್ರಧಾನತೆಯ ಮೌಲ್ಯವನ್ನು ಕಾಪಾಡಿಕೊಂಡು ಬರಲಾಗಿದೆ. ಸಾಮಾಜಿಕ ನಿಯಂತ್ರಣ ಮತ್ತು ನಿರ್ವಹಣೆಯ ದೃಷ್ಟಿಯಿಂದ ಇಂದಿಗೂ ಈ ವ್ಯವಸ್ಥೆ ಪ್ರಮುಖ ಪಾತ್ರ ವಹಿಸುತ್ತಿರುವದರಿಂದ ಈ ರೀತಿಯ ವಿಭಾಗೀಕರಣದ ಮೂಲಕ ಅವುಗಳ ಆತ್ಮಗಳನ್ನು ನೋಡುವುದು ಅನಿವಾರ್ಯವೂ ಹೌದು. ಹಾಗಂತ ಅವುಗಳನ್ನು ಆಯಾ ಜಾತಿ ಗೋಡೆಗಳಿಗೆ ತೂಗುಹಾಕಿ ಪೂಜೆ ಸಲ್ಲಿಸಬೇಕಂತಲ್ಲ. ಅವುಗಳನ್ನು ಮೀರಿ ಅಲ್ಲಿ ಬಿಚ್ಚಿಕೊಡುವ ಮಾನವೀಯತೆ ಮುಖ್ಯವಾಗುತ್ತದೆ. ದಲಿತರನ್ನು ದಲಿತೇತರರು ಶೋಷಿಸಿರುವಂತೆ, ದಲಿತರನ್ನು ದಲಿತರೇ ಶೋಷಿಸುವ ನವಬ್ರಾಹ್ಮಣಶಾಹಿತ್ವ ಜನ್ಮತಾಳಿದೆ. ಮಹಿಳೆಯಿಂದ ಮಹಿಳೆಯ ಶೋಷಣೆ ನಡೆದಿರುವುದರ ಜೊತೆಗೆ 'ಆಧುನಿಕ ಮಹಿಳೆ'ಯಿಂದಲೂ ಅದೆಷ್ಟೋ ಗಂಡಸರು ಶೋಷಣೆ ಅನುಭವಿಸುತ್ತಿದ್ದಾರೆ; ಆತ್ಮಾರ್ಪಣೆ ಮಾಡಿಕೊಂಡಿದ್ದಾರೆ. ಇಂಥ ಆತ್ಮಗಳನ್ನು ಸೂಕ್ಷ್ಮವಾಗಿ ಗಮನಿಸಬೇಕಾಗಿದೆ.

ಸಾಮಾನ್ಯವಾಗಿ ಬಹುತೇಕ ದಲಿತೇತರ ಆತ್ಮಚರಿತ್ರೆಗಳು 'ಉಪದೇಶ' ಮಾಡುವುದಾಗಿರುತ್ತವೆ. ''ಇಷ್ಟೆಲ್ಲ ಕಷ್ಟಗಳ ಮಧ್ಯೆ ನಾನು ಒಳ್ಳೆಯವನಾಗಿದ್ದೇನೆ, ನೀವೂ ಹಾಗೆ ಆಗಿ'' ಎಂದು ಸ್ಪಷ್ಟವಾಗಿ ಹೇಳುತ್ತವೆ. ಆ ಮೂಲಕ ಅವು ನಿಜಸ್ಥಿತಿಯನ್ನು ಮರೆಮಾಚಿಸಿ, ವಿವಿಧ ಸಮೂನೆಯ ಬಣ್ಣ ಬಳಿದು ತಮ್ಮನ್ನು ತಾವು ಆದರ್ಶೀಕರಣಗೊಳಿಸಿಕೊಂಡು ನಾಯಕತ್ವದ ಪಟ್ಟಕ್ಕೆ ಏರುವ ಹವಣಿಕೆಯಲ್ಲಿರುವುದನ್ನು ಗಮನಿಸುತ್ತೇವೆ.

ಇಪ್ಪತ್ತನೆಯ ಶತಮಾನದ ಅಂಚಿನಲ್ಲಿ ಬಂದ ದಲಿತ ಆತ್ಮಚರಿತೆಗಳು ಹಾಗೂ ಕೆಲ ಮಹತ್ವದ ಮಹಿಳಾ ಆತ್ಮಕಥನಗಳು 'ಉಪದೇಶದ ಚಾವಟಿ'ಗೆ ಹೋದವುಗಳಲ್ಲ. ಅದು ಅವುಗಳ ಉದ್ದೇಶವೂ ಅಲ್ಲ. ತಮ್ಮ ಸಾವಿರಾರು ವರ್ಷಗಳ ದುರಂತ ಬದುಕಿನ ಭಯಾನಕತೆಯನ್ನು ಧ್ವನಿಗೊಳಿಸಿ, ವ್ಯವಸ್ಥೆಯ ಮುಖಕ್ಕೆ ರಾಚುವುದೇ ಅವುಗಳ ಮುಖ್ಯ ಉದ್ದೇಶ. ಇದಕ್ಕೆ ಮರಾಠಿ ಭಾಷೆಯಲ್ಲಿ ಬಂದ ಆತ್ಮಚರಿತ್ರೆಗಳು ಪ್ರಬಲ ನಿದರ್ಶನಗಳಾಗುತ್ತವೆ. ಕನ್ನಡದ ಆತ್ಮಚರಿತ್ರೆಗಳಲ್ಲಿ ಈ ಅಂಶವನ್ನು ಕಂಡುಕೊಳ್ಳಬಹುದಾದರೂ ಮರಾಠಿ ಆತ್ಮಚರಿತ್ರೆಗಳಷ್ಟು ಶೋಷಿತ ಬದುಕಿನ ಪ್ರಬಲ ಧ್ವನಿಗಳಾಗಿ ನಿಲ್ಲುವುದಿಲ್ಲ. ಇದಕ್ಕೆ ಮಹಾರಾಷ್ಟ್ರದಲ್ಲಿ ನಡೆದಂತೆ ಕರ್ನಾಟಕದಲ್ಲಿ ಚಳವಳಿ, ಹೋರಾಟಗಳ ಪ್ರಭಾವ ಆಗಿಲ್ಲ ಎಂದು ಸಮರ್ಥಿಸಿಕೊಳ್ಳುವುದನ್ನು ಕಾಣುತ್ತೇವೆ. ಕರ್ನಾಟಕ ಭಾರತವನ್ನು ಬಿಟ್ಟು ಹೊರಗಡೆ ಇಲ್ಲ. ಅದು ಮಹಾರಾಷ್ಟ್ರದ ನೆರೆಯ ರಾಜ್ಯ. ಅಂಬೇಡ್ಕರ್, ಗಾಂಧಿ, ಲೋಹಿಯಾ, ಬಸವಣ್ಣ, ಪೆರಿಯಾರ್, ಫುಲೆ, ಮಾರ್ಕ್ಸ್, ಲೆನಿನ್ ಈ ರಾಜ್ಯದ ಜನತೆಯ ಮೇಲೂ ಪ್ರಭಾವ ಬೀರಿದ್ದಾರೆ. ೧೨ನೇ ಶತಮಾನದಲ್ಲಿಯೇ ತಮ್ಮ ವೃತ್ತಿಗಳ ಬಗ್ಗೆ ಗೌರವ ಭಾವನೆ ಸೂಚಿಸಿ, ತಮ್ಮ ವೃತ್ತಿಗಳ ಮೂಲಕವೇ ತಮ್ಮ ಹೆಸರುಗಳನ್ನು ಗುರುತಿಸಿ ಜಗತ್ತಿನಲ್ಲಿ ದೊಡ್ಡ ಕ್ರಾಂತಿ ಮಾಡಿದ ಶರಣರು ಹುಟ್ಟಿದ್ದು ಇದೇ ಕರ್ನಾಟಕದಲ್ಲಿ ಎಂಬುದನ್ನು ಗಮನಿಸಬೇಕಾಗುತ್ತದೆ. ಕನ್ನಡ ದಲಿತ ಆತ್ಮಗಳು ಆದರ್ಶೀಕರಣದ ಬೆನ್ನಿಗೆ ಬಿದ್ದಿರುವುದರಿಂದ ಶೋಷಣೆಯ ಮುಖಗಳನ್ನು ಬಿಚ್ಚಿಕೊಳ್ಳುವ ಯೋಗ್ಯತೆಯಿಂದ ದೂರು ಸರಿದು ನಿಲ್ಲುತ್ತವೆ.

ದಲಿತ ಆತ್ಮಚರಿತ್ರೆಗಳಲ್ಲಿ ವಾಸ್ತವ ಸ್ಥಿತಿಯ ಬಟಾಬಯಲುಗೊಳಿಸುವ ಧೈರ್ಯವಿದೆ. ಹೀಗೆ ಬಯಲುಗೊಳಿಸಲು ಧೈರ್ಯ ಮತ್ತು ಪ್ರಾಮಾಣಿಕತೆ ಕನ್ನಡಕ್ಕಿಂತ ಮರಾಠಿಯಲ್ಲಿ ಪ್ರಬಲವಾಗಿ ಕಂಡುಬರುತ್ತವೆ. ಜನಾಂಗೀಯ ಅದಮ್ಯ ಕಾಳಜಿ, ಸಾಮಾಜಿಕ ಬದ್ಧತೆ, ತನ್ನ ಜನಾಂಗದ ಉನ್ನತಿಗಾಗಿ ನಡೆಸುವ ಹೋರಾಟದ ದಿಟ್ಟತನ ಮರಾಠಿ ದಲಿತರ ಸಹಜಗುಣವಾಗಿ ಇರುವುದರಿಂದ ಅವುಗಳ ಗಟ್ಟಿಧ್ವನಿ ಕಲ್ಲುಹೃದಯಗಳ ಮೇಲೆ ಬಲವಾಗಿ ಅಪ್ಪಳಿಸುತ್ತದೆ; ಮೃದು ಮನಸ್ಸುಗಳಲ್ಲಿ ಪಾಪಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ; ಶೋಷಿತ ಆತ್ಮಗಳಿಗೆ ಕ್ರಾಂತಿಯ ಕಿಡಿ ಹಚ್ಚುತ್ತವೆ. ದಲಿತೇತರ ಆತ್ಮಗಳಲ್ಲಿ ಆದರ್ಶೀಕರಣದೊಂದಿಗೆ ನಾಯಕತ್ವದ ಪಟ್ಟ ಪ್ರಮುಖ ಪಾತ್ರವಹಿಸುವುದರಿಂದ ಸತ್ಯ ಹೇಳುವ ಯೋಗ್ಯತೆ, ಧೈರ್ಯ ಕಡಿಮೆಯಾಗಿ, ಸುಳ್ಳು ಅಲ್ಲಿ ಪಾತ್ರವಹಿಸುವುದಿಲ್ಲ ಎಂದು ಹೇಳಿದರೆ ತಪ್ಪಾಗುತ್ತದೆ.

ಜನವಿರೋಧಿ ಸಾಂಪ್ರದಾಯಿಕ ಮೌಲ್ಯಗಳ ಕ್ರೌರ್ಯವನ್ನು ದಲಿತ ಆತ್ಮಚರಿತ್ರೆಗಳು ಅನಾವರಣಗೊಳಿಸುತ್ತವೆ. ಆ ಮೂಲಕ ಸಮಾಜ ಸುಧಾರಣೆಗಿಂತ, ಸಾಮಾಜಿಕ ಬದಲಾವಣೆಯ ಕ್ರಾಂತಿಯನ್ನು ಆಹ್ವಾನಿಸುತ್ತವೆ. ಕ್ರಾಂತಿಕಾರ ಹೋರಾಟಗಾರರ ಬದುಕನ್ನು ಹೊರತುಪಡಿಸಿ ದಲಿತೇತರ ಆತ್ಮಚರಿತ್ರೆಗಳು ಸುಧಾರಣೆಯ ಧಾಟಿಯಲ್ಲಿ ರಚಿಸಲ್ಪಟ್ಟಿವೆ. ಹೀಗಾಗಿ ಸಾಂಪ್ರದಾಯಿಕ ಮೌಲ್ಯಗಳ ಆದರ್ಶೀಕರಣವೂ ದಲಿತೇತರ ಆತ್ಮಗಳ ಮೂಲಕ ನಡೆಯುತ್ತದೆ. ಇವುಗಳಿಗೆ ಸಾಂಪ್ರದಾಯಿಕ ಮೌಲ್ಯಗಳೂ ಪ್ರಧಾನವಾದರೆ, ಅವುಗಳ ಸಂವರ್ಧನೆ ಅಥವಾ ಸಂಪೂರ್ಣ ನಿರ್ಮೂಲನೆ ಶೋಷಿತ ಆತ್ಮಕಥನಗಳ ಪ್ರಧಾನ ಆಶಯವಾಗುತ್ತದೆ.

ದಲಿತೇತರ ಆತ್ಮಚರಿತ್ರೆಗಳಲ್ಲಿ ವೈಯಕ್ತಿಕತೆಗೆ ಹೆಚ್ಚು ಪ್ರಾಧಾನ್ಯತೆ ಇರುವುದರಿಂದ, ಆ ಕೃತಿಗಳಿಂದ ಹೊಮ್ಮುವ ಸಾಮುದಾಯಿಕ ಧ್ವನಿ ತೀರ ಕಡಿಮೆ. ಆ ಸಮುದಾಯದಲ್ಲಿ 'ನನ್ನ ಧ್ವನಿ ಏನು ?' ಎನ್ನುವುದು ಮುಖ್ಯವಾಗುತ್ತದೆ. ಆದರೆ ದಲಿತ ಆತ್ಮಚರಿತ್ರೆಗಳದ್ದು ವೈಯಕ್ತಿಕ ಧ್ವನಿಯಾದರೂ ಅದು ವೈಯಕ್ತಿಕತೆಗೆ ಸೀಮಿತಗೊಂಡು ನಿಲ್ಲದೆ ಸಾವಿರಾರು ವರ್ಷಗಳ ಸಾಮುದಾಯಿಕ ಶೋಷಣೆಯ ನೋವಿನ ಆಕ್ರಂದನ-ಆಕ್ರೋಶಗಳ ಧ್ವನಿಯಾಗಿ ಹೊರಹೊಮ್ಮುತ್ತದೆ. 'ಉಚಲ್ಯಾ' ಕೃತಿಯಲ್ಲಿ ಉಚಲ್ಯಾ ಜನಾಂಗದ ಹಿಂಸಾತ್ಮಕ ಬದುಕು, ಅಸಹ್ಯಕರ ಜೀವನ, ಸಹಿಸಿಕೊಳ್ಳಲಾದ ಅಳಲು, ಆಕ್ರಂದನ, ಅನ್ಯಾಯ ಲಕ್ಷ್ಮಣ ಗಾಯಕವಾಡರ ಮೂಲಕ ಅಭಿವ್ಯಕ್ತಿಗೊಳ್ಳುತ್ತವೆ. ದಲಿತರ ಮೇಲೆ ನಡೆಸಿದ ಲೈಂಗಿಕ ಹಿಂಸೆ ಶರಣಕುಮಾರ ಲಿಂಬಾಳೆ ಅವರ ಮೂಲಕ 'ಅಕ್ರಮ ಸಂತಾನ'ದಲ್ಲಿ ಪ್ರಕಟಗೊಳ್ಳುತ್ತದೆ. ಕನ್ನಡದಲ್ಲಿನ ಆತ್ಮಚರಿತ್ರೆಗಳಿಗೆ ಬಂದಾಗ, ಈ ಸಾಮುದಾಯಿಕ ಧ್ವನಿ ಅಷ್ಟು ಗಟ್ಟಿಯಾಗಿ ಕೇಳಿಸುವುದಿಲ್ಲ. ತುಂಬಾ ಆಕ್ರೋಶದಲ್ಲಿ ಸಾಹಿತ್ಯ ರಚಿಸಿ, ಸಾಂಸ್ಕೃತಿಕ ಪಲ್ಲಟಕ್ಕೆ ಕಾರಣವಾದ ಕನ್ನಡ ದಲಿತ ಆತ್ಮಗಳಲ್ಲಿ ಸಾಮುದಾಯಿಕ ಧ್ವನಿ ತುಂಬಾ ಕ್ಷೀಣವಾಗಿರುವುದು ದುರಂತದ ಸಂಗತಿ. ಕನ್ನಡದಲ್ಲಿ ಅಭಿವ್ಯಕ್ತಿಯ ಅನುಮಾನಗಳು, ಸಂಶಯಗಳು ಎದುರಾಗುತ್ತವೆ. ದಲಿತ ಬದುಕಿಗಿಂತ ವೈಯಕ್ತಿಕ ಆದರ್ಶೀಕರಣ ಹೆಚ್ಚು ಕಾಡುತ್ತದೆ.

ಮರಾಠಿಯಲ್ಲಿ ಈ ಪ್ರಶ್ನೆ ಅಷ್ಟಾಗಿ ಕಾಡುವುದಿಲ್ಲ. ಆತ್ಮಚರಿತ್ರೆ ಬರೆದ ಮರಾಠಿ ಲೇಖಕ ತನ್ನ ಜನಾಂಗದ ಬಗ್ಗೆ ಯಾವತ್ತೂ ತುಡಿಯುತ್ತಾನೆ; ಕ್ರಾಂತಿ ಬಯಸುತ್ತಾನೆ. ಸಾಮಾಜಿಕ ಬದಲಾವಣೆಗೆ ಹಾತೊರೆಯುತ್ತಾನೆ. 'ಉಚಲ್ಯಾ'ದ ಲಕ್ಷ್ಮಣ ಗಾಯಕವಾಡ ಅವರು ಜೀವನದ ಉದ್ದಕ್ಕೂ ಅನ್ಯಾಯ, ಅಕ್ರಮ, ಹಿಂಸೆ, ತೊಂದರೆ, ಬಡತನಗಳಂತಹ ಎಲ್ಲ ಅಮಾನವೀಯ ಅನುಭವಗಳನ್ನು ಸಹಿಸಿಕೊಂಡು ತನ್ನ ಜನಾಂಗದ ಉದ್ಧಾರಕ್ಕಾಗಿ ನಿರಂತರವಾಗಿ ಕ್ರಿಯಾಶೀಲಗೊಳ್ಳುತ್ತಾರೆ. ಅವರ ಹೋರಾಟ ಆತ್ಮಚರಿತ್ರೆ ಬರೆಯುವುದಕ್ಕಾಗಿ ಅಲ್ಲ. ತನ್ನಂತೆಯೇ ಹಿಂಸೆಗೆ ಒಳಗಾಗಿ ಬದುಕು ಸಾಗಿಸುತ್ತಿರುವ ಜನಾಂಗದ ಆತ್ಮಗಳ ನೆಮ್ಮದಿಗಾಗಿ ಆತ್ಮಚರಿತ್ರೆಯನ್ನು ಅವರು ಬರೆಯುತ್ತಾರೆ. ಲಕ್ಷ್ಮಣ ಗಾಯಕವಾಡ ಅವರ ಹೋರಾಟ, ಚಳುವಳಿ, ಜನಾಂಗದ ಬಗ್ಗೆ ಹೊಂದಿರುವ ಕಾಳಜಿ ಮತ್ತು ಅದಕ್ಕಾಗಿ ಅವರಲ್ಲಿರುವ ಸಾಮಾಜಿಕ ಬದ್ಧತೆಗಳು ಮೈನವಿರೇಳಿಸುತ್ತವೆ.

ಕನ್ನಡದಲ್ಲಿ ಇಂಥ ಉದಾಹರಣೆಗಳು ಸಿಗುವುದು ತೀರ ಕಡಿಮೆ. ಆದರೆ, ವ್ಯವಸ್ಥೆಯೊಂದಿಗೆ ಹೊಂದಾಣಿಕೆ ಮಾಡಿಕೊಂಡಿರುವ ಸುಳಿವುಗಳು ಮಾತ್ರ ಲಭ್ಯವಾಗುತ್ತವೆ. ಅಷ್ಟೇ ಅಲ್ಲದೆ ದಲಿತರನ್ನೇ ತುಳಿದಿರುವ ತದ್ವಿರುದ್ಧದ ಸಂಗತಿಗಳ ಒಳನೋಟಗಳನ್ನೂ ನಾವು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ.

**ಡಾ|| ಕೆ. ಎಸ್. ದೊಡ್ಡಮನಿ**
ಉಪನ್ಯಾಸಕ, ಕನ್ನಡ ವಿಭಾಗ, ಜೈನ ಮಹಾವಿದ್ಯಾಲಯ
ಹುಂಚಿನ ಹಟ್ಟಿರಸ್ತೆ, ಟಿಪ್ಪುಸುಲ್ತಾನ ನಗರ, ಮಚ್ಚೆ
ಬೆಳಗಾವಿ - ೧೪

**ರಾ**ಜ್ಯಮಟ್ಟದ ೨೦೦೮ರ ಮಾಸ್ತಿ ಕಾದಂಬರಿ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನ ಪಡೆದ ಕೃತಿ – 'ತೇರನೆಳೆಯ ಬಾರ ತಂಗಿ'. ಇದು ಶ್ರೀಮತಿ ದಮಯಂತಿ ನರೇಗಲ್ಲ ಅವರ ನಾಲ್ಕನೆಯ ಕಾದಂಬರಿ. ಲೇಖಕಿಗೆ ಹಾರ್ದಿಕ ಅಭಿನಂದನೆಗಳು. ಕಳೆದ ನಾಲ್ಕು ದಶಕಗಳಿಂದ ಇವರು ಮೌನವಾಗಿಯೇ ಪ್ರಚಾರ, ಪ್ರಸಿದ್ಧಿಗಳಿಂದ ದೂರವಿದ್ದು, ಹತ್ತು ಉತ್ತಮ ಕೃತಿಗಳನ್ನು ರಚನೆ ಮಾಡಿದ್ದಾರೆ. ಅನೇಕ ಬಹುಮಾನಗಳೂ ಇವರನ್ನು ಅರಸಿಕೊಂಡು ಬಂದಿವೆ. 'ಕಲ್ಲ ಖಣಿಯಾಗು, ಕರಕಿ ಬೇರಾಗು', 'ತ್ರಿವೇಣಿ', 'ಯಯಾತಿ ಪ್ರಸಂಗ' ಮತ್ತು ಪ್ರಶಸ್ತಿ ವಿಜೇತ 'ತೇರನೆಳೆಯ ಬಾರ ತಂಗಿ' – ಈ ನಾಲ್ಕು ಕಾದಂಬರಿಗಳೇ ಅಲ್ಲದೆ 'ಕತೆಯಾದಳು ಅಜ್ಜಿ', 'ತಿಪ್ಪೇರಾಣಿ'– ಎಂಬೆರಡು ಕಥಾಸಂಗ್ರಹಗಳು; 'ದೇವರಿಲ್ಲದ ಗೋಡೆ', 'ಪಗಡಿಯಾಟ' ಮತ್ತು 'ಅಮೇರಿಕಾ ಅಮೇರಿಕಾ' – ಎಂಬ ಮೂರು ನಾಟಕಗಳು, ಇತ್ತೀಚೆಗೆ ಪ್ರಕಟಗೊಂಡ ಗಂಗೂಬಾಯಿ ಹಾನಗಲ್ಲರ ಜೀವನಚರಿತ್ರೆ 'ಗಂಗಾವತರಣ' ಇವುಗಳನ್ನು ರಚಿಸಿದ್ದಾರೆ.

'ತೇರನೆಳೆಯ ಬಾರ ತಂಗಿ' – ಹೆಸರೇ ಸೂಚಿಸುವಂತೆ ಉತ್ತರ ಕರ್ನಾಟಕ ಪ್ರದೇಶದ ಗ್ರಾಮೀಣ ಜನಜೀವನ, ಅದರಲ್ಲೂ ಕೌಟುಂಬಿಕ ವಲಯಗಳಲ್ಲಿಯ ಆಗುಹೋಗುಗಳ ವಾಸ್ತವಿಕತೆಯ ಚಿತ್ರಗಳನ್ನು ಈ ಭಾಗದ ಸಂಸ್ಕೃತಿ ಮತ್ತು ಭಾಷೆಯ ಸೊಗಡಿನ ಬಣ್ಣಗಳಿಂದ ತುಂಬಿದ್ದಾರೆ.

**ಪ್ರೊ॥ ಮಾಲತಿ ಪಟ್ಟಣಶೆಟ್ಟಿ**

ಒಂದು ಕಾಲದ ಕೌಟುಂಬಿಕ ಪರಂಪರೆ, ಸಂಸ್ಕೃತಿಗಳ ಮೌಲ್ಯವನ್ನು ಆಧುನಿಕ ಯುಗದ ಮೌಲ್ಯಗಳ ಒರೆಗೆ ಹಚ್ಚಿ ಪರೀಕ್ಷಿಸಿದ್ದಾರೆ. ಹಾಗೆ ಈ ವಸ್ತು ಈ ದಶಕದ ಅನೇಕ ಕಾದಂಬರಿಗಳ ಕೇಂದ್ರ ವಿಷಯವೂ ಆಗಿದೆ.

ಉತ್ತರ ಕರ್ನಾಟಕದ ಹೃದಯಭಾಗದಂತಿರುವ ಬಾಗಲಕೋಟೆ, ವಿಜಾಪುರ, ಧಾರವಾಡ, ಹುಬ್ಬಳ್ಳಿ ಈ ನಗರಗಳ ಸುತ್ತಲಿರುವ ಗ್ರಾಮೀಣ ಪ್ರದೇಶದಲ್ಲಿ ತಲೆತಲಾಂತರಗಳಿಂದ ನೆಲೆಗೊಂಡ ಅನೇಕ ಜಹಗೀರ್‌ದಾರ ಮನೆತನಗಳಲ್ಲಿ ಒಂದರ ಪೂರ್ವ ಮತ್ತು ವರ್ತಮಾನ ಘಟನಾವಳಿಗಳ ಸರಣಿಯ ಕಥಾನಕ ಇಲ್ಲಿದೆ. ಸ್ವಾತಂತ್ರ್ಯಪೂರ್ವದ ನಾಲ್ಕು ದಶಕ, ಸ್ವಾತಂತ್ರ್ಯಾನಂತರದ, ನಾಲ್ಕು ದಶಕ, ಅಂದರೆ ಸುಮಾರು ಒಂದು ಶತಮಾನದ ಕಾಲ ವಿಸ್ತಾರದ ಹಂಬನಲ್ಲಿ ಹಬ್ಬಿಕೊಂಡಿದೆ ಇಲ್ಲಿಯ ಕತೆಯ ಬಳ್ಳಿ. ಕೃಷಿ ಬದುಕಿಗೆ ಸಂಬಂಧಪಟ್ಟಂತೆ, ಸ್ವಾತಂತ್ರ್ಯ ಹೋರಾಟದ ವಿದ್ಯಮಾನಗಳಿಗೆ ಸಂಬಂಧಪಟ್ಟಂತೆ ಮತ್ತು ಆಧುನಿಕ ವೈದ್ಯಕೀಯ ಉದ್ಯೋಗದ ಬದುಕಿನ ಕುರಿತಂತೆ ಹಲವಾರು ಘಟನೆಗಳು ಒಂದರಲ್ಲೊಂದು ತಳಕುಹಾಕಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದು. ಇಲ್ಲಿಯ ಘಟನೆಗಳಲ್ಲಿ ಚಿತ್ರಿತವಾಗಿರುವ [illegible] ಪಾತ್ರಗಳನ್ನಾಗಲಿ, ಚಿಂತನೆಗೆ ಒಳಗಾಗಿರುವ ದೃಷ್ಟಿಕೋನಗಳನ್ನಾಗಲಿ, ಲೇಖಕಿ ಎತ್ತಿಹಿಡಿಯುವ ಮೌಲ್ಯಗಳನ್ನಾಗಲಿ ವೈಭವೀಕರಿಸದೆ ಒಂದು ಚಿಂತನಶೀಲ ಮತ್ತು ಸಮಯಪ್ರಜ್ಞೆಯುಳ್ಳ ವಾಸ್ತವಿಕತೆಯ ಹಾಸುಬೀಸನ್ನೇ ಅಭಿವ್ಯಕ್ತಿಸಿದ್ದು ಈ ಕಾದಂಬರಿಯ ವೈಶಿಷ್ಟ್ಯ.

ಈ ಕಾದಂಬರಿಯ ಕಥಾನಕದ ಹೆಣಿಕೆಯಲ್ಲಿ ಹಲವು ವೈರುಧ್ಯಗಳು ಕಾಣಿಸಿಕೊಂಡು ಲೇಖಕಿಯ ಮೂಲ ಉದ್ದೇಶವನ್ನು ಪುಷ್ಟೀಕರಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಆರ್ಥಿಕವಾಗಿ ಸುಭದ್ರವಾಗಿದ್ದ ಒಂದು ಸುಶಿಕ್ಷಿತ ಜಹಗೀರ್‌ದಾರ ಮನೆತನದ ಪರಂಪರಾಗತ ಬದುಕಿನೊಂದಿಗೆ ಬಡ, ಅಸಹಾಯಕ, ಅಶಿಕ್ಷಿತ, ಅವಲಂಬಿತ ಆದರೆ ನಿಷ್ಠ, ಪ್ರಾಮಾಣಿಕ ಗ್ರಾಮೀಣರ ಬದುಕು ತಳಕು ಹಾಕಿಕೊಂಡಿದೆ. ಉಚ್ಚ ಕುಲದಲ್ಲಿಯ ಪುರುಷ ಪಾತ್ರಗಳು ತಮ್ಮ ಕರ್ತವ್ಯಗಳಿಂದ ವಿಮುಖರಾದರೆ, ಒಂದು ಮನೆತನಕ್ಕೆ ಸೇವೆ ಸಲ್ಲಿಸುತ್ತಿರುವ ಶಿವಪ್ಪಜ್ಜ, ಬಸಪ್ಪ, ನೀಲವ್ವರಂಥ ನಿಷ್ಠ ಗ್ರಾಮೀಣರ ಹಲವು ಉದಾಹರಣೆಗಳಿವೆ. ಶೀನಪ್ಪ, ಕೃಷ್ಣರಾಯ, ಸ್ವಾತಂತ್ರ್ಯ ಹೋರಾಟ, ಯೋಗ, ಯಂತ್ರ-ತಂತ್ರ ಸಾಧನೆಗಳ ನೆಪದಲ್ಲಿ ದೂರಾದರೆ, ಡಾ॥ ಸುರೇಶ ದವೆ ತಮ್ಮ ಅಭಿಲಾಷೆಯಂತೆ ಅಮೇರಿಕದಲ್ಲಿ ವೈದ್ಯಕೀಯ ವೃತ್ತಿ ಮುಂದುವರಿಸುತ್ತಾರೆ

# ೨೦೦೮ರ ಮಾಸ್ತಿ ಕಾದಂಬರಿ ಸ್ಪರ್ಧೆ ಪ್ರಶಸ್ತಿ ವಿಜೇತ ಕಾದಂಬರಿ ದಮಯಂತಿ ನರೇಗಲ್ಲ ಅವರ 'ತೇರನೆಳೆಯ ಬಾರ ತಂಗಿ' – ಒಂದು ಪ್ರತಿಕ್ರಿಯೆ




'ತೇರನೆಳೆಯ ಬಾರ ತಂಗಿ' ಸರಾಗವಾಗಿ ಓದಿಸಿಕೊಂಡು ಹೋಗುವ ಕಾದಂಬರಿ. ಒಂದು ಮನೆತನದ ಹಲವು ತಲೆಮಾರಿನ ಕೌಟುಂಬಿಕ ಬದುಕಿನ ಆಗುಹೋಗುಗಳನ್ನು ಚಿತ್ರಿಸುವ ಈ ಕಾದಂಬರಿ ಒಂದು ಚಿತ್ರಶಾಲೆಯಂತೆ ಕಾಣುತ್ತದೆ. ತಮ್ಮ ಸ್ವತಂತ್ರ ವ್ಯಕ್ತಿತ್ವದಿಂದಾಗಿ ಓದುಗರ ಗಮನಸೆಳೆಯುವ ಸ್ತ್ರೀಪಾತ್ರಗಳ ವೈವಿಧ್ಯವು ಈ ಕಾದಂಬರಿಯ ವೈಶಿಷ್ಟ್ಯವೆನ್ನಬಹುದು. ದಮಯಂತಿ ನರೇಗಲ್ಲ ಅವರು ತಾವು ಸ್ತ್ರೀವಾದಿ ವಿಚಾರಪ್ರಣಾಲಿಯ ಲೇಖಕಿ ಎಂದು ಒಪ್ಪಿಕೊಳ್ಳುವುದಿಲ್ಲ. ಅವರು ಪ್ರತಿಪಾದಿಸುವುದು ಬದುಕಿನ ವಾಸ್ತವಗಳನ್ನು. ಹಾಗಾಗಿ 'ತೇರನೆಳೆಯ ಬಾರ ತಂಗಿ' ಕಾದಂಬರಿ ಸ್ತ್ರೀಲೋಕದ ವಸ್ತುನಿಷ್ಠ ಬದುಕಿನ ಸತ್ಯಗಳನ್ನು ಅನಾವರಣಗೊಳಿಸುವ ಒಂದು ಉತ್ತಮ ಕಾದಂಬರಿ ಎಂದು ಯಾವ ಓದುಗರೂ ಒಪ್ಪಿಕೊಳ್ಳುವಂಥ ಮಾತಾಗಿದೆ.

ಬೆಲೆ : ₹ ೧೨೫
ಪುಟ : viii + ೨೩೬

**ವಸಂತ ಪ್ರಕಾಶನ**
೩೬೦, ೧೦ನೇ 'ಬಿ', ಮೇನ್ ರೋಡ್, ೩ನೇ ಬ್ಲಾಕ್
ಜಯನಗರ, ಬೆಂಗಳೂರು - ೫೬೦ ೦೧೧

...ಂದ್ರಪಾತ್ರವಾದ ಮನೀಷಾಳನ್ನು ಪ್ರೀತಿಸಿ, ನಿಶ್ಚಯಿಸಿಕೊಂಡ ಮದುವೆಯನ್ನು ...ತನ್ನ ಧ್ಯೇಯಜೀವನಕ್ಕಾಗಿ ಮುಂಬೈಗೆ ಹೊರಟು ನಿಂತ ಡಾ|| ಅವಿನಾಶ ಇನ್ನೊಂದು ಉದಾಹರಣೆ. ಡಾ|| ಮನೀಷಾ ನಗರ ಸಂಸ್ಕೃತಿಯನ್ನು ತ್ಯಜಿಸಿ ತನ್ನ ಪೂರ್ವಜರು ನೆಲೆನಿಂತ ಜಾಲಿಕಟ್ಟೆಯ ಗ್ರಾಮೀಣ ಪ್ರದೇಶ, ಇಲ್ಲಿಯ ಮುಗ್ಧ, ಪ್ರಾಮಾಣಿಕ ಜನಸಂಸ್ಕೃತಿಗೆ ಮಾರುಹೋಗಿ ತನ್ನ ಪ್ರೇಮವನ್ನು ಬಲಿಗೊಟ್ಟು ತನ್ನ ದೃಢನಿರ್ಧಾರಗಳಿಗೆ ಬದ್ಧಳಾಗಿ ಉಳಿದರೆ ತದ್ವಿರುದ್ಧವಾಗಿ ಡಾ|| ಅವಿನಾಶ ಗ್ರಾಮೀಣ ಪರಿಸರದಲ್ಲೇ ಹುಟ್ಟಿ ಬೆಳೆದು ಜಾಲಿಕಟ್ಟೆಯಲ್ಲಿ ವೈದ್ಯಕೀಯ ವೃತ್ತಿಯನ್ನು ಕೈಕೊಂಡಿದ್ದರೂ ಡಾ|| ಪ್ರಿಯಂವದನ ಆಮಂತ್ರಣದಿಂದಾಗಿ ವಾಣಿಜ್ಯ ನಗರಿ ಮುಂಬೈನಲ್ಲಿ ತನ್ನ ಧ್ಯೇಯ ಜೀವನವನ್ನು ಅರಳಿಸಿಕೊಳ್ಳಲು ಸಾಧ್ಯವಿದೆ ಎಂದು ತಿಳಿದು ಪ್ರೀತಿಸಿ ಮದುವೆಯಾಗುವ ಅವಕಾಶವನ್ನು ಧಿಕ್ಕರಿಸಿ ಮುಂಬೈಗೆ ಹೊರಟು ನಿಲ್ಲುತ್ತಾನೆ. ಕಾದಂಬರಿಯಲ್ಲಿನ ಸ್ತ್ರೀಪಾತ್ರಗಳು ಹೆಚ್ಚಾಗಿ ವಿವೇಕ, ಧೈರ್ಯ, ಆತ್ಮಾಭಿಮಾನ, ತಾಳ್ಮೆಗಳಿಂದ ತಮ್ಮ ಕುಟುಂಬದ ಸಂರಕ್ಷಣೆಗಾಗಿ, ಉನ್ನತಿಗಾಗಿ ವೈಯಕ್ತಿಕ ಸುಖವನ್ನು ತ್ಯಜಿಸುತ್ತವೆ. ಗುಂಡಾಯಿ ಅಜ್ಜಿ, ಗಂಡ ಭೀಮರಾಯ ಜಹಗೀರ್‌ದಾರರು ಸೂಳೆಗೆ ಕೊಟ್ಟ ಆಭರಣಗಳನ್ನು ತಿರುಗಿ ಪಡೆಯಲು ರಾತ್ರೋರಾತ್ರಿ ಆಳುಮಗನೊಂದಿಗೆ ನಡೆದುಕೊಂಡು ಹೋಗಿ ಸೂಳೆಮನೆಯಲ್ಲಿದ್ದ ಗಂಡನಿಂದ ಅವನ್ನು ಪಡೆದು ಗಂಡನ ಹೆಗಲ ಮೇಲೆ ಕುಳಿತು ಆ ಕಗ್ಗತ್ತಲು ರಾತ್ರಿ ಮನೆಗೆ ಮರಳಿದ ಕತೆ ಕೇಳಿ ರೋಮಾಂಚನವಾಗುತ್ತದೆ. ಅವಳ ಧೈರ್ಯ, ಆತ್ಮಾಭಿಮಾನಗಳು ಓದುಗರ ಪ್ರಶಂಸೆಗೆ ಪಾತ್ರವಾಗುತ್ತವೆ. ಇಂದಿರಾಬಾಯಿ, ಅಂದರೆ ಮನೀಷಾಳ ಅಜ್ಜಿ, ತನ್ನ ಪತಿ ಕೃಷ್ಣರಾವ್ ಸ್ವಾತಂತ್ರ್ಯ ಹೋರಾಟಕ್ಕಾಗಿ ಅದೆಷ್ಟೋ ಕಾಲ ಮನೆಯಿಂದ ದೂರದಲ್ಲಿದ್ದರೂ, ಆಕೆ ಮಾತ್ರ ತನ್ನ ಹೊಲ, ಮನೆ, ಕುಟುಂಬಗಳನ್ನು ತಾಳ್ಮೆಯಿಂದ ನೋಡಿಕೊಳ್ಳುವ ಕರ್ತವ್ಯವನ್ನು ನಿಭಾಯಿಸುತ್ತಾಳೆ, ಒಟ್ಟಾರೆ ಕಾದಂಬರಿಯಲ್ಲಿಯ ಸ್ತ್ರೀಪಾತ್ರಗಳಲ್ಲಿ ಪುರುಷಪಾತ್ರಗಳಿಗಿಂತ ಹೆಚ್ಚಿನ ತೇಜ, ಕೆಚ್ಚುಗಳನ್ನು ಕಾಣಬಹುದು. ಈ ಕಾದಂಬರಿಯ ನಿರೂಪಣೆಯನ್ನು ಮನೀಷಾ ಮತ್ತು ಪ್ರಿಯಂವದಾರಂಥ ಮುಖ್ಯ ಸ್ತ್ರೀಪಾತ್ರಗಳು ಮಾಡುತ್ತಿರುವುದರಿಂದ ಅವರ ಗ್ರಹಿಕೆ ಮತ್ತು ನಿರೂಪಣೆಯಲ್ಲಿ ಪುರುಷಪಾತ್ರಗಳು ನಿಸ್ತೇಜವಾಗಿ ಕಾಣುತ್ತವೆ. ಹೀಗೆ ಹಲವು ವೈರುಧ್ಯಗಳ ನೇಯ್ಗೆಯಿಂದಾಗಿ ಈ ಕಾದಂಬರಿಯಲ್ಲಿಯ ಕತೆ ಹೆಚ್ಚಿನ ಕುತೂಹಲವನ್ನುಂಟುಮಾಡುತ್ತದೆ.

ಕಾದಂಬರಿಯ ಕಥಾನಿರೂಪಣೆಯಲ್ಲಿ ಲೇಖಕಿ ಎರಡು ಬಗೆಯ ತಂತ್ರಗಳನ್ನು ಬಳಸಿದ್ದಾರೆ, ಇದೀಗ ನಿವೇದಿಸಿದಂತೆ ಮನೀಷಾ ಮತ್ತು ಅವರ ತಾಯಿ ಪ್ರಿಯಂವದಾ ಅವರ ಮುಖೇನ ಹೇಳಲ್ಪಟ್ಟ ಕಥೆ ಇದಾದುದರಿಂದ ಒಂದು ರೀತಿ ಆತ್ಮಕಥಾಕಥನದ ಸ್ವರೂಪವನ್ನು ನಾವಿಲ್ಲಿ ಕಾಣುತ್ತೇವೆ. ಇನ್ನೊಂದು ತಂತ್ರವೆಂದರೆ ಫ್ಲಾಷ್ ಬ್ಯಾಕ್ ತಂತ್ರ. ಮನೀಷಾ ಅಜ್ಜಿಯಿಂದ, ತಾಯಿಯಿಂದ, ಶಾರದಾಳಿಂದ ಕೇಳಿ ತಿಳಿದುಕೊಳ್ಳುವ ಕತೆಗಾಗಿ ಈ ಬಗೆಯ ಫ್ಲಾಷ್‌ಬ್ಯಾಕ್ ನಿರೂಪಣಾ ತಂತ್ರವೂ ಇಲ್ಲಿ ಬಳಕೆಯಾಗಿದೆ.

ಈ ಕಾದಂಬರಿಯಲ್ಲಿ ಅಲ್ಲಲ್ಲಿ ವಿವಿಧ ಸಂದರ್ಭಗಳಲ್ಲಿ 'ನೆಲಮನೆ'ಯ ಪ್ರಸ್ತಾಪ ಬರುತ್ತದೆ. ಜಹಗೀರ್‌ದಾರ ಮನೆತನದಲ್ಲಿ ನಡೆದ ಅನ್ಯಾಯ, ಅತ್ಯಾಚಾರದ ರಹಸ್ಯದ ಘಟನೆಗಳನ್ನು ಮುಚ್ಚಿಡಲು ಸಹಾಯಕವಾಗುವಂತೆ ಇಲ್ಲೊಂದು 'ನೆಲಮನೆ'ಯ ಸೃಷ್ಟಿಯಾಗಿದೆ. ತಾನಿಲ್ಲದಿದ್ದಾಗ ತನ್ನ ಗಂಡ ಆಸ್ತಿಯನ್ನು ದತ್ತಕ ಮಗನಿಗೆ ಬರೆದುಕೊಟ್ಟದ್ದನ್ನು ಸಹಿಸದೆ ಗಂಗಾ ಅತ್ಯಾ ಆ ದತ್ತಕ ಮಗನ ಅಕಾಲಿಕ ಮರಣಕ್ಕೆ ಕಾರಣವಾಗುತ್ತಾಳಲ್ಲದೆ ತನ್ನನ್ನು ಈ ಅಪರಾಧದಿಂದ ಉಳಿಸಿಕೊಳ್ಳಲು ಮನೆಗೆ ಬೆಂಕಿ ಹಚ್ಚಿ, ತಾನೂ ಸುಟ್ಟುಕೊಂಡು ಸತ್ತಿರಬೇಕೆಂಬ ಸಮಜೂತನ್ನು ಸಾರ್ವಜನಿಕರಲ್ಲಿ ಉಂಟುಮಾಡಲು ಗಂಡನ ಮನೆಯಿಂದ ಗುಪ್ತವಾಗಿ ಓಡಿ ಬರುವಾಗ ಎಚ್ಚರ ತಪ್ಪಿ ಬೀಳುತ್ತಾಳೆ, ನಂತರ ಅವಳನ್ನು ಜಾಲೀಹಳ್ಳಿ ಮನೆಗೆ ತಂದು, ಹಕೀಕತ್ತನ್ನು ತಿಳಿದ ಬಳಿಕ ಪೊಲೀಸರಿಂದ ಅವಳನ್ನು ರಕ್ಷಿಸುವುದಕ್ಕಾಗಿ ನೆಲಮನೆಯಲ್ಲಿಡುತ್ತಾರೆ. ಗಂಗಾ ಅತ್ಯಾನ ಮರಣದ ನಂತರ ಸೀನಣ್ಣ ಸ್ವಾತಂತ್ರ್ಯದ ಚಳುವಳಿಯಲ್ಲಿ ಸೇರಿ ಕೆಲ ಕಾಲದ ನಂತರ, ಒಬ್ಬ ಸನ್ಯಾಸಿಯೊಂದಿಗೆ ಜಾಲಿಕಟ್ಟೆಗೆ ಬಂದು ತನ್ನ ಮರಣದವರೆಗೆ ಆ ನೆಲಮನೆಯಲ್ಲೇ ಇರುತ್ತಾನೆ. ಈ ನೆಲಮನೆಯಲ್ಲಿ ಮಂತ್ರ-ತಂತ್ರದ ವಿದ್ಯೆಗಳ ಸಾಧನೆಯಲ್ಲಿ ಶೀನಣ್ಣ ತಾನು ಕರೆದು ತಂದ ಸನ್ಯಾಸಿಯ ಜೊತೆ ರಹಸ್ಯವಾಗಿ ಅದೇ ನೆಲಮನೆಯಲ್ಲಿ ಉಳಿದಿರುತ್ತಾನೆ. ಶ್ರೀಮಂತ, ಪ್ರತಿಷ್ಠಿತ ಮನೆತನದ ಜನರು ತಮ್ಮ ಅನ್ಯಾಯಗಳನ್ನು ರಹಸ್ಯವಾಗಿ ಇಡಲು ಇಂಥ ನೆಲಮನೆಗಳ ಆಶ್ರಯ ಪಡೆದ ಅನೇಕ ಉದಾಹರಣೆಗಳಿವೆ. ಆದರೆ ಬಡವರು ಇಂಥ ಅನ್ಯಾಯಗಳನ್ನು ಬಚ್ಚಿಡಲು ಸಾಧ್ಯವಾಗದೆ ರಹಸ್ಯಗಳು ಬಯಲಾಗಿ, ಬರುವ ಅಪಾದನೆ, ಕಷ್ಟಗಳಿಗೆ ಎದೆಗೊಡುವ ಧೈರ್ಯವನ್ನು ಅವರು ತೋರುವುದನ್ನು ವಾಸ್ತವದ ಬದುಕಿನಲ್ಲೂ ಕಾಣುತ್ತೇವೆ.

ಕಾದಂಬರಿಯ ಶೀರ್ಷಿಕೆ 'ತೇರನೆಳೆಯ ಬಾರ ತಂಗಿ' – ಇದು ಶಿಶುನಾಳ ಶರೀಫರ ಪದದಲ್ಲಿ ಬರುವ ಪದಸಮುಚ್ಚಯ. ಬಾಳೆಂಬ ತೇರನ್ನು ಎಳೆಯಲು ಲೇಖಕಿಯರು ಮಹಿಳೆಯರಿಗೆ ಕೊಟ್ಟ ಆಹ್ವಾನವು ಅರ್ಥಪೂರ್ಣವಾಗಿದೆ. ಸಂಸಾರದ ತೇರನ್ನು ಈ ಕಾದಂಬರಿಯ ಎಲ್ಲಾ ಸ್ತ್ರೀಪಾತ್ರಗಳು ಸಮರ್ಥವಾಗಿ ಎಳೆದಿವೆ. ಅದಕ್ಕೆ ಅವರು ತಮ್ಮ ಸುಖ, ಸಮಾಧಾನಗಳನ್ನು ಬದಿಗೊತ್ತಿದ್ದುಂಟು. ಬದುಕೆಂಬ ಹಡಗಿನ ಕರ್ಣಧಾರಿತ್ವವನ್ನು ವಹಿಸುವ ಕೆಚ್ಚನ್ನು ಭಾರತೀಯ ಕುಟುಂಬಸಂಸ್ಕೃತಿಯಲ್ಲಿ ಮಹಿಳೆಯೇ ಮಾಡುತ್ತ ಬಂದಿದ್ದಾಳೆ. ಕರ್ತವ್ಯವನ್ನು, ಜವಾಬುದಾರಿಯನ್ನು ಪುರುಷರು ನಿರ್ಲಕ್ಷಿಸಬಲ್ಲರು, ಆದರೆ ಮನೆತನವನ್ನು ತೂಗಿಸಿಕೊಂಡು ಹೋಗುವ, ವಂಶವನ್ನು ಉದ್ಧರಿಸುವ, ಕುಟುಂಬದ ಏಳುಬೀಳುಗಳ ಮಧ್ಯದಲ್ಲಿಯೂ ಎದೆಗುಂದದೆ ಅದರ ಗೌರವ ಕಾಪಾಡುವ ದಿಶೆಯಲ್ಲಿ ನಮ್ಮ ಮಹಿಳೆಯರು ಹೆಣಗುತ್ತ ಬಂದಿದ್ದಾರೆ. ಆದ್ದರಿಂದ ಲೇಖಕಿ ಬದುಕಿನ ತೇರನ್ನೆಳೆಯಲು ಮಹಿಳೆಯರನ್ನೇ ಕರೆದದ್ದು ತುಂಬ ಧ್ವನಿಪೂರ್ಣವಾಗಿದೆ.

ಕತೆಯ ಅಂತ್ಯವೂ ಸಹ ಬಹಳ ಕುತೂಹಲಕಾರಿಯಾಗಿದೆ. ಡಾ|| ಅವಿನಾಶ ತಾನು ಮನೀಷಾಳನ್ನು ಪ್ರೀತಿಸಿ ಮದುವೆಯಾಗಲು ಸಿದ್ಧನಿದ್ದಾಗ್ಯೂ ತನ್ನ ಜೀವನ ನಿರ್ವಹಣೆಗಾಗಿ ಮುಂಬೈಗೆ ಹೊರಟು ನಿಲ್ಲುತ್ತಾನೆ, ಇದು ನಮ್ಮ ಕಲ್ಪನೆಗೆ ಎದುರಾದ ಒಂದು ಆಘಾತವೆನ್ನಬಹುದು. ನಮ್ಮ ಎಲ್ಲಾ ಜನಪ್ರಿಯ ಕಾದಂಬರಿಕಾರರು ಸುಖಾಂತದ ಕತೆಗಳನ್ನೇ ಹೆಣೆಯುತ್ತ ದೂರವಾದ ಸಂಬಂಧಗಳನ್ನು ಜೋಡಿಸಿ ವಾಚಕರ ಮೆಚ್ಚುಗೆ ಪಡೆಯುವುದು ಒಂದು ವಾಡಿಕೆ. ಡಾ|| ಅವಿನಾಶ ಮುಂಬೈಗೆ ಹೊರಟಾಗ ಅವನನ್ನು ತಡೆಯುವ ಪ್ರಯತ್ನಗಳನ್ನು ಮನೀಷಾ ಮಾಡುವುದಿಲ್ಲ ಅಥವಾ ಅವನ ಬೆನ್ನು ಹತ್ತಿ ತಾನೂ ಮುಂಬೈಗೆ ಹೋಗುವುದಿಲ್ಲ. ತನ್ನ ಪೂರ್ವನಿರ್ಧಾರದಂತೆ, ಪೂರ್ವಜರು ನೆಲೆಗೊಂಡ ಜಾಲಿಕಟ್ಟೆಯಂಥ ಗ್ರಾಮೀಣ ಪರಿಸರದಲ್ಲಿ ತನ್ನ ವೈದ್ಯಕೀಯ ವೃತ್ತಿಯನ್ನು ಮುಂದುವರಿಸುತ್ತಾಳೆ. ಇದು ಮನಿಷಾಳ ಪಾತ್ರದ ವೈಶಿಷ್ಟ್ಯ. ವಿಚಾರ ಸ್ವಾತಂತ್ರ್ಯದಿಂದಾಗಿ, ಸ್ವಾಭಿಮಾನದಿಂದಾಗಿ ತನ್ನ ನಿರ್ಭಿಡೆಯ ವ್ಯಕ್ತಿತ್ವವನ್ನು ಕಾಯ್ದುಕೊಂಡದ್ದು ಮೆಚ್ಚುವಂಥ ಸಂಗತಿ. ಇದು ಈ ಪಾತ್ರದ ಆಕರ್ಷಣೆಗೆ ಕಾರಣವೂ ಅಹುದು. ತಾಯಿ ಮಗಳಿಗೆ ಮುಂಬೈಗೆ ಬರಲು ಬರೆದ ಮನವೊಲಿಕೆಯ ಪತ್ರವನ್ನು ಕಾಗದದ ದೋಣಿಯನ್ನು ಮಾಡಿ ನೀರಲ್ಲಿ ತೇಲಿಬಿಟ್ಟಾಗ ಅದು ಯಾವ ದಂಡೆಯನ್ನೂ ಮುಟ್ಟದೆ, ತನ್ನ ಪಯಣವನ್ನು ಮುಂದುವರಿಸುತ್ತದೆ. ಈ ಚಿತ್ರವು ಮನೀಷಾಳ ವ್ಯಕ್ತಿತ್ವದ ಅಂತರಾಳವನ್ನೂ ವಿವರಿಸುತ್ತದೆ. ಇದೊಂದು ಕಾವ್ಯಾತ್ಮಕ ದೃಶ್ಯದಂತೆ ಓದುಗರ ಗಮನವನ್ನು ಸೆಳೆಯುತ್ತದೆ.

'ತೇರನೆಳೆಯ ಬಾರ ತಂಗಿ' ಸರಾಗವಾಗಿ ಓದಿಸಿಕೊಂಡು ಹೋಗುವ ಕಾದಂಬರಿ. ಒಂದು ಮನೆತನದ ಹಲವು ತಲೆಮಾರಿನ ಕೌಟುಂಬಿಕ ಬದುಕಿನ ಆಗುಹೋಗುಗಳನ್ನು ಚಿತ್ರಿಸಿರುವ ಈ ಕಾದಂಬರಿ ಒಂದು ಚಿತ್ರಶಾಲೆಯಂತೆ ಕಾಣುತ್ತದೆ. ತಮ್ಮ ಸ್ವತಂತ್ರ ವ್ಯಕ್ತಿತ್ವದಿಂದಾಗಿ ಓದುಗರ ಗಮನಸೆಳೆಯುವ ಸ್ತ್ರೀಪಾತ್ರಗಳ ವೈವಿಧ್ಯವು ಈ ಕಾದಂಬರಿಯ ವೈಶಿಷ್ಟ್ಯ. ದಮಯಂತಿ ನರೇಗಲ್ಲ ಅವರು ತಾವು ಸ್ತ್ರೀವಾದಿ ವಿಚಾರ ಪ್ರಣಾಲಿಯ ಲೇಖಕಿ ಎಂದು ಒಪ್ಪಿಕೊಳ್ಳುವುದಿಲ್ಲ. ಅವರು ಪ್ರತಿಪಾದಿಸುವುದು ಬದುಕಿನ ವಾಸ್ತವಗಳನ್ನು. ಹಾಗಾಗಿ 'ತೇರನೆಳೆಯ ಬಾರ ತಂಗಿ' ಕಾದಂಬರಿ ಸ್ತ್ರೀಲೋಕದ ವಸ್ತುನಿಷ್ಠ ಬದುಕಿನ ಸತ್ಯಗಳನ್ನು ಅನಾವರಣಗೊಳಿಸುವ ಒಂದು ಉತ್ತಮ ಕಾದಂಬರಿ ಎಂದು ಯಾವ ಓದುಗರೂ ಒಪ್ಪಿಕೊಳ್ಳುವಂಥ ಮಾತಾಗಿದೆ.

**ಪ್ರೊ|| ಮಾಲತಿ ಪಟ್ಟಣಶೆಟ್ಟಿ**
ನಿವೃತ್ತ ಪ್ರಾಧ್ಯಾಪಕಿ, ಲೇಖಕಿ, ಧಾರವಾಡ

ತುಣಿತ

ದೊಡ್ಡವರ ಹೆಸರುಗಳನ್ನು ರಸ್ತೆಗಳಿಗಿಟ್ಟು ತುಳಿಯುವುದು ಬೇಡ !

# ನವಕರ್ನಾಟಕ ಪ್ರಕಾಶನ - ಚಿನ್ನದ ಹಬ್ಬ
## (೧೯೬೦-೨೦೧೦)





## ಚಿನ್ನದ ಹಬ್ಬದ ಸಂಭ್ರಮ !

೧೯೬೦ರಲ್ಲಿ ಪ್ರಾರಂಭವಾದ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಚಿನ್ನದ ಹಬ್ಬವನ್ನು ತಾ॥ ೨೯-೦೮-೨೦೧೦ರ ಭಾನುವಾರದಂದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಸಂಭ್ರಮದಿಂದ ಆಚರಿಸಲಾಯಿತು. ಕಲಾಕ್ಷೇತ್ರದ ಹೊರಾವರಣ ತಳಿರು ತೋರಣಗಳಿಂದ ಅಲಂಕೃತವಾಗಿತ್ತು. ಮೊಗಸಾಲೆಯಲ್ಲಿ ನವಕರ್ನಾಟಕದ ಐವತ್ತು ವರ್ಷಗಳ ಹೆಜ್ಜೆಗುರುತನ್ನು ಪರಿಚಯ ಮಾಡಿಕೊಡುವ ರೀತಿಯಲ್ಲಿ ಛಾಯಾಚಿತ್ರಗಳನ್ನು ಮತ್ತು ಪುಸ್ತಕಗಳ ಮುಖಪುಟಗಳನ್ನು ವಿಶಿಷ್ಟ ರೀತಿಯಲ್ಲಿ ಪ್ರದರ್ಶಿಸಲಾಗಿತ್ತು.

ನವಕರ್ನಾಟಕದ ಹಿತೈಷಿಗಳು, ಓದುಗರು, ಪುಸ್ತಕಾಸಕ್ತರು, ಲೇಖಕರು, ಚಿತ್ರಕಲಾಕಾರರು, ಛಾಯಾಚಿತ್ರಗಾರರು, ರಂಗಭೂಮಿ ಮತ್ತು ಕಿರುತೆರೆಯ ನಟನಟಿಯರು, ಪುಸ್ತಕ ಮಾರಾಟಗಾರರು, ಪ್ರಕಾಶಕರು ಉತ್ಸಾಹದಿಂದ ಭಾಗವಹಿಸಿದ್ದಲ್ಲದೆ ಮೊಗಸಾಲೆಯಲ್ಲಿ ಅನೇಕ ಹಿರಿಯ ಕಿರಿಯ ಲೇಖಕರ ಚಿತ್ರಗಳನ್ನು ನೋಡುತ್ತ ನವಕರ್ನಾಟಕ ನಡೆದುಬಂದ ದಾರಿಯಲ್ಲಿ ಹೆಜ್ಜೆಹಾಕಿದರು.

ಚಿನ್ನದ ಹಬ್ಬದ ಅಂಗವಾಗಿ ನವಕರ್ನಾಟಕದ ಹೆಮ್ಮೆಯ ಪ್ರಕಟಣೆಯಾದ 'ಕರ್ನಾಟಕ ಕಲಾದರ್ಶನ' ಕೃತಿಯ ಲೋಕಾರ್ಪಣೆ ಕಾರ್ಯಕ್ರಮ ಸಹ ಅದ್ದೂರಿಯಾಗಿ ನೆರವೇರಿತು. ನವಕರ್ನಾಟಕದ ಲೇಖಕರು ಚಿನ್ನದ ಹಬ್ಬದ ಕೊಡುಗೆಯಾಗಿ ನೆನಪಿನ ಕಾಣಿಕೆಯನ್ನು ಸ್ವೀಕರಿಸಿದರು.

ಹಂಪಿ ವಿಶ್ವವಿದ್ಯಾಲಯದ ಮಾಜಿ ಕುಲಪತಿ, ನಾಟಕಕಾರ ಮತ್ತು ಬರಹಗಾರ ಡಾ॥ ಚಂದ್ರಶೇಖರ ಕಂಬಾರರು ಕರ್ನಾಟಕ ಕಲಾದರ್ಶನ ಕೃತಿಯ ಲೋಕಾರ್ಪಣೆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ರಾಜ್ಯಸಭಾ ಸದಸ್ಯೆ ಮತ್ತು ರಂಗಕಲಾವಿದೆ ಡಾ॥ ಬಿ. ಜಯಶ್ರೀ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಮುಖ್ಯಮಂತ್ರಿ ಚಂದ್ರು ಮತ್ತು ಕಲಾಪೋಷಕ ಹಾಗೂ ಉದ್ಯಮಿ ಶ್ರೀ ಡಿ. ಕೆ. ಚೌಟ ಅವರುಗಳು ಗೌರವಾನ್ವಿತ ಅತಿಥಿಗಳಾಗಿ ಭಾಗವಹಿಸಿ ಸಮಾರಂಭಕ್ಕೆ ಶೋಭೆ ತಂದರು.







# ಕರ್ನಾಟಕ ಕಲಾದರ್ಶನ ಲೋಕಾರ್ಪಣೆ









ಕೃತಿ ಲೋಕಾರ್ಪಣೆ – (ಚಿತ್ರದಲ್ಲಿ ಎಡದಿಂದ ಬಲಕ್ಕೆ) ಡಾ॥ ಚಂದ್ರಶೇಖರ ಕಂಬಾರ, ಶ್ರೀ ಡಿ. ಕೆ. ಚೌಟ, ಡಾ॥






ಕರ್ನಾಟಕದ ನಾನಾ ಭಾಗಗಳಿಂದ – ಹಂಪಿ, ಗದಗ, ಧಾರವಾಡ, ಚಿತ್ರದುರ್ಗ, ಮೈಸೂರು, ಬೆಳಗಾವಿ, ಕೋಲಾರ, ತುಮಕೂರು ಮತ್ತು ಮಂಗಳೂರು – ಹಾಗೆಯೇ ಇಂಗ್ಲೆಂಡಿನಿಂದ ಸಹ ಸಾಹಿತಿ, ಕಲಾವಿದರು ಮತ್ತು ಹಿತೈಷಿಗಳು ಸಮಾರಂಭಕ್ಕೆ ಆಗಮಿಸಿದ್ದರು.

ಎಂ. ಡಿ. ಪಲ್ಲವಿಯವರ ಶುಭಾರಂಭ ಗೀತೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಕನ್ನಹಳ್ಳಿ ಸರಕಾರಿ ಪ್ರಾಥಮಿಕ ಶಾಲೆಯ ೫೦ ಮಂದಿ ಬಾಲಕ-ಬಾಲಕಿಯರು ನವಕರ್ನಾಟಕದ ೫೦ರ ಸಂಭ್ರಮದ ಸಂಕೇತವಾಗಿ ದೀಪಾಂಜಲಿ ಅರ್ಪಿಸಿದರು. ಸುಷ್ಮಾ ಪ್ರಶಾಂತ್ ನಿರ್ದೇಶನದಲ್ಲಿ





# ಕರ್ನಾಟಕ ಕಲಾದರ್ಶನ ಲೋಕಾರ್ಪಣೆ





ಕೃಷ್ಣರಾವ್, ಶ್ರೀ ಆರ್. ಎಸ್. ರಾಜಾರಾಮ್, ಡಾ॥ ವಿಜಯಾ,
ಶ್ರೀ ಮುಖ್ಯಮಂತ್ರಿ ಚಂದ್ರು ಮತ್ತು ಪ್ರೊ॥ ಎಂ. ಎಚ್. ಕೃಷ್ಣಯ್ಯ









ಯುವತಂಡದ ನೃತ್ಯಕಲಾವಿದರು ನೃತ್ಯಾಂಜಲಿ ಹಾಗೂ ಕರ್ನಾಟಕ ಕಲಾದರ್ಶನ ಆಧಾರಿತ ನೃತ್ಯ ಪ್ರದರ್ಶಿಸಿದರು. ಕಲಾಕದಂಬ ಆರ್ಟ್ಸ್ ಸೆಂಟರ್‌ನ ಕಲಾವಿದರು ಶ್ರೀ ರಾಧಾಕೃಷ್ಣ ಉರಾಳರ ನಿರ್ದೇಶನದಲ್ಲಿ 'ಕೃಷ್ಣವಿಜಯ' ಯಕ್ಷಗಾನ ಪ್ರಸಂಗ ಪ್ರದರ್ಶನ ನೀಡಿದರು. ಶ್ರೀಧರಮೂರ್ತಿಯವರು ಭೂಗೋಳದ ಒಳಗಡೆಯಿಂದ 'ಕರ್ನಾಟಕ ಕಲಾದರ್ಶನ' ಹಿಡಿದ ಕೈಗಳು ಹೊರಚಾಚುವಂತೆ ಕಲಾತ್ಮಕ ಅನಾವರಣಕ್ಕೆ ಸಹಾಯಕರಾದರು. ರಂಗಕರ್ಮಿ ಮತ್ತು ಕಿರುತೆರೆ ನಟ ಕೆ. ವಿ. ನಾಗರಾಜ ಮೂರ್ತಿ ಅವರ ಸಹಾಯಕರು ಕಲಾಕ್ಷೇತ್ರದ ಮೊಗಸಾಲೆ ಮತ್ತು ವೇದಿಕೆಯನ್ನು ವಿಶಿಷ್ಟ ರೀತಿಯಲ್ಲಿ ಅಲಂಕರಿಸಿ ಶೋಭೆಯನ್ನು ಹೆಚ್ಚಿಸಿದ್ದರು.

















# ನವಕರ್ನಾಟಕ ಚಿನ್ನದ ಹಬ್ಬ ಸಂಸ್ಕೃತಿ ದರ್ಶನ











ಈ ಕೃತಿ ಸಾಹಿತ್ಯಲೋಕದ ಭಂಡಾರ. ಇದು ಹೊರ ರಾಜ್ಯ, ರಾಷ್ಟ್ರಗಳಿಗೂ ಮುಟ್ಟಬೇಕು. ಇದನ್ನು ಜನಪ್ರತಿನಿಧಿಗಳು, ಅಧಿಕಾರಿಗಳು ತಲುಪಿಸುವ ಕೆಲಸ ಮಾಡಬೇಕು.

— ಮುಖ್ಯಮಂತ್ರಿ ಚಂದ್ರು, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ

ಕೃತಿ ಕರ್ನಾಟಕದ ಕಲಾ ದರ್ಪಣ, ಕಲಾ ದರ್ಶನ. ಇದನ್ನು ನಾನು ಸಂಸತ್ ಭವನದ ಗ್ರಂಥಾಲಯಕ್ಕೆ ನೀಡುವೆ.

— ಬಿ. ಜಯಶ್ರೀ, ರಂಗ ಕಲಾವಿದೆ, ರಾಜ್ಯಸಭಾ ಸದಸ್ಯೆ

ಚಿತ್ರಗಳು : ಕೆ. ಎಸ್. ರಾಜಾರಾಮ್, ಟಿ. ಎಲ್. ರಾಮಸ್ವಾಮಿ, ಕೆ. ಪಿ. ಸ್ವಾಮಿ, ಕಿರಣ್ ಚೌಬೀನ

# ಪುಸ್ತಕ ಪ್ರಪಂಚದಲ್ಲಿ ಒಂದು ಹೊಸ ಮಹಾಕ್ರಾಂತಿ

ಚಿತ್ರ ೩

ಹಿಂದಿನಿಂದ ಮನೆಮನೆಗಳಲ್ಲಿ ಟೀವಿ ಇರುವಂತೆ, ಈಗೀಗ ಬಹಳ ಜನಗಳ ಕೈಯಲ್ಲಿ ಮೊಬೈಲ್ ಫೋನ್ ಇರುವಂತೆ, ಕೆಲವೇ ವರ್ಷಗಳಲ್ಲಿ ಬಹಳ ಓದುಗರ ಕೈಯಲ್ಲಿ ಒಂದು ಅಂತಹುದೇ ಪುಸ್ತಕ ಇರುತ್ತದೆ; ಎರಡೇ ಹಾಳೆಯುದು; ಫೋನಿನಷ್ಟೆ ಬೆಲೆಯದು ! ಬಿಚ್ಚಿಟ್ಟು, ಬೇಕಾದ ಪುಸ್ತಕದ ಬೇಕಾದ ಪುಟವನ್ನು ತಂದುಕೊಂಡು ಓದಲಾರಂಭಿಸಬಹುದು.

ಅಮೆಝಾನ್‌ನಂತಹ ಅನೇಕ ದೊಡ್ಡ ದೊಡ್ಡ ಪ್ರಕಾಶಕರು ಸಹಿತ, ಇಂತಹ ಸವಲತ್ತುಳ್ಳ ಮುಂದಿನ ಓದುಗರಿಗೆಲ್ಲ ಸ್ವಲ್ಪ ಬೆಲೆಗೊ ಅಲ್ಪ ಶುಲ್ಕಕ್ಕೊ ತಮ್ಮೆಲ್ಲ ಹೊಸ ಪುಸ್ತಕಗಳನ್ನು ಒದಗಿಸಿಕೊಡುವ ಪ್ರಯತ್ನ ಪ್ರಾರಂಭಿಸಿದ್ದಾರೆ. ಈಗಾಗಲೇ ಅನೇಕ ಲೇಖಕರು, ಹಾಗೂ ಪ್ರಸಾರಕ್ಕೆ ಹಾತೊರೆವ ಬಹುಶಃ ಎಲ್ಲ ಮತೀಯ ಪ್ರಚಾರಕರು, ತಮ್ಮೆಲ್ಲ ಲೇಖನ, ಪುಸ್ತಕಗಳನ್ನು 'ಬ್ಲಾಗ್'ಗಳಲ್ಲಿ ಹಾಕಿಯೊ, ಇಂಟರ್ನೆಟ್‌ನಲ್ಲೊ, ಉಚಿತವಾಗಿ ಓದಲಿಕ್ಕೆ ದಾಖಲಿಸಿಬಿಡುತ್ತಿದ್ದಾರೆ. ಹತ್ತಾರು ವರ್ಷಗಳಿಂದ, ಅನೇಕ ವಿಜ್ಞಾನ ಮಾಸಿಕಗಳು, ಬಹಳಷ್ಟು ದಿನಪತ್ರಿಕೆಗಳು ಹೀಗೆ ಮಾಡುತ್ತಿರುವುದರಿಂದ, ಈ ಏರ್ಪಾಟಿನಲ್ಲಿ ಆರ್ಥಿಕ ಮುಗ್ಗಟ್ಟು ಇರಲಿಕ್ಕಿಲ್ಲ. ವರ್ಣಚಿತ್ರಗಳ ಜೊತೆಜೊತೆಗೆ ಆಡಿಯೊ ವಿಡಿಯೊಗಳನ್ನೂ ಒಳಗೊಂಡಿರಬಲ್ಲ, ಉಪಾಧ್ಯಾಯರು ಮಾತ್ರ ಮಾರ್ಪಡಿಸಬಲ್ಲ ನಿಯಮವುಳ್ಳ, ವಿದ್ಯಾರ್ಥಿಗಳ ಉತ್ತರಗಳ ಮೌಲ್ಯಮಾಪನ ನಿರ್ವಹಿಸಬಲ್ಲ, ಈ ಮಾದರಿಯ ಪುಸ್ತಕಗಳೇ ಮುಂದಿನ ಪಠ್ಯಪುಸ್ತಕಗಳು ಎಂದು ಈಗಲೇ ಹೇಳಿಬಿಡಬಹುದು. ಇವುಗಳೆಲ್ಲ ಈಗಾಗಲೇ ಕೆಲವೆಡೆಗಳಲ್ಲಿ ನಡೆಯುತ್ತಿರುವವು.

**ಡಾ|| ಎಮ್. ಎನ್. ಕೇಶವ ರಾವ್**

**ಪು**ಸ್ತಕಪ್ರಪಂಚದಲ್ಲಿ ಇತ್ತೀಚೆಗೆ ಒಂದು ಮಹಾಕ್ರಾಂತಿ ನಡೆಯಿತು. ಕಳೆದ ೩೦ ವರ್ಷಗಳಿಂದ ಕಂಪ್ಯೂಟರ್‌ಗಳಲ್ಲಿ ಕೂಡಿಕೊಳ್ಳುತ್ತಿದ್ದ ಪುಸ್ತಕರಾಶಿಯ ಅಣೆಕಟ್ಟು ೫-೬ ವರ್ಷಗಳ ಹಿಂದಷ್ಟೆ ತುಂಬಿ ಹರಿಸತೊಡಗಿತು. ಅದು ಈಗ ಪುಸ್ತಕಗಳ ಮಹಾಪೂರವನ್ನೆ ತರುತ್ತಿದೆ. ಆಗಿನಿಂದ ವರ್ಷವರ್ಷಕ್ಕೂ ಈ ಪ್ರವಾಹ ಹೆಚ್ಚುಹೆಚ್ಚುಗೊಳ್ಳುತ್ತಿದ್ದು, ಈಗ, ಸಂಬಂಧಪಟ್ಟ ಇತರೇ ಮಾಹಿತಿಗಳೊಡನೆ ಒಂದು ಲಕ್ಷವನ್ನೂ ಮೀರಲಿದೆ. ಕಂಪ್ಯೂಟರ್ ಬಳಕೆಯನ್ನು ಬಲ್ಲ ಪ್ರತಿಯೊಬ್ಬನೂ ಈ ಎಲ್ಲ ಪುಸ್ತಕಗಳ ಒಡೆಯ! ಯಾವ ದೇಶದವನಾಗಲಿ ಯಾವುದೇ ಶುಲ್ಕವನ್ನು ಕೊಡದೆ ತನಗೆ ಬೇಕಾದಾಗಲೆಲ್ಲ ತನ್ನ ಈ ಭಂಡಾರದ ಎಷ್ಟೇ ಪುಸ್ತಕಗಳನ್ನು ತೆಗೆದು ತನ್ನದೇ ಕಂಪ್ಯೂಟರ್‌ನ ಕಪಾಟಿನಲ್ಲಿ ಇಟ್ಟುಕೊಳ್ಳಬಹುದು. ಹಿಂದಿರುಗಿಸಬೇಕಾಗಿಲ್ಲ! ಕಪಾಟು ತುಂಬಿದಾಗ ಮಾತ್ರ ಬೇಡದ್ದನ್ನು ಹೊರಹಾಕಿ ಹೊಸದನ್ನು ತುಂಬಿಕೊಳ್ಳಬಹುದು. ಕೊಳ್ಳುಬಾಕನಾದವನು ತನ್ನ ಕಪಾಟನ್ನೆ ಸುಲಭದಲ್ಲಿ ದೊಡ್ಡದು ಮಾಡಿ ಮತ್ತಷ್ಟು ಕೊಳ್ಳೆಹೊಡೆಯಬಹುದು. ಆಗಾಗ ಈ ಸುವ್ಯವಸ್ಥಿತ ಯೋಜನೆಯ ಬೃಹತ್ ಭಂಡಾರದ ಸೂಚನಾಪಟ್ಟಿಯಲ್ಲಿ ಇಣಿಕಿನೋಡಿ ಹೊಸ ಪುಸ್ತಕಗಳನ್ನು ಅವಲೋಕಿಸಿ, ಇಷ್ಟವಾದಲ್ಲಿ ಅವನ್ನೂ ತುಂಬಿಕೊಳ್ಳಬಹುದು.

ಈ ಕ್ರಾಂತಿ ಇಷ್ಟಕ್ಕೆ ಸೀಮಿತವಲ್ಲ! ಕಣ್ಣು ಮಂಜಾದವ, ತನ್ನ ಕಂಪ್ಯೂಟರ್ ಒಳಗಿನ ಯಾವುದೇ ಪುಸ್ತಕದ ಭಾಗಗಳನ್ನು ದೊಡ್ಡ ಅಕ್ಷರದ್ದನ್ನಾಗಿ ಮಾಡಿ ಅನುಕೂಲವಾಗಿ ಓದಬಹುದು. ಕಣ್ಣಿನ ತೊಂದರೆ ಇನ್ನೂ ಹೆಚ್ಚಾಗಿದ್ದವರು ಬೃಹತ್ ಭಂಡಾರದಲ್ಲಿರುವ ಬಹಳಷ್ಟು ಪುಸ್ತಕಗಳ, ಯಾರೋ ಸ್ವಯಂಸೇವಕರು ಓದಿಟ್ಟ ಆಡಿಯೋ ರೆಕಾರ್ಡ್‌ಗಳನ್ನು ಪ್ರತಿ ಮಾಡಿಟ್ಟುಕೊಂಡು ಸಮಯ ಸಿಕ್ಕಾಗ ಕೇಳಬಹುದು. ಎಲ್ಲ ಸ್ನೇಹಿತರೊಂದಿಗೆ ಕಂಪ್ಯೂಟರ್ ನೆರವಿನಲ್ಲೆ ಮುದ್ರಿತ ಪ್ರತಿಯನ್ನೊ, ಶ್ರವಣ ಪ್ರತಿಯನ್ನೊ ವಿನಿಮಯ ಮಾಡಿಕೊಳ್ಳಬಹುದು. ಲ್ಯಾಪ್‌ಟಾಪ್ ಅನ್ನು ಉಳ್ಳವನು ಪ್ರಯಾಣ ಮಾಡುವಾಗಲೂ, ಯಾವುದೇ ದೇಶದ ಯಾವುದೇ ಊರಿನಲ್ಲಿ ಹಿಂದೆ ಅರ್ಧ ಓದಿದ್ದ ಪುಸ್ತಕವನ್ನೆ ಮುಂದಕ್ಕೂ ಓದಬಹುದು. ಕಂಪ್ಯೂಟರ್ ಇರದವನು ಹತ್ತಿರವಿರುವ ಯಾವುದೇ ಸೈಬರ್‌ಕೆಫೆಗೆ ನುಗ್ಗಿ ಹಿಂದಿನ ಓದನ್ನು ಮುಂದುವರಿಸಬಹುದು; ಹೊಸ ಓದನ್ನು ಪ್ರಾರಂಭಿಸಬಹುದು. ಸುಮಾರು ಜೆರಾಕ್ಸ್ ಮಾಡುವಷ್ಟೆ ಬೆಲೆಗೆ ಈ ಕೆಫೆಗಳಲ್ಲಿ ಆಯ್ಕೆಯ ಪುಸ್ತಕಗಳ ಮುದ್ರಣಪ್ರತಿಯನ್ನು ಪಡೆಯಬಹುದು. ಕಂಪ್ಯೂಟರ್‌ನ ಬಗ್ಗೆ ಏನೂ ತಿಳಿಯದವರೂ, ಈ ಕೆಫೆಗಳಲ್ಲಿ 'ಮೆನ್ಯು' ಪಟ್ಟಿ ನೋಡಿ ಬೇಕೆನಿಸಿದ ಪುಸ್ತಕಗಳ ಸ್ಯಾಂಪಲ್‌ಗಳ ರುಚಿ ನೋಡಿದ ನಂತರವೆ ಅವುಗಳ ಅಥವಾ ಅವುಗಳಲ್ಲಿ ಬೇಕಾದ ಭಾಗಗಳ ನಕಲನ್ನು ಅಲ್ಲಿಯೆ ಕೊಳ್ಳಬಹುದು; ಮಿತ್ರರಲ್ಲೂ ಹಂಚಬಹುದು.

ಸಾಮಾನ್ಯವಾಗಿ ಓದುವುದಕ್ಕೊ, ಮುಂದಿನ ಉಪಯೋಗಕ್ಕೆ ಶೇಖರಿಸುವುದಕ್ಕೊ ಪುಸ್ತಕಗಳನ್ನು 'ಡೌನ್ ಲೋಡ್' ಮಾಡಿಕೊಳ್ಳುವುದಕ್ಕೆ ತಗಲುವ ಇಂದಿನ ವೆಚ್ಚ, ಒಂದು 'ಎಮ್-ಬಿ' (ಮೆಗಾಬೈಟ್)ಗೆ ಸುಮಾರು ಆರು ಪೈಸೆ. ಒಂದು ಸಾಮಾನ್ಯ ಪುಸ್ತಕಕ್ಕೆ ಒಂದು ಅಥವಾ ಎರಡು ಎಮ್‌ಬಿಯಷ್ಟೆ ಸಾಕಾಗಬಹುದು. ಸಚಿತ್ರ ಅಥವಾ ವರ್ಣರಂಜಿತವಾದರೆ ಮತ್ತೂ ೨-೩ಕ್ಕಿಂತ ಹೆಚ್ಚು. ಶೇಖರಿಸಿಡುವುದಕ್ಕೆ, ಪೆನ್ ಡ್ರೈವ್‌ನ ಅಥವಾ ಜೇಬಿನಲ್ಲಿಡಬಲ್ಲ ಹಾರ್ಡ್ ಡಿಸ್ಕ್ ಡ್ರೈವ್‌ನ ಬೆಲೆ ಒಂದು ಎಮ್-ಬಿಗೆ ಒಂದು ಪೈಸೆಯಷ್ಟೇ ಆಗುವುದರಿಂದ, ಮತ್ತೆ ಮತ್ತೆ ತೆಗೆದು ನೋಡಬೇಕಾದ ಪುಸ್ತಕಗಳನ್ನು ಶೇಖರಿಸಿಟ್ಟುಕೊಳ್ಳುವುದೇ ಮಿತವ್ಯಯ ಆಗಬಹುದು.

**ಈ 'ಪ್ರಾಜೆಕ್ಟ್ ಗೂಟೆನ್‌ಬರ್ಗ್' ವ್ಯವಸ್ಥೆಯ ಅನುಕೂಲಗಳು**

ಈ ಪ್ರಾಜೆಕ್ಟ್ ಗೂಟೆನ್‌ಬರ್ಗ್ ಹೆಸರಿನ ವೆಬ್‌ಸೈಟ್‌ನಲ್ಲಿ, ಶತಮಾನಗಳಷ್ಟು ಹಿಂದಿನ ಅತ್ಯಮೂಲ್ಯ ಪುಸ್ತಕಗಳೂ ಸುಲಭವಾಗಿ ದೊರೆಯುತ್ತವೆ. ಹಲವಂತೂ, ಮೂಲದ ಪ್ರಾಚೀನ ಪುಸ್ತಕಗಳ ಮುದ್ರಣಗಳದೆ ಶೈಲಿಯಲ್ಲಿ ಸಿಕ್ಕುತ್ತವೆ! ಆ ಮೂಲ ಪ್ರತಿಗಳ ಸುಂದರ ವಿನ್ಯಾಸಗಳು, ಪ್ರತಿ ಪುಟದಲ್ಲೂ ಬಿಡಿಸಿಟ್ಟಿರುತ್ತಿದ್ದ ಕಲಾತ್ಮಕ ಚಿತ್ರಾಕ್ಷರಗಳು, ಆ ಮರದಚ್ಚಿನ ಸೊಗಸಿನ ಚಿತ್ರಗಳು, ಮೂಲಪ್ರತಿಯಲ್ಲೆ ಇರಬಹುದಾದ ವರ್ಣಚಿತ್ತಾರಗಳು, ಕಡೆಗೆ, ಆ ಕೃತಿಕಾರ ಮಾಡಿದ್ದಿರಬಹುದಾದ ತಪ್ಪುನೆಪ್ಪುಗಳ ಜೊತೆಜೊತೆಗೆ ಎಲ್ಲವನ್ನೂ ನೀವು ನೋಡಬಹುದು. (ಚಿತ್ರ ೧, ಛಾಸರ್‌ನ 'ಕ್ಯಾಂಟರ್ ಬರಿ ಟೇಲ್ಸ್'ನ ಒಂದು

ಪುಟ; ಮತ್ತು ಚಿತ್ರ ೨. ಅನೇಕ ವಿದ್ಯಾಲಯಗಳಲ್ಲಿ ಈಗಲೂ ದೊರೆಯುವ ೧೭೭೫ರ ಪುಸ್ತಕದ ಮುಖಪುಟ). ಯಾವುದೇ ಭಂಡಾರದ ಇಂತಹ ಬಹುಮೌಲ್ಯದ ಪುರಾತನ ಪುಸ್ತಕವನ್ನು ನಾಲ್ಕು ಜನ ತೆಗೆದು ಓದಿದರೆ ಆ ಪುಸ್ತಕದ ಪುಟ ಮುರಿದುಹೋಗಬಹುದು. ಮತ್ತೊಂದು ಬಹು ಮುಖ್ಯ ಉದಾಹರಣೆಯಾಗಿ, ಪ್ರಪಂಚದ ಅತಿ ಪ್ರಾಚೀನ ಮುದ್ರಿತ ಪುಸ್ತಕಗಳಲ್ಲಿ ಒಂದೆಂದು ದಾಖಲೆಯಾಗಿರುವ, ಸುಮಾರು ಕ್ರಿಸ್ತಶಕ ೮೬೮ರಲ್ಲಿ ಮುದ್ರಿತವಾಗಿರಬಹುದಾದ, 'ಡೈಮಂಡ್ ಸೂತ್ರ' ಎನ್ನುವ ಚೀನಿ ಪುಸ್ತಕದ ಮುಖ ಚಿತ್ರವನ್ನು ನಿಮ್ಮ ಕಂಪ್ಯೂಟರ್‌ನಲ್ಲಿ ತಂದಿಟ್ಟುಕೊಳ್ಳಬಹುದು (ಚಿತ್ರ ೩). ಈ ಪುಸ್ತಕದ ಹೆಸರಿನ ರಹಸ್ಯ ಹುಡುಕಿದಾಗ ಹೀಗೆ ಬಯಲಾಗುತ್ತದೆ; ಇದು ಬೌದ್ಧ ಮಹಾಯಾನ ಸೂತ್ರಗಳ ಸಂಸ್ಕೃತ ಮೂಲದ, 'ವಜ್ರಚ್ಛೇದಿಕ ಪ್ರಜ್ಞಾಪಾರಮಿತ' ಸೂತ್ರದ ಚೀನಿ ಅನುವಾದ. ಇದು ಝೆನ್ ಬೌದ್ಧಮತದ ಒಂದು ಮೂಲಗ್ರಂಥ.

ಇಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ದೊರೆಯುವವು ಇಂಗ್ಲಿಷ್ ಕ್ಲಾಸಿಕ್(ಶಿಷ್ಟಮಾನ್ಯ) ಸಾಹಿತ್ಯದ ಪುಸ್ತಕಗಳು. ಅವುಗಳಲ್ಲಿಯೂ ಅಧಿಕವಾದವು ಕಾದಂಬರಿಗಳೇ ತಾನೇ! ಸ್ಮಾಲೆಟ್‌ನಿಂದ ಪ್ರಾರಂಭಿಸಿ, ಡೀಫೋ (೨೪ ಪುಸ್ತಕಗಳು), ಚಾರ್ಲ್ಸ್ ಡಿಕನ್ಸ್(೨೪), ವಾಲ್ಟರ್ ಸ್ಕಾಟ್ (೨೫), ಜಾರ್ಜ್ ಎಲಿಯಟ್ (೧೩), ಸಾಮರ್ಸೆಟ್ ಮಾಮ್ (೧೦) ಮತ್ತು ಇವರುಗಳ ನಂತರ, ೧೯೦೦-೧೯೪೦ರಲ್ಲಿ, ಸಾಧಾರಣ ಮಧ್ಯಮವರ್ಗದ ಹಾಸ್ಯದ ಬಹುಜನಪ್ರಿಯ ಲೇಖಕ ಡಬ್ಲ್ಯೂ.ಡಬ್ಲ್ಯೂ. ಜೇಕಬ್ಸ್‌ನ ೭೦ ಪುಸ್ತಕಗಳೂ ಇಲ್ಲಿ ದೊರೆಯುತ್ತವೆ. ಶೇಕ್ಸ್‌ಪಿಯರ್ (೩೬), ಮತ್ತು ಬರ್ನಾರ್ಡ್ ಶಾ (೩೪) ಅವರ ಎಲ್ಲ ಗ್ರಂಥಗಳೂ ನಿಮಗೆ ಇಲ್ಲಿ ಲಭ್ಯ. ಅಮೆರಿಕನ್ ಕಾದಂಬರಿಕಾರರು, ಹಾಥಾರ್ನ್ (೬೩), ಮಾರ್ಕ್ ಟ್ವೈನ್ (೩೫), ಅಪ್ಟನ್ ಸಿಂಕ್ಲೇರ್ (೨೪), ಜಾಕ್ ಲಂಡನ್ (೩೮) ಸಹ ಇಲ್ಲಿದ್ದಾರೆ. ಪ್ರಸಿದ್ಧ ಫ್ರೆಂಚ್ ಸಾಹಿತಿಗಳು ವಾಲ್ಟೇರ್ (೧೬), ಅಲೆಗ್ಸಾಂಡರ್ ಡೂಮಾ (೧೩), ವಿಕ್ಟರ್ ಹ್ಯೂಗೊ (೧೦) ಅನುವಾದಗಳ ಮೂಲಕ ನಿಮ್ಮ ಮನ ಸೆಳೆಯುತ್ತಾರೆ. ಸ್ಪ್ಯಾನಿಶ್‌ನ ಡಾನ್ ಕ್ವಿಕ್ಸಾಟ್, ಇಟಾಲಿಯನ್‌ನ ಕ್ಯಾಸನೋವ ನಿಮ್ಮ ಮನರಂಜಿಸುತ್ತಾರೆ. ಗ್ರೀಕ್ ಸಾಹಿತ್ಯದ ಮಹಾಕವಿ ಹೋಮರ್‌ನ ಇಲಿಯಡ್ ಮತ್ತು ಒಡೆಸ್ಸಿಗಳ ಜೊತೆಗೆ, ಇಂದಿಗೂ ಸಾಕಷ್ಟು ಆಧುನಿಕ ಮತ್ತು ಪ್ರಸ್ತುತ ಎನ್ನಬಹುದಾದ ಈಸ್ಕಿಲಸ್, ಸೊಫೊಕ್ಲಿಸ್, ಮುಂತಾದವರ ಗ್ರೀಕ್ ನಾಟಕಗಳೆಲ್ಲವೂ ಇಲ್ಲಿ ದೊರೆಯುತ್ತವೆ. ಈಚಿಗಿನ ಮೊಲಿಯೇರ್ (೧೯), ಆಸ್ಕರ್ ವೈಲ್ಡ್ (೨೫), ಬ್ಯಾರಿ (೧೯) ಮುಂತಾದವರ ನಾಟಕಗಳು ಇಲ್ಲಿವೆ; ಬಹುಪ್ರಸಿದ್ಧ, ಅಷ್ಟೇ ಕಷ್ಟಲಭ್ಯ, 'ಸಿರಾನೋ ಡ ಬರ್ಗೆರಾಕ್' ನಾಟಕವೂ ಇಲ್ಲಿದೆ.

ಸಾಹಿತ್ಯದಲ್ಲಿ ಕಾದಂಬರಿಗಳು, ಕಾದಂಬರಿಗಳಲ್ಲಿ ರಹಸ್ಯಮಯ, ರೋಮಾಂಚಕ, ಸಾಹಸಭರಿತ ಪತ್ತೆದಾರಿ ಮತ್ತು ಇತ್ತೀಚೆಗೆ ಅಮೆರಿಕಾದಲ್ಲಿ ಯುವಜನರ ಹುಚ್ಚಾಗಿರುವ ವೈಜ್ಞಾನಿಕ ಕಲ್ಪನಾಮಯ ಕಥಾನಕಗಳು ಹೆಚ್ಚು ಜನಪ್ರಿಯ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ೧೯೫೦ಕ್ಕೆ ಹಿಂದಿನ, ಬಹುತೇಕ ಎಲ್ಲ ಇಂತಹ ಇಂಗ್ಲಿಷ್ ಮತ್ತು ಇಂಗ್ಲಿಷ್‌ಗೆ ಅನುವಾದಿತ ಪುಸ್ತಕಗಳೂ ಇಲ್ಲಿ ಉಚಿತವಾಗಿ ಸಿಕ್ಕುತ್ತವೆ. ಸಂಖ್ಯೆ ಸಾವಿರವನ್ನೂ ಮೀರಬಹುದು. ಎಡ್ಗರ್ ಅಲೆನ್ ಪೊ (೧೨), ಎಡ್ಗರ್ ವಾಲೆಸ್ (೧೨), ಕಾನನ್ ಡಾಯಲ್ (೪೫), ಫ್ರಾನ್ಸಿನ ಷರ್ಲಾಕ್ ಹೋಮ್ಸ್ ಎಂದು ಪ್ರಸಿದ್ಧನಾದ ಆರ್ಸಿನ್ ಲೂಪಿನ್‌ನ ಕರ್ತೃ ಮಾರಿಸ್ ಲೆಬ್ಲಾಂಕ್ (೧೧), ಮುಂತಾದವರ ಬಹು ಪುಸ್ತಕಗಳು ಇಲ್ಲಿ ಲಭ್ಯವಿವೆ. ಷರ್ಲಾಕ್ ಹೋಮ್ಸ್ ಪುಸ್ತಕಗಳು ಜನಪ್ರಿಯತೆಯ ರ್‍ಯಾಂಕಿನಲ್ಲಿ ಶೇಕ್ಸ್‌ಪಿಯರನ ಪುಸ್ತಕಗಳಿಗಿಂತ ಬಹು ಮೇಲಿರುವುದು, ಈ ಉಚಿತ ಪುಸ್ತಕಗಳ ರಾಶಿಯ ಓದುಗರ ಆಯ್ಕೆಯಲ್ಲೂ ಸಾಬೀತಾಗಿದೆ. ಇಂತಹ ಪತ್ತೆದಾರಿ ಕಥೆಗಳತ್ತ ಮೂಗುಮುರಿಯುವವರು ಒಂದು ವಿಷಯವನ್ನು ಗಮನಿಸಬೇಕು: ವಾಲ್ಟೇರ್, ಡಿಕನ್ಸ್, ಚೆಸ್ಟರ್‌ಟನ್, ಆಲ್ಡಸ್ ಹಕ್ಸ್ಲೀ, ಎ. ಎ. ಮಿಲ್ನ್, ಲೂಯಿ ಕ್ಯಾರೆಲ್, ಬರ್ಟ್ರಂಡ್ ರಸೆಲ್, ಜೆ. ಕೃಷ್ಣಮೂರ್ತಿ, ಮುಂತಾದ ಅನೇಕ ಪ್ರಸಿದ್ಧ ವಿಚಾರವಂತ ಸಾಹಿತಿಗಳು, ದಾರ್ಶನಿಕರು, ವಿಜ್ಞಾನಿಗಳು, ಗಣಿತಶಾಸ್ತ್ರಜ್ಞರು, ಇಂತಹ ಪುಸ್ತಕಗಳನ್ನು ಬರೆಯುವ ಪ್ರಯತ್ನ ಮಾಡಿದವರು ಮತ್ತು ಅವನ್ನು ಓದುವವರೆಂದು ಅಭಿಮಾನ ತೋರುತ್ತಿದ್ದವರು. ಹೀಗೆ, ಹೊಸ ಹಳೆಯ ಪುಸ್ತಕ ಸಾಹಿತ್ಯದ ವಿವಿಧ ಪ್ರಕಾರಗಳ ಜನಪ್ರಿಯತೆಯನ್ನು ಸಹ ಈ ವ್ಯವಸ್ಥೆಯ ಸಂಘಟನೆಯ ಮಾಸಿಕ, ವಾರ್ಷಿಕ ವರದಿಗಳಿಂದ ಸುಲಭವಾಗಿ ತಾಳೆಹಾಕಬಹುದು.

**ನಮಗೇನು ಲಭ್ಯ? ನಮ್ಮದೇನು ಸಾಧ್ಯ?**

ಚೈನೀಸ್, ಜಾಪನೀಸ್ ಮತ್ತು ಅನೇಕ ಯೂರೋಪಿಯನ್ ಭಾಷೆಗಳ ಜೊತೆಗೆ ಅರಾಬಿಕ್, ಕೊರಿಯನ್‌ನಂತಹ ಭಾಷೆಗಳ ಪುಸ್ತಕಗಳೂ ಇಲ್ಲಿವೆ. ಸಂಸ್ಕೃತದ ಉಲ್ಲೇಖವನ್ನು ನೋಡಿ, ಆಸೆಪಟ್ಟು ಹುಡುಕಿದವರಿಗೆ ಸಿಕ್ಕುವ ಒಂದೇ ಒಂದು ಸಂಸ್ಕೃತ ಭಾಷೆಯ ಕೃತಿ: ಇಂಗ್ಲಿಷ್ ಅಕ್ಷರಗಳಲ್ಲಿರುವ, ನಿರಾಶೆ ತರುವ 'ವಿಷ್ಣು ಸಹಸ್ರನಾಮ'; ಓದಲಾಗದ, ಅರ್ಥಕೊಡದ ಸಾಲುಗಳು. ಹಾಗೆಂದು ಪುರಾತನ ಸಾಹಿತ್ಯವನ್ನು ಓದುವ ಆಸಕ್ತರಿಗೆ, ಪಾಶ್ಚಿಮಾತ್ಯರು ಹಿಂದೆಂದೋ ಮಾಡಿದ ಇಂಗ್ಲಿಷ್ ಅನುವಾದಗಳು ಬಹಳಷ್ಟು ದೊರೆಯುತ್ತವೆ. ಮ್ಯಾಕ್ಸ್ ಮುಲ್ಲರ್‌ನ ಉಪನ್ಯಾಸಗಳ ೧೪ ಪುಸ್ತಕಗಳು ಮೂಲರೂಪದಲ್ಲಿ ಸಿಕ್ಕುತ್ತವೆ. ಇಂಗ್ಲಿಷ್ ಅನುವಾದಕರ ಶಾಕುಂತಲಾ, ದಶಕುಮಾರ ಚರಿತ, ಮೃಚ್ಛಕಟಿಕ, ರಾಮಾಯಣ (ಕವನರೂಪ), ಮಹಾಭಾರತ, ನಳ-ದಮಯಂತಿ, ಬೇತಾಳ ಕತೆಗಳು, ಗೀತಗೋವಿಂದ, ಯಾಜ್ಞವಲ್ಕ್ಯ ಸ್ಮೃತಿ, ಶಂಕರ ಮತ್ತು ರಾಮಾನುಜರ ವೇದಾಂತ ಸೂತ್ರಗಳು, ಪತಂಜಲಿಯ ಯೋಗಸೂತ್ರ ಮುಂತಾದ ಐದು ಯೋಗ ಪುಸ್ತಕಗಳು, ಇತ್ಯಾದಿ ಇಲ್ಲಿವೆ. ಇನ್ನೂ ಒಂದು ವಿಷಯ ಅನೇಕ ಭಾರತೀಯರಿಗೆ ಹೆಮ್ಮೆ ತರಬಹುದೇನೋ! ಕಳೆದ ಆರು ವರುಷಗಳಲ್ಲಿ ಈ ಮಹಾರಾಶಿಯಿಂದ ಬಹು ಹೆಚ್ಚು ದೋಚಲ್ಪಡುತ್ತಿರುವ ಪುಸ್ತಕಗಳಲ್ಲಿ ಬಹು ಮೇಲಿನ ರ್‍ಯಾಂಕಿನದು ನಮ್ಮದೇ ವಾತ್ಸ್ಯಾಯನನ 'ಕಾಮಸೂತ್ರ'.

ಸಂಸ್ಕೃತ ಸಾಹಿತ್ಯದ ವ್ಯಾಪಕತೆ ಮತ್ತು ಹಿರಿಮೆಗಳನ್ನು ಪ್ರಪಂಚಕ್ಕೆಲ್ಲ (...ಹಾಗೆಯೇ ಭಾರತೀಯರಿಗೂ ಬೇಕಲ್ಲವೇ!) ಒದಗಿಸಿ ಕೊಡಲಿಚ್ಛಿಸುವವರಿಗೆ ಇಲ್ಲಿ ಸ್ವಲ್ಪವೇ ಶ್ರಮದ ಅತ್ಯುತ್ತಮ ಸದವಕಾಶವಿದೆ. ಅವರು ತಮ್ಮಲ್ಲಿರುವ ಮತ್ತು ಪ್ರಕಟಿಸಲು ಇಚ್ಛಿಸುವ ಉತ್ತಮ ಗುಣಮಟ್ಟದ ಕೃತಿಗಳನ್ನು, ಇಂಗ್ಲಿಷ್ ಅಥವಾ ಯಾವುದೇ ಭಾರತೀಯ ಭಾಷೆಯ ಟಿಪ್ಪಣಿಗಳೊಂದಿಗೆ ಹಲವು ಭಾಷೆಯ ಮಿಶ್ರಣವಿದ್ದರೂ ಸಹ, ನಕ್ಷೆಗಳ ಸಹಿತ ಇಲ್ಲಿ ಸೇರಿಸಿ ಜಾಗತಿಕ ಪ್ರಸಾರದಲ್ಲಿ ಭಾಗವಹಿಸಬಹುದು. ಈಚೆಗೆ ಪ್ರಕಟವಾಗಿರುವ ಡಿವಿಡಿಯೊಂದು ಇಂತಹ ಕೆಲಸಗಳಿಗೆ ಒಂದು ಒಳ್ಳೆಯ ಮಾದರಿಯಾಗಿದೆ. ಜಯ ಚಾಮರಾಜೇಂದ್ರ ಒಡೆಯರ್ ಅವರ ಸೌಜನ್ಯದಿಂದ ಎಲ್ಲ ಪುರಾಣಗಳ ಮತ್ತು ಋಗ್ವೇದದ ಬಗ್ಗೆ ಹಲವು ವಿದ್ವಾಂಸರ, ಮೂಲ ಮತ್ತು ಅರ್ಥಗಳ ಪುಸ್ತಕಗಳು ಹಿಂದೆ ಪ್ರಕಾಶಗೊಂಡಿದ್ದವು. ಅವೆಲ್ಲವೂ, ಸುಮಾರು ಒಂದು ಲಕ್ಷ ಹತ್ತು ಸಾವಿರ ಪುಟಗಳಷ್ಟೂ, ಈಗ ಒಂದೇ ಡಿವಿಡಿಯಲ್ಲಿ ಸುಲಭ ಓದಿಗೆ ಅನುಕೂಲವಾಗಿ ಅಡಕಗೊಳಿಸಲ್ಪಟ್ಟಿವೆ. ಬಹು ಕಡಿಮೆ ಬೆಲೆಗೆ ಸಿಕ್ಕುತ್ತಿವೆ. ಈಗಿರುವ ಮತ್ತು ಮುಂದೆ ಬರುವ ಸಂಸ್ಕೃತ ಕಾಲೇಜುಗಳು, ವಿಶ್ವವಿದ್ಯಾಲಯಗಳು ಈ ಮಾದರಿಯ ಆಧುನಿಕ

Therto he coude endite & make a thyng
Ther coude no man pynche at hese writyng
And euy statut coude he pleyn be rote
He rod but homely in a medely cote
Gyrt with a seynt of silk wt barrys smale
Of hese aray telle I no lengere tale
A frankeleyn was in hese cūpanye
Whit was hese berd as is þe daysie
Of cōplexiou he was saungwyn
Wel louede he þe morwe a soppe in wyn
To levyn in delit was euere hese wone
For he was epicur/ owene sone
That held opynyou þt pleyn delyt
Was uery felicite parfyt
An housholdere & þt a gret was he
Seynt Iulion he was in that cuntre
Hese bred hese ale was alwey after on
A bettere enuyned man was nowher non

Frankeleyn

ಚಿತ್ರ ೧

ಸುಲಭ ವಿಧಾನಗಳನ್ನು ಅಳವಡಿಸಿಕೊಂಡರೆ ಬೇಗ ಸಾರ್ಥಕರಾಗಬಹುದು.

ಬ್ರಿಟಿಷ್ ಆಳ್ವಿಕೆಯ ೧೭೫೦-೧೯೫೦ರ ಕಾಲದ ಚರಿತ್ರೆಯನ್ನು, ಜನತೆಯ, ಸಮಾಜದ ಮತ್ತು ರಾಜಕೀಯದ ಸ್ಥಿತಿಗತಿಗಳನ್ನು, ಅಧ್ಯಯನ ಮಾಡಲು ಇಚ್ಛಿಸುವವರಿಗೆ ಇಲ್ಲಿ ಅನೇಕ ಪುಸ್ತಕಗಳಿವೆ. ಅಧಿಕಾರಿಗಳಾಗಿ ಬಹಳ ಕಾಲ ಇಂಡಿಯಾದಲ್ಲಿ ಇರುತ್ತಿದ್ದ ಅಥವಾ ದೀರ್ಘ ಪ್ರವಾಸ ಮಾಡಲು ಬರುತ್ತಿದ್ದ ಬ್ರಿಟಿಷರು ಈ ವಿಷಯದಲ್ಲಿ ಬರೆದವುಗಳೆಲ್ಲ ಇಲ್ಲಿ ಲಭ್ಯವಿವೆ. ಇವರುಗಳಲ್ಲಿರುತ್ತಿದ್ದ ಸಾಮ್ರಾಜ್ಯವಾದಿ ಪೂರ್ವಗ್ರಹಗಳನ್ನು ಗಮನದಲ್ಲಿ ಇಟ್ಟುಕೊಂಡು ಓದಿದವರು ಬಹಳಷ್ಟು ಕಲಿಯಬಹುದು, ಮಾಹಿತಿ ಪಡೆಯಬಹುದು; ಅವರಲ್ಲಿದ್ದ ಎಷ್ಟೋ ಅಷ್ಟು ಸ್ಪಂದನ, ಸಂವೇದನೆಗಳನ್ನೂ ಗುರುತಿಸಬಹುದು. ಅವರುಗಳು ನಿಂದಿಸುತ್ತಿದ್ದ ಅನೇಕ ಅವಗುಣಗಳ ಕಟುಟೀಕೆಯನ್ನು ಈಗ ನಮ್ಮವರೇ ಅನೇಕರು ಮಾಡುತ್ತಿದ್ದಾರೆ. ಮುಂಬಯಿಯಲ್ಲಿ ಹುಟ್ಟಿ, ಲಾಹೋರ್‌ನಲ್ಲಿ ಪತ್ರಿಕಾಕರ್ತನಾಗಿದ್ದು, ೨೦ ವರ್ಷದಷ್ಟು ಕಾಲ ಇಂಡಿಯಾದಲ್ಲಿ ನಿಕಟ ಜನಸಂಪರ್ಕದಲ್ಲಿದ್ದ ರುಡ್ಯಾರ್ಡ್ ಕಿಪ್ಲಿಂಗ್, ವಿವಿಧ ವಿಷಯಗಳ ಮೇಲೆ ಬರೆದ ೪೦ಕ್ಕೂ ಹೆಚ್ಚು ಪುಸ್ತಕಗಳು ಇಲ್ಲಿ ಲಭ್ಯ. ಪ್ರಪಂಚದ ಗಮನವನ್ನೂ, ಜೊತೆಗೆ ಇಲ್ಲಿಯವರದೇ ಮನಸ್ಸನ್ನೂ, ಈ ದೇಶಕ್ಕಿಂತ ಹೆಚ್ಚಾಗಿ ಇಲ್ಲಿಯ ಸಾಮಾನ್ಯ ಜನತೆಯತ್ತ ಸೆಳೆವ ಸಾಹಸ ಮಾಡಿದವನು ಇವನೇ. ಇಂಡಿಯಾದ ಬಗ್ಗೆ ಬರೆದ ಸಾಹಿತ್ಯದ ಪ್ರಭಾವದಿಂದ ನೊಬೆಲ್ ವಿಜೇತನಾದವನೆಂಬುದನ್ನೂ ಗಮನಿಸಬೇಕು. ಅಮೆರಿಕನ್ ಪ್ರವಾಸಿ ಕ್ಯಾಥರೀನ್ ಮೇಯೊ ಬರೆದ 'ಮದರ್ ಇಂಡಿಯ' ಪುಸ್ತಕ ೧೯೩೭ರಲ್ಲಿ ಪ್ರಕಟವಾದಾಗ ಎಲ್ಲ ಭಾರತೀಯರನ್ನು ರೊಚ್ಚಿಗೆಬ್ಬಿಸಿತ್ತು ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಮರುವಿಮರ್ಶೆಗೆ ಬೇಕಿದ್ದರೆ ಇವೆಲ್ಲ ಪುಸ್ತಕಗಳನ್ನು ಇಲ್ಲಿ ಪಡೆಯಬಹುದು.

**ತತ್ವದರ್ಶನ, ವಿಜ್ಞಾನ, ಕಲೆ, ಇತಿಹಾಸ ಇತ್ಯಾದಿಗಳ ಪುಸ್ತಕ ಮತ್ತು ಮಾಹಿತಿಗಳು**

ಅನೇಕಾನೇಕ ವಿಶ್ವವಿದ್ಯಾಲಯಗಳ ಪುಸ್ತಕಾಲಯಗಳಷ್ಟೆ ಅಲ್ಲದೇ, ಅನೇಕ ವಿಜ್ಞಾನ, ಇತಿಹಾಸ, ಕೈಗಾರಿಕೆ, ಕಲೆ, ಚಲನಚಿತ್ರ ಇತ್ಯಾದಿಗಳ ಮ್ಯೂಸಿಯಮ್‌ಗಳೂ ಸಹ ಕಂಪ್ಯೂಟರೀಕರಣದಲ್ಲಿ ಸಕ್ರಿಯವಾಗಿ ಭಾಗಿಯಾಗುತ್ತಿವೆ. ಇದರಿಂದಾಗಿ, ಈ ಪುಸ್ತಕಗಳ ಮಹಾನದಿಯಲ್ಲಿ ಸಾಹಿತ್ಯ ಧಾರೆಯ ಜೊತೆ ಜೊತೆಗೆ, ತತ್ವದರ್ಶನ(ಫಿಲಾಸಫಿ), ವಿಜ್ಞಾನ ಮತ್ತು ಗಣಿತ, ಚಿತ್ರಕಲೆ ಮತ್ತು ಸಂಗೀತ, ಇತಿಹಾಸ, ಪರ್ಯಟನ ಮುಂತಾದವುಗಳ ಧಾರೆಗಳೂ ವಿಪುಲವಾಗಿವೆ. ಗ್ರೀಸ್‌ನ ಸಾಕ್ರಟೀಸ್, ಅರಿಸ್ಟಾಟಲ್ ಮುಂತಾದವರ ಮೂಲಕೃತಿಗಳ ಅನುವಾದಗಳೂ ಇಲ್ಲಿ ಲಭ್ಯ. ಪುರಾತನ ಈಜಿಪ್ಟ್, ಇಂಡಿಯ, ಚೈನಾ, ಬ್ಯಾಬಿಲಾನ್, ಗ್ರೀಸ್, ರೋಮನ್, ಅಮೆರಿಕನ್, ಮಾಯಾ, ಪ್ಯಾಸಿಫಿಕ್ ದ್ವೀಪ, ಇತ್ಯಾದಿ ಪ್ರದೇಶಗಳಲ್ಲಿದ್ದ ಪ್ರಾಚೀನ ನಾಗರಿಕತೆಗಳ ಅಧ್ಯಯನಕ್ಕೆ ಒದಗುವ ಸಚಿತ್ರ ಪುಸ್ತಕಗಳು ಇಲ್ಲಿ ಹೇರಳವಾಗಿವೆ. ಅನೇಕ ಹಳೆಯ ಪ್ರಪಂಚ ಪರ್ಯಟಕರ ಮೂಲ ವರದಿಗಳು ಇವೆ. ಮೊದಲು ಮೊದಲ ಫೋಟೋಗ್ರಾಹಕರ ಪ್ರವಾಸ ಚಿತ್ರಗಳ ಪುಸ್ತಕಗಳಿವೆ. ಲಿಯೋನಾರ್ಡೊ ಡ ವಿಂಚಿ, ಮೈಕಲ್ ಏಂಜಲೊ, ರಾಫೆಲ್, ರೆಂಬ್ರಾಂಟ್, ಮುಂತಾದ ಅನೇಕ ವರ್ಣ ಕಲಾಕಾರರ ಬಗ್ಗೆ ತಿಳಿಸುವ ಸಚಿತ್ರ ಪುಸ್ತಕಗಳೂ ಇಲ್ಲಿವೆ.

ವಿಜ್ಞಾನದಲ್ಲಿ ಆರ್ಕಿಮಿಡಿಸ್‌ನಿಂದ ಪ್ರಾರಂಭಿಸಿ, ಗೆಲಿಲಿಯೊ, ಕೆಪ್ಲರ್‌ಗಳನ್ನು ಕೂಡಿಕೊಂಡು, ಬೇಕನ್, ಬಾಯಲ್, ನ್ಯೂಟನ್, ಡಾರ್ವಿನ್, ಹಾರ್ವೆ ಮುಂತಾದವರ ಶೋಧನೆಯ ವಿಷಯದ ಅನೇಕ ಕೃತಿಗಳನ್ನು ಇಲ್ಲಿ ಪಡೆಯಬಹುದು. ಐನ್‌ಸ್ಟೈನ್‌ನ ಸಿದ್ಧಾಂತಗಳು, ಡಿ-ಎನ್-ಎಯ ಅನ್ವೇಷಣೆ, ಕಡೆಗೆ ಮನುಷ್ಯನ ಜೀನೋಮ್‌ನ ಮೂಲ ದಾಖಲೆಗಳನ್ನು ಸಹ ಇಲ್ಲಿ ಹೆಕ್ಕಿಕೊಳ್ಳಬಹುದು. ಯೂಕ್ಲಿಡ್‌ನಿಂದ ಪ್ರಾರಂಭಿಸಿ, ಗಣಿತದ ಪೂರ್ಣ ಇತಿಹಾಸವನ್ನು ಇಲ್ಲಿ ಪಡೆಯಬಹುದು ಹಾಗೂ ಶಾಲಾಕಾಲೇಜುಗಳಿಗೆ ಉಪಯೋಗ ಆಗಬಲ್ಲ ಅನೇಕ ಪಠ್ಯಪುಸ್ತಕಗಳೂ ಲಭ್ಯ. ಜೊತೆಗೆ, ಅನೇಕರಿಗೆ ಆಶ್ಚರ್ಯ ಎನಿಸುವ ಪುಸ್ತಕ, ಕಾರ್ಲ್ ಮಾರ್ಕ್ಸ್‌ನ ಗಣಿತದಲ್ಲಿ ಕೆಲವು ನೋಟ್ಸ್', ಸಹ ಇಲ್ಲಿ ಲಭ್ಯವಿದೆ. ಮಕ್ಕಳ ಸಾಹಿತ್ಯದ ಪ್ರಸಿದ್ಧ ಲೇಖಕರಾಗಿದ್ದ ಲೂಯಿ ಕೆರೋಲ್, ಏ. ಏ. ಮಿಲ್ನ್ ಆಗಿನ ಹೊಸ ಗಣಿತದ ಶೋಧನೆಯಲ್ಲಿದ್ದ 'ಸಿಂಬಾಲಿಕ್ ಲಾಜಿಕ್' ಮತ್ತು 'ಸೆಟ್ ಥಿಯರಿ'ಗಳ ಉತ್ತಮ ಕೃತಿಗಳನ್ನೂ ರಚಿಸಿದ್ದರೆಂಬುದು ಇಲ್ಲಿ ಗೊತ್ತಾಗುತ್ತದೆ. ಅವರವರ ಕಾಲದ ಮಹಾನಾಸ್ತಿಕರೆನಿಸಿಕೊಂಡ ವಾಲ್ಟೇರ್ (೧೬), ಇಂಗರ್ಸಾಲ್ (೪), ಅವರಷ್ಟೇ ಅಲ್ಲದೇ, ೧೭, ೧೮, ೧೯ನೆಯ ಶತಮಾನಗಳಲ್ಲಿ ಬೈಬಲ್ ಮತ್ತು ಮೂಢನಂಬಿಕೆಗಳನ್ನು ಕಟುವಾಗಿ ಟೀಕಿಸಿದ ಅನೇಕ 'ಫ್ರೀ ಥಿಂಕರ್ಸ್' ಲೇಖಕರ ಪುಸ್ತಕಗಳೂ ಇಲ್ಲಿ ಸಿಕ್ಕುತ್ತವೆ.

**ಮುಂದೇನು ?**

ಹಿಂದಿನಿಂದ ಮನೆಮನೆಗಳಲ್ಲಿ ಟೀವಿ ಇರುವಂತೆ, ಈಗೀಗ ಬಹಳ ಜನಗಳ ಕೈಯಲ್ಲಿ ಮೊಬೈಲ್ ಫೋನ್ ಇರುವಂತೆ, ಕೆಲವೇ ವರ್ಷಗಳಲ್ಲಿ ಬಹಳ ಓದುಗರ ಕೈಯಲ್ಲಿ ಒಂದು ಅಂತಹುದೇ ಪುಸ್ತಕ ಇರುತ್ತದೆ; ಎರಡೇ ಹಾಳೆಯದು; ಫೋನಿನಷ್ಟೆ ಬೆಲೆಯದು! ಬಿಚ್ಚಿಟ್ಟು, ಬೇಕಾದ ಪುಸ್ತಕದ ಬೇಕಾದ ಪುಟವನ್ನು ತಂದುಕೊಂಡು ಓದಲಾರಂಭಿಸಬಹುದು. ಅಮೇಝಾನ್‌ನಂತಹ ಅನೇಕ ದೊಡ್ಡ ದೊಡ್ಡ ಪ್ರಕಾಶಕರು ಸಹಿತ, ಇಂತಹ ಸವಲತ್ತುಳ್ಳ ಮುಂದಿನ ಓದುಗರಿಗೆಲ್ಲಸ್ವಲ್ಪ ಬೆಲೆಗೂ ಅಲ್ಪ ಶುಲ್ಕಕ್ಕೊ ತಮ್ಮೆಲ್ಲ ಹೊಸ ಪುಸ್ತಕಗಳನ್ನು ಒದಗಿಸಿಕೊಡುವ ಪ್ರಯತ್ನ ಪ್ರಾರಂಭಿಸಿದ್ದಾರೆ. ಈಗಾಗಲೇ ಅನೇಕ ಲೇಖಕರು ಹಾಗೂ ಪ್ರಸಾರಕ್ಕೆ ಹಾತೊರೆವ ಬಹುಶಃ ಎಲ್ಲಮತೀಯ ಪ್ರಚಾರಕರು, ತಮ್ಮೆಲ್ಲ ಲೇಖನ, ಪುಸ್ತಕಗಳನ್ನು 'ಬ್ಲಾಗ್'ಗಳಲ್ಲಿ ಹಾಕಿಯೊ, ಇಂಟರ್ನೆಟ್‌ನಲ್ಲೊ, ಉಚಿತವಾಗಿ ಓದಲಿಕ್ಕೆ ದಾಖಲಿಸಿಬಿಡುತ್ತಿದ್ದಾರೆ. ಹತ್ತಾರು ವರ್ಷಗಳಿಂದ, ಅನೇಕ ವಿಜ್ಞಾನ ಮಾಸಿಕಗಳು, ಬಹಳಷ್ಟು ದಿನಪತ್ರಿಕೆಗಳು ಹೀಗೆ ಮಾಡುತ್ತಿರುವುದರಿಂದ, ಈ ಏರ್ಪಾಟಿನಲ್ಲಿ ಆರ್ಥಿಕ ಮುಗ್ಗಟ್ಟು ಇರಲಿಕ್ಕಿಲ್ಲ. ವರ್ಣ ಚಿತ್ರಗಳ ಜೊತೆಜೊತೆಗೆ ಆಡಿಯೊ ವಿಡಿಯೊಗಳನ್ನೂ ಒಳಗೊಂಡಿರಬಲ್ಲ, ಉಪಾಧ್ಯಾಯರು ಮಾತ್ರ ಮಾರ್ಪಡಿಸಬಲ್ಲ ನಿಯಮವುಳ್ಳ, ವಿದ್ಯಾರ್ಥಿಗಳ ಉತ್ತರಗಳ ಮೌಲ್ಯಮಾಪನ ನಿರ್ವಹಿಸಬಲ್ಲ, ಈ ಮಾದರಿಯ ಪುಸ್ತಕಗಳೇ ಮುಂದಿನ ಪಠ್ಯಪುಸ್ತಕಗಳು ಎಂದು ಈಗಲೇ ಹೇಳಿಬಿಡಬಹುದು. ಇವುಗಳೆಲ್ಲ ಈಗಾಗಲೆ ಕೆಲವೆಡೆಗಳಲ್ಲಿ ನಡೆಯುತ್ತಿರುವವು.

ಭಾರತದ ಇಂದಿನ ಲೇಖಕರು, ಪ್ರಕಾಶಕರು ಮತ್ತು ಓದುಗರು, ಎಷ್ಟು ಶೀಘ್ರವಾಗಿ ತಮ್ಮ ಭವಿಷ್ಯದ ಯೋಜನೆಗಳನ್ನು ಈ ಪರಿಸ್ಥಿತಿಗೆ ಅಳವಡಿಸುವರೊ ಅಷ್ಟೇ ಸುಲಭದಲ್ಲಿ ಸಫಲರಾಗುವರು.

**ಈ ಕ್ರಾಂತಿಯದೆ ಕಥೆ**

೧೯೭೧ರಲ್ಲಿ ಇಲಿನಾಯ್ ವಿಶ್ವವಿದ್ಯಾಲಯದ ಒಬ್ಬ ಬಡ ವಿದ್ಯಾರ್ಥಿ ಮೈಕಲ್ ಹಾರ್ಟ್, ರಾತ್ರಿ ೬ ಮೈಲಿ ನಡೆದು ಮನೆಗೆ ಹೋಗಿ ಮರುದಿನ ಬೆಳಿಗ್ಗೆ ಮತ್ತೆ ನಡೆದು ಬರುವುದಕ್ಕಿಂತ, ವಿದ್ಯಾಲಯದ ಕಂಪ್ಯೂಟರ್ ಕೇಂದ್ರದಲ್ಲಿ ಏನೋ ಕೆಲಸ ಮಾಡುವವನಂತಿದ್ದು ಮಲಗಿ ಏಳುವುದೇ ಅನುಕೂಲವೆಂದುಕೊಂಡ. ಅಲ್ಲಿದ್ದ ಪತ್ರಿಕೆಯೊಂದರಿಂದ 'ಅಮೆರಿಕನ್ ಸ್ವಾತಂತ್ರ್ಯ ಘೋಷಣೆ' ಭಾಗವನ್ನು ಆಯ್ದು ಕೀಬೋರ್ಡ್‌ನಲ್ಲಿ ತುಂಬತೊಡಗಿದ. ನೋಡಿ ಮೆಚ್ಚಿದವರು ಅವನ್ನೆಲ್ಲ ದಾಖಲೆ ಮಾಡುವಷ್ಟು ಕಂಪ್ಯೂಟರ್ ಕಾಲದ ಶುಲ್ಕವನ್ನು ತಮ್ಮಲ್ಲಿ ಹೆಚ್ಚಾಗಿದ್ದ ಕಾಲಾವಧಿಗೆ ಹೊಂದಿಸಿಕೊಳ್ಳಲು ಮುಂದಾದರು. ಅಲ್ಲಿ ಪ್ರಾರಂಭವಾಯಿತು, ಕಂಪ್ಯೂಟರ್ ಮತ್ತು ಇಂಟರ್ನೆಟ್‌ಗಳನ್ನು ಬಳಸಿ ಜ್ಞಾನದಾನ ಮಾಡಬಹುದಾದ ಪುಸ್ತಕ ಮತ್ತು ಮಾಹಿತಿಗಳ ಕ್ರಾಂತಿಯುಗ. ಮುಂದೆ ಅವನು ಯು.ಎಸ್.ನ ಸಂವಿಧಾನದ ಪೂರ್ಣ ಪ್ರತಿ ಮಾಡಿ, ಯಾರು ಬೇಕಾದರೂ ಕಂಪ್ಯೂಟರ್ ಪ್ರತಿ ಮಾಡಿಕೊಳ್ಳಬಹುದೆಂದು ಘೋಷಿಸಿ, ಬೈಬಲ್ ಮತ್ತು ಶೇಕ್ಸ್‌ಪಿಯರ್‌ನ ನಾಟಕಗಳನ್ನು ಕೈಗೆತ್ತಿಕೊಳ್ಳುವ ಹೊತ್ತಿಗೆ, ಅನೇಕ ಸ್ವಯಂ ಸೇವಕರು ಸಹಾಯ ಮಾಡಲು ಮುಂದೆ ಬಂದರು. ಆಗ ಪ್ರತಿ ತಿಂಗಳಿಗೆ ಎಂಟು ಪುಸ್ತಕ ತಯಾರಾಗುತ್ತಿದ್ದರೆ,


THE

PLAYS

OF

WILLIAM SHAKESPEARE.

In TEN VOLUMES.

WITH THE

CORRECTIONS and ILLUSTRATIONS

OF

Various COMMENTATORS;

To which are added

NOTES by SAMUEL JOHNSON

AND

GEORGE STEEVENS.

With an APPENDIX.

LONDON:

Printed for C. BATHURST, J. BEECROFT, W. STRAHAN, J. and F. RIVINGTON, J. HINTON, L. DAVIS, HAWES, CLARKE and COLLINS, R. HORSFIELD, W. JOHNSTON, W. OWEN, T. CASLON, E. JOHNSON, S. CROWDER, B. WHITE, T. LONGMAN, B. LAW, E. and C. DILLY, C. CORBETT, W. GRIFFIN, T. CADELL, W. WOODFALL, G. KEITH, T. LOWNDES, T. DAVIES, J. ROBSON, T. BECKET, F. NEWBERY, G. ROBINSON, T. PAYNE, J. WILLIAMS, M. HINGESTON, and J. RIDLEY.

MDCCLXXIII.

ಚಿತ್ರ ೨

೧೯೯೩ರ ಹೊತ್ತಿಗೆ ಈ ಸಂಖ್ಯೆ ೩೨ಕ್ಕೆ ಏರಿತು. ಆಗಸ್ಟ್ ೧೯೯೭ರಲ್ಲಿ ಒಟ್ಟು ೧೦೦೦ ಪುಸ್ತಕಗಳು ಹೊಸದಾಗಿ ಬಂದಿದ್ದ ಡಿಸ್ಕ್‌ಗಳಲ್ಲಿ, ಡಿಸ್ಕ್ ಬೆಲೆಯಷ್ಟಕ್ಕೆ ದೊರೆಯ ತೊಡಗಿದವು. ೨೦೦೩ರ ಕೊನೆಯಲ್ಲಿ, ೧೧,೦೦೦ ಪುಸ್ತಕಗಳನ್ನು ಕಂಪ್ಯೂಟರ್ ಇದ್ದವರೆಲ್ಲ ಕಾಪಿ ಮಾಡಿಕೊಳ್ಳಬಹುದಾಯಿತು. ಈ ವರ್ಷ ೨೦೧೦, ಈ - ಪ್ರಾಜೆಕ್ಟ್ ಗ್ಯೂಟೆನ್‌ಬರ್ಗ್‌ನ ೩೦ನೆಯ ವರ್ಷ. ಜುಲೈ ೪ರಿಂದ ಆಗಸ್ಟ್ ೪ರವರೆಗೆ ಈ ಸಂಸ್ಥೆ 'ಈ-ಬುಕ್' ಪ್ರಪಂಚದ ಮಹಾಸಂತೆ, 'ವರ್ಲ್ಡ್ ಈ-ಬುಕ್ ಫೇರ್'ಅನ್ನು ನಡೆಸಿತು. ಬೃಹದಾಕಾರವಾಗಿ ಬೆಳೆದಿರುವ ಈ ವ್ಯವಸ್ಥೆಯ ತಂಡ, ಯಾರು ಬೇಕಾದರೂ ತಮ್ಮ ಕಂಪ್ಯೂಟರ್‌ನಲ್ಲಿ ತುಂಬಿಟ್ಟುಕೊಳ್ಳಲು ಉಚಿತವಾಗಿ ಕೊಟ್ಟ ಮಾಲುಗಳು ಇವಿಷ್ಟು:

೧. ಪ್ರಾಜೆಕ್ಟ್ ಗ್ಯೂಟೆನ್‌ಬರ್ಗ್‌ನಿಂದ ೧,೧೨,೦೦೦ ಪುಸ್ತಕಗಳು.

೨. ಇಂತಹುದೇ ಯೋಜನೆ 'ಇಂಟರ್‌ನೆಟ್ ಆರ್ಕೈವ್ಸ್'ನಿಂದ ಪುಸ್ತಕಗಳು, ಆಡಿಯೊ-ವಿಷ್ಯುವಲ್ ಶೈಕ್ಷಣಿಕ ಉಪನ್ಯಾಸಗಳು, ನಾನಾ ದೇಶಗಳ ಹಳೆಯ ಫಿಲ್ಮೀ ರಿಕಾರ್ಡ್‌ಗಳು, ವಿಡಿಯೋಗಳು, ಡಾಕ್ಯುಮೆಂಟರಿಗಳು, ಇತ್ಯಾದಿ ೨೩,೨೪,೮೪೨ ಐಟಮ್‌ಗಳು.

೩. 'ವರ್ಲ್ಡ್ ಪಬ್ಲಿಕ್ ಲೈಬ್ರರಿ'ಇಂದ ೭,೫೦,೦೦೦ ಹೊಸ, ಹಳೆಯ ಪುಸ್ತಕಗಳು ಇತ್ಯಾದಿ, ಇತ್ಯಾದಿ.

ಇವೆಲ್ಲವನ್ನೂ ನೀವೆಲ್ಲ ಈಗಲೂ ಸುಲಭದಲ್ಲಿ ಪಡೆಯಬಲ್ಲಿರಿ.

ತನ್ನ ಬಹಳಷ್ಟು ಚಟುವಟಿಕೆಗಳನ್ನು ತನ್ನವೇ ಸಹಜೀವಿಗಳೊಡನೆ ಹಂಚಿಕೊಳ್ಳುವ ವರ್ತನೆ ಮನುಷ್ಯಜೀವಿಯ ಅದಮ್ಯ ಪ್ರವರ್ತನೆಗಳಲ್ಲಿ ಪ್ರಮುಖವಾದುದು. ಈಗಿನ ಸಂಪರ್ಕ ಮಾಧ್ಯಮದ ಅಭಿವೃದ್ಧಿ ಮತ್ತು ಅದರ ನವೀಕರಣ ಹಾಗೂ, ಹಿಂದಿನ ಶಬ್ದ, ನಾದ, ಗಾನಕಲೆ, ಚಿತ್ರಣ, ಚಿತ್ರಕಲೆ, ಮಾತು, ಭಾಷೆ, ಬರಹ, ಮುದ್ರಣ, ಛಾಯಾಗ್ರಹಣ, ಟೆಲಿಫೋನ್, ರೇಡಿಯೊ, ಟೀವಿ, ಕಂಪ್ಯೂಟರ್, ಇಂಟರ್‌ನೆಟ್ ಇವುಗಳ ಮೂಲಕ ಈಗ ತಲುಪಿರುವ ಪುಸ್ತಕ ಮುಂತಾದವುಗಳ ಕ್ರಾಂತಿಯೂ ಸಹ, ಇದೇ ವರ್ತನೆಯ ಎರಡು ಮುಖ್ಯ ಅಂಶಗಳು :

೧. ಪುಸ್ತಕಗಳನ್ನು ಬರೆಯುವ, ಓದುವ, ಓದಿ ಹೇಳುವ, ಕೇಳುವ, ಚರ್ಚಿಸುವ ಹವ್ಯಾಸ ಬಹಳ ಜನರಲ್ಲಿರುವ ಸಾಮಾನ್ಯ ಗುಣ; ಅತಿಯಾಗಿ ಆರ್ಥಿಕ ತೊಡಕಿರದ ಅಮೆರಿಕನ್ ಮಧ್ಯಮವರ್ಗದವರಲ್ಲಿ ಪುಸ್ತಕಗಳನ್ನು ಕೊಳ್ಳುವ, ಓದುವ, ಹಂಚಿಕೊಳ್ಳುವ, ಗ್ರಂಥಾಲಯಗಳಿಗೆ ದಾನ ಮಾಡುವ ಅಭ್ಯಾಸ ಹೆಚ್ಚಾಗಿಯೆ ಇದೆ. ಅಲ್ಲಿಯ ಎಲ್ಲ ಸಾರ್ವಜನಿಕ ಗ್ರಂಥಾಲಯಗಳಲ್ಲೂ, ಒಮ್ಮೆ ಓದಿ ಮುಗಿಸಿದ ಪುಸ್ತಕಗಳನ್ನು ಡಾಲರ್‌ಗೆ ಒಂದರಂತೊ, ಒಂದು ದೊಡ್ಡ ಚೀಲದಷ್ಟೊ, ಹಂಚಿಬಿಡುವ 'ಪುಸ್ತಕಪ್ರಿಯರ ಸಂಘ'ಗಳು ಬಲು ಚುರುಕಾಗಿ ಕೆಲಸ ಮಾಡುತ್ತವೆ; ಓದಲು ಆಗದವರಿಗೆ ಅವರದೇ ಗುಂಪುಗಳಲ್ಲೊ, ರೇಡಿಯೊದಲ್ಲೊ ಓದಿ ಹೇಳುವ ಸ್ವಯಂಸೇವಕ ತಂಡಗಳಿವೆ. ಇಂತಹ ಸಾವಿರಾರು ಜನರು, ಗೂಟೆನ್‌ಬರ್ಗ್ ಸಂಘಟನೆಯ ಬೆನ್ನೆಲುಬು ಆದರು. ಅಂತಹವರ ಮಾದರಿಯಿಂದ ಎಚ್ಚೆತ್ತ ಗ್ರಂಥಾಲಯಗಳ ಕೆಲಸಗಾರರು, ಸ್ವಯಂಪ್ರೇರಿತರಾಗಿ ಸ್ಕ್ಯಾನಿಂಗ್, ವೆಬ್ ಕ್ಯಾಮ್ ಇವುಗಳ ಮೂಲಕ ತಮ್ಮ ಎಲ್ಲ ಜನಪ್ರಿಯ, ಕಾಪಿರೈಟ್ ತೊಡಕಿರದ, ಬಹೂಪಯೋಗಿ ಪುಸ್ತಕಗಳನ್ನು ಎಲ್ಲ ಓದುಗರು ಇಂಟರ್‌ನೆಟ್‌ನಿಂದ ಉಚಿತವಾಗಿ ಪಡೆಯುವಂತೆ, ತಮ್ಮ ತಮ್ಮ ಕಂಪ್ಯೂಟರ್‌ಗಳಲ್ಲಿ ದಾಖಲಿಸತೊಡಗಿದರು.

೨. ಇದಕ್ಕೂ ಮುಖ್ಯವಾದದ್ದು, ಎಲ್ಲ ಕಂಪ್ಯೂಟರ್ ಅನುಕೂಲ ಬಳಕೆಗೂ ಬೇಕಾಗುವ ಬಹಳಷ್ಟು ಉತ್ತಮ ಸಾಫ್ಟ್‌ವೇರ್‌ಗಳನ್ನು ತಮ್ಮದೇ ಸೃಜನಾತ್ಮಕ ಸಂತೋಷ ಮತ್ತು ಸ್ಪರ್ಧಾತ್ಮಕ ಸಾಹಸಪ್ರಿಯತೆಗಳಿಂದಾಗಿ, ರಚಿಸಿ ಹಂಚಿಬಿಡುವ ಸಾವಿರಾರು ಎಂಜಿನಿಯರುಗಳ ನಿಸ್ವಾರ್ಥ ವರ್ತನೆ; ವಿಜ್ಞಾನಿಗಳಲ್ಲಿ ಅನೇಕರಿಗೆ ಇರುವಂತಹದು. ಕಂಪ್ಯೂಟರ್ ಉಪಯೋಗ ಸರ್ವರಿಗೂ ಆಗಲಿ ಎಂದು ಇವರು ತಮ್ಮ ಸ್ವಂತ ಲಾಭಗಳನ್ನು ಬದಿಗಿಟ್ಟು, ತಮ್ಮ ಬಹುಶ್ರಮದಿಂದ ಸಾಧ್ಯವಾದ ಬಹೂಪಯೋಗಿ ಲಕ್ಷಾಂತರ ಸಾಫ್ಟ್‌ವೇರ್‌ಗಳನ್ನು, ಕಳೆದ ೧೦-೨೦ ವರ್ಷಗಳಿಂದ ಇಂಟರ್‌ನೆಟ್‌ನಲ್ಲಿ ಉಚಿತವಾಗಿ ಹಂಚಿಬಿಡುತ್ತಿದ್ದಾರೆ. ಇವರು ಕಾಪಿರೈಟ್ ಅಥವಾ ಮನಾಪಲಿ (ಸ್ವಾಮ್ಯಹಕ್ಕು) ಇವುಗಳಲ್ಲಿ ಒಲವು ತೋರಿದ್ದರೆ, ಕಂಪ್ಯೂಟರ್ ಮತ್ತು ಇಂಟರ್‌ನೆಟ್ ಬೃಹದ್ ವ್ಯವಸ್ಥೆಗಳೇ ಈಗಿನ ಜಾಗತಿಕ ಜನಪ್ರಿಯತೆಯಲ್ಲಿ ಕಾಲುಭಾಗದಷ್ಟನ್ನು ಸಹ ಸಾಧಿಸಲಾಗುತ್ತಿರಲಿಲ್ಲ.

ಹೀಗೆ, ಪುಸ್ತಕಕ್ರಾಂತಿಗೆ ಸ್ಫೂರ್ತಿ ಕೊಟ್ಟು, ಅದರ ಸಾಫಲ್ಯದಿಂದ ಸ್ಫೂರ್ತಿ ಪಡೆದ, ಅದಕ್ಕೂ ಬಹು ಹೆಚ್ಚಿನ 'ಸರ್ವ ಮಾಹಿತಿ ಕ್ರಾಂತಿ'ಯೂ ಸಹ ಜಾಗತಿಕ ಸಮಾಜವನ್ನು ಹಳೆಯ 'ಆದೇಶ ಪ್ರೇರಿತ ಸಮಾಜ'ದಿಂದ ಹೊಸ 'ಜ್ಞಾನ ಪ್ರೇರಿತ ಸಮಾಜ'ದತ್ತ ಕೊಂಡೊಯ್ಯುತ್ತಿದೆ.

ಎಷ್ಟೆಲ್ಲ ದೇಶಗಳ ಬಹಳಷ್ಟು ವ್ಯಕ್ತಿಗಳ ಸಹಕಾರದ ಮತ್ತು ಶ್ರಮದಾನದ ಈ ಎಲ್ಲ ಯೋಜನೆಗಳ ಹಿಂದೆ ಇರಬಹುದಾದ ಆಕಾಂಕ್ಷೆ, ಉದ್ದೇಶ, ಸಂಯೋಜನೆ, ಮತ್ತು ನೀತಿಗಳನ್ನು, 'ಜೀವೋಪನಿಷತ್' ಕವನ ಸಂಗ್ರಹದಲ್ಲಿರುವ 'ಇದು ಕಲಿಯುಗ' ಕವನದ ಈ ಕೆಲವು ಸಾಲುಗಳಲ್ಲಿ ಕಾಣಬಹುದು:

*ಎಲ್ಲವೂ ಗೊತ್ತೆಂಬ,/ ಗೊತ್ತಿದ್ದೆಲ್ಲ ಸ್ವತ್ತೆಂಬ/ ಭ್ರಮೆಯು ಬೇಡ;*
*ಇದು ಕಲಿಯುಗ./ ಕಲಿವವರೆ ಫಲಿಸುವರು ಇಲ್ಲಿ,/ ಇದು ಫಲಯುಗ!*

* * *

*ಕಲಿವ ಕಲೆ ಸಾಕೇನು? ಕಲೆವ ಕಲೆ ಬೇಕಲ್ಲ!*
*ಕಲೆತು ಕಲಿ, ಕಲಿಸು ಎಲ್ಲರ ಕಲೆಸಿ,*
*ಆತ್ಮಜ್ಞಾನದ ವಿದ್ಯೆ ಎಂಬುದಿಲ್ಲ;*

* * *

*ಸರ್ವರೂ ಗುರುಜನರೆ!/ ಸಖ್ಯವ ಮಾಡು ಸರ್ವರಲಿ.*
*ಬದಕೊಬ್ಬನದೆ ಬದುಕೇ?*
*ಕಲೆತು ಕಲಿಯುತ್ತ ಬಲಿತು/ ಫಲಿಸಿರುವೀ ಯುಗದಲ್ಲೂ?*
*ನಿನ್ನೆಲ್ಲ ಸುಖ ಸಂತೋಷ ಸಾಧ್ಯ,/ - ಸರ್ವಜನ ಸೌಖ್ಯದಲಿ ಮಾತ್ರ!*


**ಡಾ|| ಎಮ್. ಎಸ್. ಕೇಶವ ರಾವ್**
ನಂ. ೩೮೮, ವೆಂಕಟೇಶ ದಾಸ್ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦



**ಹೆಂ**ಡತಿಯ ಮಹತ್ವ ಅರಿವಾಗೋದು ಅವಳು ಇಲ್ಲದಿರುವಾಗ. ಮನೆಯಲ್ಲಿದ್ದರೆ ಸದಾ ಅವಳ ಜೊತೆ ಚಕ್ಕಂದ ಹೊಡೀತಾರೆ ಅಂತ ಏನೂ ಇಲ್ಲ. ಹೆಂಡತಿ ಪಾಡಿಗೆ ಹೆಂಡತಿ ಇರ್ತಾಳೆ. ಗಂಡನ ಪಾಡಿಗೆ ಗಂಡ ಇರ್ತಾನೆ. ಎಷ್ಟೋ ಸಂದರ್ಭಗಳಲ್ಲಿ ಮನೆಯಲ್ಲಿ ಇದ್ದರೂ ಹಲವಾರು ಗಂಟೆಗಳು ಮುಖದರ್ಶನವೇ ಇರಲ್ಲ. ಹೆಂಡತಿ ಅಡಿಗೆ ಮನೆಯ ಕೆಲಸದಲ್ಲೋ ಇಲ್ಲ ಟಿವಿ ಎದುರೋ ಕುಳಿತಿರಬಹುದು. ಗಂಡ ಅನ್ನಿಸಿಕೊಂಡ ಪುರುಷಪುಂಗವ ಯಾವುದೋ ರೂಮಲ್ಲಿ ಕುಳಿತು ಓದುತ್ತಲೋ ಕನಸು ಕಾಣುತ್ತಲೋ ಇರಬಹುದು. ಆದರೂ ಒಂದು ಸೈಕಾಲಜಿಕಲ್ ಸ್ಯಾಟಿಸ್‌ಫ್ಯಾಕ್ಷನ್ನು ಗಂಡ ಮನೇಲೆ ಇದಾನೆ ಅಂತ ಹೆಂಡತಿಗೆ, ಹೆಂಡತಿ ಮನೇಲಿ ಇದಾಳೆ ಅಂತ ಗಂಡನಿಗೆ! ಒಂದು ಕ್ಷಣ ಹೊರಗೆ ಹೋಗಿಬರ್ತೀನಿ ಎಂದು ಹೇಳಿಹೋದಳು ಅನ್ನಿ. ದಿಢೀರ್ ಅಂತ ಒಂಟಿತನ ಕಾಡೋಕೆ ಪ್ರಾರಂಭ ಆಗುತ್ತೆ. ಇದೇ ಸೋಜಿಗ.

# ಇಣುಕ ವೀರರ ಕತೆ

ಎಚ್. ಎಲ್. ಕೇಶವಮೂರ್ತಿ

ಅವತ್ತು ನನಗೂ ಅದೇ ಆಯಿತು. ಅವಳು ಸ್ನೇಹಿತಳ ಮನೆಗೆ ಹೋಗಿಬರ್ತೀನಿ ಎಂದು ಹೇಳಿ ಹೊರಟುಹೋದಳು. ಹದಿನೈದು ಇಪ್ಪತ್ತು ನಿಮಿಷ ಏನೂ ಅನ್ನಿಸಲಿಲ್ಲ. ಬರ್ತಾ ಬರ್ತಾ ಮನೆ ಬಿಕೋ ಅನ್ನಿಸೋಕೆ ಶುರು ಆಯ್ತು. ಒಂಟಿತನ ಕಾಡಿತು. ಟಿವಿ ನೋಡೋಕೂ ಬೋರು; ಓದೋಕೂ ಬೋರು; ಏನು ಮಾಡಲೂ ಬೋರು ಬೋರು! ಒಂಟಿತನದ ಹಿಂಸೆ ತಾಳಲಾರದೆ ಗೆಳೆಯನ ಮನೆಗಾದರೂ ಹೋಗಿ ಬರೋಣ ಎಂದು ಹೊರಟೆ. ಸಿನಿಮಾಗಳಲ್ಲಾದರೆ ಮನೆಬಾಗಿಲು ಸದಾ ಖುಲ್ಲಂಖುಲ್ಲಾ ಹಾರುಹೊಡೆದಿರುತ್ತವೆ. ಇದು ಸಿನಿಮಾ ಬಾಗಿಲಲ್ಲ. ನಿಜವಾದ ಬಾಗಿಲು. ಆದ್ದರಿಂದ ಹಾಕಿತ್ತು. ಕರೆಗಂಟೆ ಬಾರಿಸಿದೆ. ಅದು ಶಬ್ದ ಮಾಡಿತೋ ಇಲ್ಲವೋ ತಿಳಿಯಲಿಲ್ಲ. ವಿದ್ಯುತ್ ಇಲಾಖೆಯವರ ಪ್ರಸಾದದಿಂದ ಹೀಗಾಗಿರಬಹುದು ಎಂದೆಣಿಸಿ ಹೆಸರಿಡಿದು ಕೂಗಿದೆ. ದನಿ ಏರಿಸಿದೆ. ನಾಲ್ಕು ಬೀದಿಗೆ ಕೇಳಿಸುವಷ್ಟು ಜೋರಾಗಿ ಕೂಗಿದೆ. ತಾವಾಯಿತು ತಮ್ಮ ಕೆಲಸ ಆಯಿತು ಎಂದು ಬದುಕುವವರ ನಗರ ಅದು. ಪಕ್ಕದ ಮನೆಗಳಿಗೂ ಕೇಳಿಸಲಿಲ್ಲ. ಅರಣ್ಯಕೂಗಾಯಿತು ನನ್ನದು. ಸುತ್ತ ನೋಡಿದೆ. ಬಾಗಿಲು, ಕಿಟಕಿಗಳೆಲ್ಲ ಭದ್ರವಾಗಿ ಮುಚ್ಚಿದ್ದವು. ಮೊಬೈಲ್ ನಂಬರ್ ಅದುಮಿದೆ. ವ್ಯಾಪ್ತಿ ಪ್ರದೇಶದಿಂದ ಹೊರಗಿದ್ದಾರೆ ಎಂಬ ಉತ್ತರ ಬಂತು. ಮನೆಯಲ್ಲಿದ್ದಾಗಲೇ ಈ ಕೆಲಸ ಮಾಡಬಹುದಿತ್ತು. ಆದರೆ, ಮಂಕು ಹಿಡಿದಿದ್ದ ಬುದ್ಧಿಂಪ ಅರಿವಿಗೆ ಬರಲಿಲ್ಲ. ಮನೆಯ ಒಳಗಿದ್ದರೂ ವ್ಯಾಪ್ತಿ ಪ್ರದೇಶದ ಹೊರಗೆ ಯಾಕೆ ಬಂದಿರಬಾರದು? ಮೊಬೈಲ್‌ಗೆ ಅದು ವ್ಯಾಪ್ತಿ ಪ್ರದೇಶದಿಂದ ಹೊರಗಿರಬಹುದು. ಆದರೆ ನನಗೆ ಅಲ್ಲವಲ್ಲ. ಕೊನೆಯ ಪ್ರಯತ್ನ ಎಂದು ಬಾಗಿಲ ಕಡೆ ದೃಷ್ಟಿಸಿದೆ. ಬೀಗದ ಕೈ ತೂತು (key hole) ಕಾಣಿಸಿತು. ಶ್ರಮಪಟ್ಟು ಆ ತೂತಲ್ಲಿ ಇಣುಕಿ ನೋಡಿದೆ. ಮೂರು ದಿನದ ಧೂಳು ಕಣ್ಣಿಗೆ ಬಿತ್ತು.

ಇಣುಕಿ ನೋಡುವಾಗ ಏನೂ ಅನ್ನಿಸದಿದ್ದರೂ ನೋಡಿದ ನಂತರ ಅಪರಾಧಿ ಮನೋಭಾವ ಮೂಡಿಬಂತು. ಇದು ಅಸಜ್ಜನ ನಡುವಳಿಕೆಯಲ್ಲವೆ ಎಂದು ಕಾಡಿತು. ಹಾಗೆ ನೋಡಿದರೆ ಇಣುಕಿ ನೋಡುವತನ ನನಗೇನೂ ಹೊಸದಲ್ಲ. ಹುಟ್ಟಿನಿಂದ ಅಂಟಬಂದ ಜಾಡ್ಯವಾಗಿತ್ತು. ಶಾಲೆಗೆ ತಡವಾಗಿ ಹೋದಾಗ ಒಡೆದ ಕಿಟಕಿಗಳ ತೂತಿನ ಮೂಲಕ ದೃಷ್ಟಿ ಹರಿಸಿ ತರಗತಿಯ ಒಳಗಿನ ವಾತಾವರಣ ತಿಳಿಯುತ್ತಿದ್ದೆ. ಸಾಹೇಬನ ಕೊಠಡಿಯ ಒಳಗಿಂದ ಬರುವ ಬಿರುನುಡಿಗಳ ಸ್ಪಷ್ಟತೆಗಾಗಿ ಗೋಡೆಗೆ ಕಿವಿ ಆನಿಸಿ ನಿಂತರೂ ಸಮಾಧಾನವಾಗದೆ swinging doorsನ ಸಂದಿಯೊಳಗಿಂದ ಇಣುಕಿ ನೋಟ ಬೀರಿ ಆತ್ಮತೃಪ್ತಿ ಪಡೆಯುತ್ತಿದ್ದೆ. ಮಹಿಳಾಮಣಿಗಳು ಮನೆಗೆ ಬಂದಾಗ ರೂಮಿನ ಬಾಗಿಲ ಸಂದಿಯಿಂದ ಅವರ ಸೌಂದರ್ಯವನ್ನು ಹೀರುತ್ತಿದ್ದುದೂ ಉಂಟು!

ಈಗ ಒಂದು ಘಟನೆ ನೆನಪಾಗುತ್ತಿದೆ. ಊಟಿಯ ಶಿಷ್ಯನೊಬ್ಬನಿದ್ದ. ಹತ್ತಿರದ ನಂಟ ಬೇರೆ. ಅವನ ಮದುವೆ ಕೊಯಮತ್ತೂರಿನಲ್ಲಿ ನಡೆಯುವುದಿತ್ತು. ಛತ್ರದಲ್ಲೇ ಹಲವು ರೂಮುಗಳಿದ್ದವು. ಮೇಷ್ಟ್ರಾಗಿದ್ದ ನೆಂಟ ಎಂಬ ಕಾರಣಕ್ಕೋ ಏನೋ ಗುಣಮಟ್ಟದ ಹೋಟೆಲಿನಲ್ಲಿ ರೂಮು ಮಾಡಿದ್ದ. ನಾವು ಒಂಬತ್ತು ಜನ ಇದ್ದೆವು. ಗಂಡನ ಅಭ್ಯಾಸಗಳ ಪರಿಚಯ ಹೆಂಡತಿಯರಿಗೆ ತಿಳಿದಿರುವುದರಲ್ಲಿ ಸಂಶಯ ಇಲ್ಲ. ಆದರೂ ಹೆಂಡಂದಿರು ಇತರರೊಡನೆ ನನ್ನ ಗಂಡ ಶ್ರೀರಾಮಚಂದ್ರನಂತಹವನು ಎಂದು ಹೇಳುವುದು ಸಾಮಾನ್ಯ. ಆದರೂ ಪುರುಷರ 'ಸಭ್ಯ ನಡವಳಿಕೆ'ಗಳು ಮಹಿಳಾಮಣಿಗಳಿಗೆ ತಿಳಿಯಬಾರದು ಎಂಬ ಮುಂಜಾಗ್ರತೆಯಿಂದ ಅವರನ್ನೆಲ್ಲ ಬೇರೆ ಅಂತಸ್ತಿನಲ್ಲಿದ್ದ ರೂಮಿನಲ್ಲಿ ಕೂಡಿಹಾಕಿದೆವು. ಊಟ ಉಪಚಾರಗಳೆಲ್ಲ ಅವರು ಇರುವ ರೂಮಿನಲ್ಲೇ ಸಾಂಗವಾಗಿ ನೆರವೇರುವಂತೆ ಏರ್ಪಾಡು ಮಾಡಿ ಪುರುಷ ಪುಂಗವರ ಇಡೀ ರಾತ್ರಿಯ ಚಟುವಟಿಕೆಗಳು ನಿರಾಳವಾಗಿ ನಡೆಯುವಂತೆ ನೋಡಿಕೊಂಡೆವು.

ಮುಹೂರ್ತ ಬೆಳಗ್ಗೆ ಆರು ಘಂಟೆಗೇ ಇತ್ತು. ಯಾವ ಜೋಯಿಷ ಇದನ್ನು ಇಟ್ಟನೋ ಏನೋ, ಲಕ್ಷಣವಾಗಿ ಹತ್ತು ಘಂಟೆಗೆ ಧಾರೆ ಎರೆದರೆ ಆಗೋಲ್ವ ಎಂದರೆ ಅವತ್ತು 'ಲಗ್ನ' ಇದ್ದದ್ದೇ ಆ ಟೈಮಿಗಂತೆ! ಮುಹೂರ್ತ ಇಟ್ಟ ಜೋಯಿಷನನ್ನು ಶಪಿಸುತ್ತಾ ಐದು ಗಂಟೆಯ ಒಳಗೆ ಎಲ್ಲರೂ ರೆಡಿಯಾಗಿರಬೇಕೆಂದು ಮಹಿಳಾಮಣಿಗಳಿಗೆ ತಾಕೀತು ಮಾಡಿದೆವು. ಬೆಳಗಿನ ನಾಲ್ಕು ಗಂಟೆಯ ಸುಮಾರಿಗೆ ಅವರು ಎದ್ದಿದ್ದಾರಾ ಎಂದು ನೋಡಲು ಅವರಿದ್ದ ರೂಮಿನ ಕಡೆ ಹೊರಟೆ. ಅವರು ಎದ್ದಿರುವುದು ಮಾತ್ರವಲ್ಲ, ಆಗಲೇ ರೆಡಿಯಾಗುತ್ತಿದ್ದಾರೆ ಎಂಬ ಸುಳಿವು ದೂರದಿಂದಲೇ ಸಿಕ್ಕಿತು.



ಹೇಗೆಂದರೆ... ರೂಮ್‌ಬಾಯ್ ಅನ್ನಿಸಿಕೊಂಡ ಇಪ್ಪತ್ತರ ಆಸುಪಾಸಿನ ಹುಡುಗ ಬಾಗಿಲಲ್ಲಿದ್ದ ಬೀಗದ ಕೈ ತೂತಿನ ಮುಖಾಂತರ ಒಳಗಿನ ದೃಶ್ಯಾವಳಿಯನ್ನು ನೋಡುವುದರಲ್ಲಿ ತಲ್ಲೀನನಾಗಿದ್ದ. ಇಂತಹ ಆನಂದಮಯ ಸನ್ನಿವೇಶದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿರುವ ಯುವಕನ ರಕ್ತದ ಒತ್ತಡ ಕ್ಷಣಕ್ಷಣಕ್ಕೂ

ಏರುತ್ತಿದ್ದು ಏದುಸಿರುಬಿಡುವಂತೆ ಮಾಡುತ್ತಿದ್ದರೂ ಯಾವುದೋ ಸಿಕ್ಸ್ತ್ ಸೆನ್ಸ್ ಜಾಗೃತವಾಗಿರಬೇಕು. ತಲೆ ಎತ್ತಿ ನನ್ನನ್ನು ನೋಡಿದವನೇ ಕ್ಷಣಾರ್ಧದಲ್ಲಿ ಮಾಯವಾದ.

ಅವನ ಅಸಹ್ಯ ನಡವಳಿಕೆ ಕಂಡು ಸಹಿಸಲಾರದಷ್ಟು ಕೋಪ ಬಂತು. ಮ್ಯಾನೇಜರಿಗೆ ದೂರು ನೀಡಿ ಪೋಲೀಸರಿಗೆ ಹಿಡಿದುಕೊಡಬೇಕೆಂದು ತೀರ್ಮಾನಿಸಿ ಲಿಫ್ಟ್ ಕಡೆ ಹೊರಟೆ. ಹಾಗೇ ಯೋಚಿಸಿದೆ. ಇಣುಕುವೀರ ತಮ್ಮ ಅರೆನಗ್ನ ದೇಹಸಿರಿಯನ್ನು ಹೀರಿದ್ದಾನೆಂಬ ಅರಿವಿಲ್ಲದೆ ಮಹಿಳಾಮಣಿಗಳು ಸಹಜವಾಗಿ ವರ್ತಿಸುತ್ತಿದ್ದಾರೆ. ಕ್ರಮ ತೆಗೆದುಕೊಳ್ಳಲು ಆಗ್ರಹಿಸಿದರೆ ವಿಷಯ ಬಯಲಾಗುತ್ತದೆ. ಇದರಿಂದ ಅವನ ಮನಸ್ಸಿಗೆ ಆಘಾತವಾಗಿ ಹಲವು ದಿವಸಗಳ ಕಾಲ ಮನಸ್ಸಿನ ನೆಮ್ಮದಿಯನ್ನು ಕೆಡಿಸುತ್ತೆ. ಬೇರೆಯವರಿಗೂ ತಿಳಿಯುತ್ತೆ. ಅವರು ಕೇಳುವ ಪ್ರಶ್ನೆಗಳಿಗೆ ಉತ್ತರಿಸುವ ಕಿರಿಕಿರಿ ಅನುಭವಿಸಬೇಕಾಗುತ್ತೆ. ಇದನ್ನೆಲ್ಲ ಯೋಚಿಸಿ ಇಣುಕುವೀರನ ಸಾಹಸಗಾಥೆಯನ್ನು ನನ್ನ ಎದೆಯೊಳಗೇ ಬಚ್ಚಿಟ್ಟುಕೊಂಡೆ. ಇವತ್ತಿನವರೆವಿಗೂ ಅವರ್‍ಯಾರಿಗೂ ತಮ್ಮ ಅರೆನಗ್ನ ದೇಹ ಕಾಮುಕನ ಹಸಿದ ದೃಷ್ಟಿಗೆ ಆಹಾರವಾಗಿತ್ತು ಎಂಬ ಸುಳಿವೇ ಇಲ್ಲ!

ವಿವಾಹ ಮುಗಿಸಿಕೊಂಡು ಹೊರಟೆವು. ಹೆಂಗಸರೆಲ್ಲರೂ ರೂಮು ಖಾಲಿ ಮಾಡುವಾಗ ರಾತ್ರಿ ತಮ್ಮನ್ನು ಪ್ರೀತ್ಯಾದರಗಳಿಂದ ನೋಡಿಕೊಂಡ ರೂಮ್‌ಬಾಯ್‌ಗಾಗಿ ತಡಕಾಡಿದರು. ಸಾಮಾನುಗಳನ್ನೆಲ್ಲ ಹೊತ್ತುನಿಂತ ಹುಡುಗನ ಕೈಗೆ ಒಂದಷ್ಟು ನೋಟುಗಳನ್ನು ತುರುಕುತ್ತಾ



“ಅವನಿಗೆ ಕೊಡು” ಎಂದರು. ಪಾಪದ ಕೊಳೆಯನ್ನೆಲ್ಲ ಪಶ್ಚಾತ್ತಾಪದಿಂದ ತೊಳೆದುಕೊಂಡ ಮುಖವೊಂದು ಯಾವುದೋ ರೂಮಿನ ಬಾಗಿಲ ಸಂದಿಯಿಂದ ನೋಡುತ್ತಿದ್ದಂತೆ ನನಗೆ ಭಾಸವಾಯಿತು. ಇದು ಭ್ರಮೆಯೋ, ಸತ್ಯವೋ ?

ಇವೆಲ್ಲ ಘಟನೆಗಳು ನೆನಪಿಗೆ ಬರಲು ಕಾರಣ ಒಂದು ಪತ್ರಿಕೆಯಲ್ಲಿ ಬಂದಿದ್ದ ‘ಪೀಪಿಂಗ್ ಟಾಮ್’ ಎಂದು ಹೆಸರು ಬರಲು ಕಾರಣವೇನು ಎಂಬುದರ ವಿವರಣೆ. ಸಂಕ್ಷಿಪ್ತವಾಗಿ ಆ ವಿವರಣೆ ಹೀಗಿದೆ :

ಲೇಡಿ ಗೊಡಿವಾ ಕೊವೆಂಟ್ರಿ ನಗರದ ಲಾರ್ಡ್ ಮೂರನೇ ಲಿಯೋಫ್ರಿಕ್‌ನ ಹೆಂಡತಿ. ಒಂದು ಸಲ ಹೀಗಾಯಿತು. ಸರ್ಕಾರದ ಬೊಕ್ಕಸ ಖಾಲಿ ಆಯ್ತು ಅಂದರೆ, ಜನರ ಮೇಲಿನ ತೆರಿಗೆ ಏರಿಸು ಅನ್ನೋ ಅರಣ್ಯ ನ್ಯಾಯ ಲಾಗಾಯ್ತಿನಿಂದಲೂ ಬಂದಿದೆ ಅಲ್ವಾ ? ಇದೇ ತತ್ವಕ್ಕೆ ಅನುಗುಣವಾಗಿ ಈ ಲಾರ್ಡ್ ಜನರ ಮೇಲೆ ತೆರಿಗೆ ಹೇರಿದ. ಗೊಡಿವಾಗೆ ಇದರಿಂದ ನೋವಾಯಿತು. ಪಾಪದ ಜನ ಈಗಲೇ ಹೊಟ್ಟೆಬಟ್ಟೆಗಿಲ್ದೆ ಒದ್ದಾಡ್ತಿದ್ದಾರೆ. ತೆರಿಗೆ ಹೆಚ್ಚಿಸಬೇಡ ಅಂತ ಗಂಡನ್ನ ಬೇಡಿಕೊಂಡಳು. ಅದ್ಯಾವುದೋ ದೇಶದ ರಾಣಿ, “ಜನರಿಗೆ ಬ್ರೆಡ್ ಇಲ್ಲದಿದ್ದರೆ ಕೇಕ್ ತಿನ್ನಲಿ” ಅಂದಳಂತಲ್ಲಾ ಹಂಗೂ ಹೇಳಲಿಲ್ಲ. ನಮ್ಮ ದೇಶದ ಪ್ರಧಾನಮಂತ್ರಿಗಳ ಹಾಗೆ “ಭಯ ಬೇಡ. ಸಾಲ ತಂದು ಸಾಕ್ತೀನಿ” ಅಂತಾ ಸುಳ್ಳು ಭರವಸೇನೂ ನೀಡ್ಲಿಲ್ಲ. ಹೆಂಡತಿ ಮಾತ್ನೂ ತಗುದ್ಹಾಕ್ಲಿಲ್ಲ. “ಹುಟ್ಬಿಡುಗೇಲಿ ಕುದುರೆ ಮೇಲೆ ಕುಂತ್ಕಂಡು ಕೊವೆಂಟ್ರಿ ನಗರದ ಬೀದಿಬೀದೀಲಿ ಬಂದ್ರೆ ನೀನು ಹೇಳಿದ್ದು ಮಾಡ್ತೀನಿ” ಅಂದ. ಇದೇನು ಆಗಿಹೋಗೋ ಮಾತಾ ಅಂತ! ಎಲಾಎಲಾ, ಇವನೆಂಥಾ ಗಂಡ, ತಾನು ನೋಡಿ ಅನುಭವಿಸಿದ ದೇಹದ ಸಿರೀನಾ ಊರಿಗೆಲ್ಲಾ ತೋರ್‍ಸು ಅಂತಾವ್ನಲ್ಲ ಅನ್ಕಂಡ್ಳು. ಪ್ರಜೆಗಳಿಗೆ ಒಳ್ಳೇದು ಆಗೋ ಹಂಗಿದ್ರೆ ಬರ್ತೀನಿ ಅಂದ್ಳು. ಊರ್‍ನಲ್ಲೆಲ್ಲಾ ಸಾರಿಸಿದ್ಲು. “ನಾನು ಹಿಂಗಿಂಗೇ ಹುಟ್ಟಿದ ಉಡುಗೇಲಿ ಕುದುರೆ ಮೇಲೆ ಬರ್ತೀನಿ. ಯಾರೂ ನೋಡಬಾರದು” ಅಂತಾನ. ಪಾಪ ಈ ತಾಯಿ ನಮ್ ಒಳ್ಳೇದ್ಕೇ ಅಲ್ವ ಹಿಂಗೆ ಮಾಡ್ತೀರೋದು ಅಂತ ಹಿಂಗಿಂಗೇ ನಡ್ಕೋಬೇಕು ಅಂತ ಜನ ಮಾತಾಡಿಕೊಂಡ್ರು.

ನಿರ್ದಿಷ್ಟ ದಿವಸ ಬಂತು. ಜನರಾದ ಜನರೆಲ್ಲರೂ ತಮ್ಮ ತಮ್ಮ ಮನೆ ಸೇರಿ ಬಾಗಿಲು, ಕಿಟಕಿ ಬಂದ್ ಮಾಡಿದ್ರು. ಲೇಡಿ ಗೊಡಿವಾ ತಾನು ಹೇಳ್ದ ಮಾತ್ನಂಗೆ ಕುದುರೆ ಏರಿ ಊರಿನ ದಾರೀಲಿ ಬಂದಳು. ಬೀದಿಯಾದ ಬೀದಿ ಎಲ್ಲ ಬಿಕೋ ಅನ್ತಿತ್ತು. ಬೆಳೆ ಇದ್ದ ಕಡೆ ಕಳೇನೂ ಇದ್ದಂಗೆ ಅಲ್ಲಿ ಒಬ್ಬ ದರ್ಜಿ ಇದ್ದ. ಟಾಮ್ ಅಂತ ಅವನೆಸ್ರು. ಅವನಿಗೆ ಬಟ್ಟೆ ಉಟ್ಟಿದ್ದ ಗೊಡಿವಾನ ನೋಡಿದ್ದ. ಬಟ್ಟೆ ಇಲ್ದಾಗ ಹೆಂಗೆ ಕಾಣ್ತಾಳೋ ನೋಡಬೇಕು ಅನ್ನೋ ಕುತೂಹಲ ಕಾಡ್ತು. ತಡೀಲಾರದೆ ಅವ್ನು ತನ್ನ ಮನೆ ಕಿಟಕಿಯಿಂದ ಇಣುಕಿ ನೋಡೇ ಬಿಟ್ಟ! ಹುಟ್ಬಿಡುಗೇಲಿ ಇದ್ದ ಗೊಡಿವಾನ ನೋಡ್ತಿದ್ದಂಗೆ ದರ್ಜಿ ಕಣ್ಣು ಹಿಂಗೋಯ್ತು!

ಯಾಕೋ ಅನುಮಾನ ಬಂತು. ಕಣ್ಣುಮುಚ್ಚಿ ನೋಡಿದೆ. ಬಿಟ್ಟು ನೋಡಿ ಹಿಂಗಿರಲಿಲ್ಲ ಸದ್ಯ !


ಎಚ್. ಎಲ್. ಕೇಶವಮೂರ್ತಿ
ನಂ. ೧೩, ಹೌಸಿಂಗ್ ಬೋರ್ಡಿಂಗ್ ಫ್ಲಾಟ್
ಅಗ್ನಿಶಾಮಕ ದಳದ ಎದುರು, ಗುತ್ತಲು, ಮಂಡ್ಯ - ೫೭೧ ೪೦೧


## ನೀಗ್ರೋ, ನನ್ನ ಸೋದರ

ದಂತದ ಈ ಕಾಡಿನಲ್ಲಿ
ಅವನ ಕಪ್ಪು ಮೈ,
ಸುರುಸುರುಳಿ ಸುತ್ತುವ ಕಪ್ಪು ಮೋಡದಂತೆ
ಕಪ್ಪು ಮಿಂಚಿನ ಝಲಕಿನಂತೆ,
ಕಪ್ಪು ದೇಹಗಳ ಹೊತ್ತ ಕಡಲು
ಉಬ್ಬರವಿಳಿಯುತ್ತ, ಹರಿಯುತ್ತ ತಿರುವು
ಮುರುವು ತಿರುಗುತ್ತದೆ,
ಹೊಳೆವ ಸೂರ್ಯನ ಬೆಳಕಲ್ಲಿ ಹೊಳೆಯುತ್ತ
ಈಟಿಯಾಗಬಲ್ಲನಿವನು ;
ನಗಾರಿಯ ತಾಳಕ್ಕೆ ಕುಣಿವ ಅವನ ಕಾಲ್ಗಳು
ಶತ್ರುವನ್ನು ಬರಸೆಳೆಯುತ್ತವೆ
ನೀಗ್ರೋ, ನನ್ನ ಸೋದರ,
ಎಲ್ಲ ಕಾಡುಗಳಿಂದ ಹೂಗಳ ಆಯ್ದು ತರುತ್ತಾನೆ
ನನ್ನೀ ಸೋದರನ ಅಂಗಾಲುಗಳು ಕೆಂಪಗಿವೆ,
ಗುಲಾಬಿ ಹೂಗಳಂತೆ.




ಉರ್ದು ಮೂಲ : ಅಲಿ ಸರ್ದಾರ್ ಜಾಫ್ರಿ
ಕನ್ನಡಕ್ಕೆ : ಜ.ನಾ.ತೇಜಶ್ರೀ
ಇಂಗ್ಲಿಷ್ ಉಪನ್ಯಾಸಕಿ, ಸಂತ ಫಿಲೋಮಿನಾ
ಪದವಿ ಪೂರ್ವ ಕಾಲೇಜು
ಹೊಳೆನರಸೀಪುರ ರಸ್ತೆ, ಹಾಸನ - ೫೭೩೨೦೧

# ಒಂದು ಕಟ್ಟಡದ ಸುತ್ತ...



ಊರಂಚ್ಯೋ ಊರ ಹೊರಗ ರಣ ರಣ ಅನ್ನೋ ರವ್ವಲ್ಲಿ ಒಂದೇ ಒಂದು ಕೋಣೆ...

ಆ ಕೋಣೆಯ ಮೆಟ್ಟಿಲಾದಿಯಾಗಿ ಮುಳುಗಿಸಿರುವ ಉದುರಿದ ಒಣ ಎಲೆಗಳ ರಾಶಿ...

ಕಾಲೂರಿದರೆ ಸಾಕು... ಒಂಥರಾ ಚರಕ್... ಚರಕ್... ಅನ್ನೋ ಕೊರಕಲು ಸದ್ದು...

ಬಾಗಿಲಿಗೊಂದು ಜಂಗು ಮೆತ್ತಿದ ಬೀಗ...

ನೆತ್ತಿಯ ಮೇಲೆ ಮಂಗಗಳು ಕುಸ್ತಿ ಆಡಿ ಕೆದರಿದ ಹಂಚುಗಳು.

ಬಾವಲು ಹಕ್ಕಿಯಂತೆ ನೇತುಬಿದ್ದ ಬೋರ್ಡು.

ಇಂಥಪ್ಪ ಕಟ್ಟಡ ಹೀಗೇ ಹಾದುಹೋಗುವ ಪಯಣಿಗರ ಬಾಯಿಗೆ ತರಹೇವಾರಿ ಕಥೆಯಾಗಿತ್ತು.

ಎದುರಲ್ಲಿ ಒಂದು ದೊಡ್ಡ ಮಾವಿನ ಮರ. ಅದರಲ್ಲಿ ಒಣಗಿದ ಸಣ್ಣ ಸಣ್ಣ ಟೊಂಗೆಗಳು. ಅವು ನೆಲಕ್ಕುರುಳಿದಾಗ ಆಗೊಮ್ಮೆ ಈಗೊಮ್ಮೆ ದನ ಕಾಯುವ ಹುಡುಗರು ಅವುಗಳನ್ನು ಹೆಕ್ಕಲು ಈ ಬದಿ ಹಾಯುವದನ್ನು ಬಿಟ್ಟರೆ ಮಿಕ್ಕ ಸಂದರ್ಭಗಳಲ್ಲಿ ಹಗಲು ಹೊತ್ತಲ್ಲಿಯೂ ಇಲ್ಲಿ ಒಂದೇ ಒಂದು ನರಪಿಳ್ಳೆಯೂ ಸುಳಿಯುವುದಿಲ್ಲ.

ಆ ಕಟ್ಟಡ ದೆವ್ವದ ಕಥೆಯುಳ್ಳ ಸಿನೆಮಾ ತೆಗೆಯುವವರಿಗೆ ಹೇಳಿ ಮಾಡಿಸಿದ ಜಾಗ. ಕಾಲೂರಿದರೆ ಸಾಕು ಡಿಜಿಟಲ್ ಸೌಂಡ್ ಇಫೆಕ್ಟ್ ಸದ್ದು. ಆ ಸದ್ದೇ ಒಂದು ಸುದ್ದಿಯಾಗಿತ್ತು. ಭಯದ ಕಥೆಗಳಿಗೆ ಜೀವ ಕೊಟ್ಟಿತ್ತು. ಜೀವಗಳಿಗೆ ಭಯ ತುಂಬಿತ್ತು. ಇಂಥಾ ಭಯದ ದಂಡಿಗುಂಟ ಈ ಮುಂಚೆ ಅಲ್ಲೊಬ್ಬ ನೇಣು ಹಾಕಿಕೊಂಡು ಸತ್ತ ಬಗ್ಗೆ ಒಂದು ಉಪಕಥೆ ಹುಟ್ಟಿತ್ತು. ಈ ಉಪಕಥೆಗೆ ಉಪ್ಪು - ಖಾರ ಎಲ್ಲಾ ಬರೊಬ್ಬರಿ ಬಿದ್ದಂಗಿತ್ತು. ಈ ವಗ್ಗರಣೆಯ ಹೊಡತಕ್ಕೆ ಅವನೀಗ ದೆವ್ವ ಆಗಿ, ಆ ಕಟ್ಟಡದ ಸುತ್ತಮುತ್ತಲೂ ಇರುವ ಗಿಡದ ಪೊದೆಯಲ್ಲಿ ಕುಳಿತು, ಅಲ್ಲಿಗೆ ಬಂದುಹೋಗುವ ಎಲ್ಲರ ಮೇಲೂ ನಿಗಾ ಇಟ್ಟಿರುತ್ತಾನೆ ಎನ್ನುವ ಸುದ್ದಿಯ ಜೊತೆಗೆ, ಆ ದೆವ್ವ ಒಂದೇ ರೂಪವಲ್ಲ, ಕಮಲಹಾಸನ್‌ನ ದಶಾವತಾರದ ಸಿನೆಮಾ ಥರ ಹತ್ತು ಅವತಾರಗಳನ್ನು ಮೀರಿ ನಿಂತಿದೆ ಎನ್ನುವ ಮಾತೂ ಇತ್ತು. ಕುರಿಯಾಗಿ, ಆದರ ಮರಿಯಾಗಿ, ಎಮ್ಮೆಯಾಗಿ, ಕೋಣವಾಗಿ, ಆಕಳಾಗಿ, ನಾಯಿಯಾಗಿ, ಢಾಳಾಗಿ ಕುಂಕುಮ ಬಳಿದ ಹೆಂಗಸಾಗಿ, ಭಿಕ್ಷುಕನಾಗಿ, ಮಂಗನಾಗಿ, ಅಲ್ಲಿ ಬಿದ್ದ ಲಿಂಬೆಹಣ್ಣಾಗಿ, ಅಡಿಕೆ ಚೂರಾಗಿ, ಸಿಗರೇಟ್ ಡಬ್ಬಿಯಾಗಿ, ಸವಕಲು ನಾಣ್ಯವಾಗಿ ಹೀಗೆ ಒಂದೇ ಎರಡೇ, ನೂರೆಂಟು ತರಾವರಿ ಅವತಾರಗಳು. ಈ ಮೂರ್ತರೂಪಗಳು ಬೋರ್ ಹೊಡೆದಾಗ ಸುಂಟರಗಾಳಿಯಾಗಿ, ಗಿಡದ ಹೊಟ್ಟೆಗೆ ಗವ್ವನೇ ಕವಿದ ಕತ್ತಲಾಗಿ, ಬಿರುಬಿಸಿಲಾಗಿ, ಒಣಗಿದ ಎಲೆಯಾಗಿ, ಮುರಿದ ಕೈಬಳೆಯಾಗಿ, ಕುಂಕುಮದ ಪುಡಿಯಾಗಿ ಈ ದೆವ್ವ ಸೂಕ್ಷ್ಮಾತಿಸೂಕ್ಷ್ಮ ಕಣ್ಣುಗಳಿಗೆ ಹೀಗೆ ಕಂಡು ಹಾಗೆ ಬಯಲಾಗುವುದಿದೆ. ಆ ಊರಿನ ಮುದಿಮಂದಿಯ ಕಣ್ಣಿಗೆ ಬಹಳ ಸಾರಿ ಕಾಣಿಸಿಕೊಂಡ ಈ ದೆವ್ವ ಕೆಲವರ ಕಿವಿಯಲ್ಲಿ ಒಂದು ಖಾಸ್ ಬಾತ್ ಅನ್ನು ಕನವರಿಸಿದ್ದಿದೆ. ರಾತ್ರಿ ಬಯಲು ಕಡೆಗೆಂದು ಹೋದಾಗ, ಕೈಯಲ್ಲಿ ಬ್ಯಾಟರಿ ಹಿಡಿದು ಬರೋದು, ಅಲ್ಲೇ ತುಸು ಹೊತ್ತು ಉರಿ ಕಾಯಿಸಿಕೊಂಡು ಹೋಗೋದು ಎಲ್ಲವನ್ನು ನೋಡಿದವರಿದ್ದಾರೆ. ಮತ್ತೂ ಕೆಲವರು ತಮ್ಮ ಹೆಸರಿಡಿದು ಕೂಗಿದ್ದನ್ನು ಕೇಳಿ ಕಂಗಾಲಾದವರಿದ್ದಾರೆ. ಹೊರಳಿ ನೋಡಿದ್ರೆ ಮಂಗಮಾಯ...! ಹೀಗೆ ಆ ದೆವ್ವಿನ ಬಗ್ಗೆ ರೋಚಕವಾದ ಕಥೆಗಳು ಹುಟ್ಟಿದ್ದು ಬಾಲಿವುಡ್ ನಿರ್ಮಾಪಕನೊಬ್ಬನಿಗೆ ಗೊತ್ತಾದರೆ 'ಏಕ್ ಬಂಗ್ಲಾ ಕಿ ಕಹಾನಿ' ಅಂತ ಒಂದು ಭಯಂಕರ ಸಿನೆಮಾ ರೆಡಿಯಾಗಿರುತ್ತಿತ್ತು.

ಹಾನಗಲ್ ತಾಲೂಕಿನ ಕಟ್ಟಕಡೆಯ ಹಳ್ಳಿ ಅದು. ಆ ಹಳ್ಳಿಯಲ್ಲಿ ಸುಮಾರು ಮುನ್ನೂರು ಮನೆಗಳು. ಆ ಊರ ಹೊರಗಡೆ ಇರೋ ಆ ಪಾಳುಬಿದ್ದ ಕಟ್ಟಡ ಸರಕಾರಿ ಸ್ವಾಮ್ಯದ್ದು. ಅದರ ಹೊರಗಡೆ ವಾರೆಯಾಗಿ ನೇತಾಡುವ ಬೋರ್ಡಲ್ಲಿ ತೀರಾ ಹತ್ತಿರ ಬಂದು, ಬೋರ್ಡಿಗೆ ಮೆತ್ತಿದ ಮಣ್ಣನ್ನು ಊದಿ, ದಿಟ್ಟಿಸಿ ನೋಡಿದರೆ ಮಸುಕು ಮಸುಕಾಗಿ 'ದನಗ... ದವಾ...' ಅಷ್ಟೇ ಇದೆ. ಅದನ್ನು ಪದಬಂಧ ಮಾಡಿದರೆ 'ದನಗಳ ದವಾಖಾನೆ' ಎಂದಾಗುತ್ತದೆ. ಮೂಲೆಯಲ್ಲಿ 'ಸ್ಥಾಪನೆ ೧೯೭೨' ಎಂದಿದೆ. ಕೆಳಬದಿ ಕೆಲಸದ ಅವಧಿ ಅಷ್ಟೇ ಇದೆ. ಅಲ್ಲಿ ವೇಳೆ ಇಲ್ಲ. ಎದುರು ಬದಿ ದನಗಳನ್ನು ಚಿಕಿತ್ಸೆ ನೀಡಲು ಎರಡು ಕಬ್ಬಿಣದ ರಾಡುಗಳು ಹೂತಿರುವುದಿದೆ. ಇಡೀ ಕಟ್ಟಡ ಒಣಗಿದ ಎಲೆಗಳಿಂದ ಸುತ್ತುವರಿದಿದೆ. ಸಾಯಂಕಾಲವಾಗುತ್ತಿದ್ದಂತೆ ಇತ್ತ ಯಾರೂ ಸುಳಿಯುವುದಿಲ್ಲ. ಎಲ್ಲೋ ಕೆಲವೊಮ್ಮೆ ಕದ್ದು ಚಕ್ಕಂದ ಆಡುವವರಿಗೆ ಇದು ಅತ್ಯಂತ ಸೇಫ್ ಜಾಗ ಆಗಿರುವುದಿದೆ.

ಈ ಮುಂಚೆ ಇಲ್ಲಿ ವೈದ್ಯನಾಗಿ ಸೇವೆ ಸಲ್ಲಿಸಲು ಬಂದ ನರಹರಿ ತನಗೆ ಆದಾಗಲೇ ಪ್ರಮೋಶನ್ ಆಗಬೇಕಿತ್ತು. ತನ್ನನ್ನು ಉದ್ದೇಶಪೂರ್ವಕಾಗಿ ಅದರಿಂದ ತಪ್ಪಿಸಿ ಸೊರಬದಿಂದ ಇಲ್ಲಿಗೆ ವರ್ಗಾವಣೆ ಮಾಡಿರುವದನ್ನು ಪ್ರತಿಭಟಿಸಲಾಗದೇ ನೇಣು ಹಾಕಿಕೊಂಡ. ಅದಕ್ಕೆ ಯಾರೂ ಕಾರಣರಲ್ಲ, ತನಗೆ ಆದ ಅನ್ಯಾಯವೇ ಅದಕ್ಕೆ ಕಾರಣ ಎಂದು ಅವನು ಬರೆದುಕೊಂಡಿದ್ದರೂ ಈ ಊರ ಜನತೆ ಅದಕ್ಕೆ ಬೇರೆ ಕಥೆಯನ್ನೇ ಕಟ್ಟಿದ್ದರು. ವೈದ್ಯ ನರಹರಿ ಮತ್ತು ಸಿದ್ದನಗೌಡನ ಮಗಳು ಶೈಲಾ ಇವರ ಮಧ್ಯೆ ಏನೋ ಒಂಥರಾ ಇತ್ತು. ಅದು ಇನ್ನೊಂಥರಕ್ಕೆ ಅವಕಾಶ ಮಾಡಿಕೊಟ್ಟಿತ್ತು. ಇದು ಗೌಡನಿಗೆ ಗೊತ್ತಾಗಿ ಇನ್ನು ತನ್ನನ್ನು ಬಿಡುವದಿಲ್ಲ ಎಂದು ತಿಳಿದು ಹೆದರಿ ನರಹರಿ ಹೀಗೆ ಸಾವಿಗೆ ಶರಣಾದ ಎನ್ನುವದೇ ಆ ಕಥೆ... ಅದೇನೋ ಒಂದು ಸುಡಗಾಡು ರೋಗವಂತೆ. ಅದು ತನಗೆ ಇದ್ದ ಬಗ್ಗೆ ಗೊತ್ತಾಗಿ ಬೇಸರಗೊಂಡು ಹಗ್ಗದ ಕುಣಿಕೆಗೆ ಕೊರಳು ಕೊಟ್ಟ...ಅನ್ನೋದು ಮತ್ತೊಂದು ಮಾತು. ಈ ಬಗೆ ಬಗೆ ಮಾತುಗಳು ಏನೇ ಇರಲಿ ನರಹರಿ ನೇಣು ಹಾಕಿಕೊಂಡದ್ದಂತೂ ಹೌದು. ಅಂದಿನಿಂದ ಇಂದಿನವರೆಗೂ ಯಾರೂ ಅಲ್ಲಿಗೆ ಬರಲು ತಯಾರಿಲ್ಲ. ಸರಕಾರ ಅನೇಕ ಬಾರಿ ಬೇರೆ ಬೇರೆ ಕಡೆಯಿಂದ ವರ್ಗಾವಣೆ ಮಾಡಿದರೂ ದೆವ್ವಿನ ಕಥೆ ಕೇಳಿ ಖುದ್ದಾಗಿ ಬೆಂಗಳೂರಿಗೆ ತೆರಳಿ, ಕಾಸು ಕೊಟ್ಟು ಆ ವರ್ಗಾವಣೆಯನ್ನು ಕ್ಯಾನ್ಸಲ್ ಮಾಡಿಸಿಕೊಂಡವರೇ ಹೆಚ್ಚು. ಹೀಗಿರುವಾಗ ಹಾನಗಲ್ ಊರಿನವನೇ ಆದ ಸುಹಾಸ ಇಲ್ಲಿಗೆ ಬರಲು ಖುದ್ದಾಗಿ ಕೋರಿಕೆ ಸಲ್ಲಿಸಿದ್ದು ಆ ಊರ ಜನತೆಯಲ್ಲಿ ಗಾಬರಿಯನ್ನುಂಟುಮಾಡಿತ್ತು. ಸುಹಾಸನಿಗೆ ಈ ಕಟ್ಟಡ, ನೇಣು ಹಾಕಿಕೊಂಡ ಕಥೆ ಎಲ್ಲವೂ ಗೊತ್ತು. ಆದರೂ ಚ್ಯಾಲೆಂಜಿಂಗ್ ಆಗಿ ಈ ಹಳ್ಳಿಯನ್ನೇ ಅವನು ಸೇವೆ ಮಾಡಲು ಆಯ್ಕೆ ಮಾಡಿಕೊಂಡ. ಅವರ ತಂದೆ ಶ್ರೀನಿವಾಸ್ ಇವನನ್ನು ಓದಿಸುವಾಗಲೂ, "ನೀನು ಭವಿಷ್ಯದಲ್ಲಿ ಹಳ್ಳಿಗೆ ಬಂದು ಸೇವೆ ಮಾಡುವುದಾದರೆ ಈ ಕೋರ್ಸನ್ನು ಓದು.

**ಎಸ್. ಬಿ. ಜೋಗುರ**

ಇಲ್ಲದಿದ್ದರೆ ಬೇಡ. ಕಾಂಕ್ರೀಟ್ ಕಾಡಲ್ಲಿ ಕುಳಿತು ನೀನು ಪ್ರಾಣಿಗಳ ಸೇವೆ ಮಾಡುವೆ ಎಂದಾದರೆ ಬೇಡವೇ ಬೇಡ'', ಎಂದು ಕರಾರುವಾಕ್ಕಾಗಿಯೇ ಹೇಳಿದ್ದರು. ಸುಹಾಸನಿಗೂ ತಂದೆಯ ಅಭಿಪ್ರಾಯ ಸರಿ ಅನಿಸಿತ್ತು. ನಮ್ಮ ದೇಶದಲ್ಲಿ ಗ್ರಾಮೀಣ ಜೀವನದಲ್ಲಿ ಬೆರೆತು ಒಂದಾಗಿರುವ ದನಕರುಗಳ ಸೇವೆ ಮಾಡುವಲ್ಲಿ ಒಂದು ಬಗೆಯ ಸಾರ್ಥಕತೆಯಿದೆ ಎನ್ನುವ ಅರಿವು ಅವನಿಗೂ ಇತ್ತು. ಇನ್ನು ಕಲಿಯುವ ವೇಳೆಯಲ್ಲಿ ಯಾವಾಗಲೂ ವೈಚಾರಿಕತೆಯನ್ನೇ ಬೆಂಬಲಿಸುತ್ತಾ... ಡಾ॥ ಎಚ್. ನರಸಿಂಹಯ್ಯ ಅವರ ಮಾನಸಪುತ್ರ ಎಂದು ಕರೆಯಿಸಿಕೊಂಡು ಸದಾ ಈ ಪವಾಡಗಳನ್ನು ಬಯಲು ಮಾಡುವ ಗುಣ ಹೊಂದಿದ್ದ ಸುಹಾಸನಿಗೆ ಇಂಥಾ ಕಟ್ಟಡ ಹಾಗೂ ಊರೇ ಬೇಕಾಗಿತ್ತು.




ಸುಹಾಸನ ತಾಯಿ ತುಸುಸಂಪ್ರದಾಯಸ್ಥಳು. ''ನೋಡಪ್ಪಾ, ತಲೆ ಗಟ್ಟಿ ಇದೆ ಅಂತ ಬಂಡೆಗೆ ಜಜ್ಜಬೇಡ, ಆ ಊರ ಬಗ್ಗೆ ನನಗೂ ಗೊತ್ತು, ಪಕ್ಕದ ಊರಲ್ಲೇ ನಮ್ಮ ಅತ್ತಿ ಮಗಳಿಗೆ ಕೊಟ್ಟಿದ್ದಾರೆ. ಹಿಂದಿನ ಶಿವರಾತ್ರಿಗೆ ಅಲ್ಲಿಗೆ ಹೋದಾಗ ಆ ಕಟ್ಟಡದ ಕಥೆ ಕೇಳೀನಿ. ಸುಮ್ಮನೇ ಒಣ ಉಸಾಬರಿ ಬ್ಯಾಡ, ಇಲ್ಲೇ ಹಾನಗಲ್‌ದಾಗೇ ನಿನ್ನ ಹುದ್ದೆ ಖಾಲಿ ಐತೆಲ್ಲಾ?'' ಅಂದಾಗ ಮಗ ಸುಹಾಸ, ''ನೋಡಮ್ಮಾ ಎಲ್ಲರೂ ಸಿಟಿಗಳಲ್ಲೇ ಸೇವೆ ಸಲ್ಲಿಸುತ್ತೇವೆ ಅಂದ್ರೆ ಹಳ್ಳಿಗಳಲ್ಲಿ ಯಾರು ಮಾಡಬೇಕು..? ಗಾಂಧೀಜಿಯವರ ಎಲ್ಲಾ ವಿಚಾರ ಒಪ್ಪಿಕೊಳ್ತೀ ನೀವು ಇದನ್ಯಾಕೆ ಬೇಡ ಅಂತೀರಿ..?'' ಎಂದಾಗ, ''ಆಯ್ತಪ ನಿನ್ನಿಷ್ಟ'' ಎಂದು ಸುಮ್ಮನಾಗಿದ್ದಳು.

* * *

ಸಮಯ ಬೆಳಿಗ್ಗೆ ಹತ್ತು ಘಂಟೆ. ಸುಹಾಸ ಆ ಹಳ್ಳಿಗೆ ಬಂದು ತಲುಪಿದ. ಖಾಸಗಿ ಬಸ್ ಒಂದರಲ್ಲಿ ಊರ ಹೊರಗಿರುವ ನಿಲ್ದಾಣದಲ್ಲಿ ಇಳಿದು, ಅಲ್ಲೇ ಹತ್ತಿರದಲ್ಲಿರುವ ಗೂಡಂಗಡಿಯವನಿಗೆ, ''ಇಲ್ಲಿ ವೆಟರ್ನರಿ ಆಸ್ಪತ್ರೆ ಎಲ್ಲಿದೆ...?'' ಎಂದು ಕೇಳಿದ. ಅವನಿಗೆ ಹಾಗಂದರೆ ಏನು ಎನ್ನುವದು ತಿಳಿಯದೇ ಎದುರಲ್ಲಿ ಕುಳಿತು ಟೀ ಕುಡಿಯುವವನ ಕಡೆಗೆ ನೋಡಿದ. ಅವನೂ ಇವನಷ್ಟೇ ಪಂಡಿತ. ಅವರ ಮುಖಭಾವ ಗಮನಿಸಿ ಸುಹಾಸ, ''ನಾನು ಕೇಳ್ತಾ ಇರೋದು ದನದ ದವಾಖಾನೆ'' ಎಂದ. ಇಬ್ಬರೂ ಒಂಥರಾ ಹಣೆಗೆ ಗಂಟಿಕ್ಕಿ ಸುಹಾಸನನ್ನು ನೋಡತೊಡಗಿದರು. ನಂತರ, ''ನೀವ್ಯಾರು ?'' ಎಂದು ಕೇಳಿದರು. ಸುಹಾಸ ಎಲ್ಲವನ್ನೂ ಹೇಳಿದ.

''ಮಾರಾಯರೇ ಬ್ಯಾರೆ ಯಾವ ಹಳ್ಳೀನೂ ನಿಮಗ ಸಿಗಲಿಲ್ಲನೂ..?''

''ಯಾಕ ಹಿಂಗ ಅಂತೀರಿ... ?''

''ನಾವಿಬ್ಬರೇ ಅಲ್ಲ ಇಡೀ ಊರಿಗೆ ಊರೇ ಹಿಂಗೇ ಅಂತೈತಿ.''

''ಅಂತದ್ದು ಏನು ಆಗೈತಿ...?''

''ಏನು ಆಗ್ಯೆತಾ..? ಏನು ಆಗಿಲ್ಲ.. ಅಂತ ಕೇಳ್ರಿ.''

''ಬಿಡಿಸಿ ಹೇಳ್ರಿ.''

''ಅದರ ಜರೂರತ್ತ ಇಲ್ಲ. ಆಮ್ಯಾಗ ಎಲ್ಲಾ ನಿಮಗೇ ಗೊತ್ತಾಗತೈತಿ.''

''ಸರಿ ಹಾಂಗಿದ್ದರ, ಈಗ ಯಾವ ಕಡೆ ಹೋಗಬೇಕು ಹೇಳ್ರಿ'' ಅಂದ ನರಹರಿ.

''ಹಿಂಗೇ ಸೀದಾ ಹೋಗರಿ. ರೋಡಿಗೇ ಐತಿ ನೊಡ್ರಿ ನಿಮ್ಮ ದವಾಖಾನಿ'' ಎಂದರು.

''ಥ್ಯಾಂಕ್ಯೂ'' ಅಂದ. ಪ್ರತಿಯಾಗಿ ಅವರೂ ''ಥ್ಯಾಂಕ್ಯೂ'' ಅಂದರು.

ಸುಹಾಸ ಮುಗುಳುನಗುತ್ತಾ ನಡೆದ. ಸ್ವಲ್ಪ ಹೊತ್ತು ನಡೆದಾದ ಮೇಲೆ ಒಂದು ಪಾಳು ಕಟ್ಟಡ ಕಣ್ಣಿಗೆ ಬಿತ್ತು. ಅದರ ಸ್ಥಿತಿ ನೋಡಿದ. ಆಗಲೇ ಅದರ ಸ್ಥಿತಿಗತಿಯ ಬಗ್ಗೆ ಕೇಳಿದ್ದ. ಆದ್ದರಿಂದ ಖಂಡಿತಾ ಇದೇ ಇರಬೇಕು ಎಂದುಕೊಂಡು ಹತ್ತಿರ ಹೋದ. ಸುತ್ತಲೂ ಒಂದು ಬಾರಿ ಕಣ್ಣಾಡಿಸಿದ. ಅದು ತಾನು ಕೇಳಿ ತಿಳಿದಿದ್ದಕ್ಕಿಂತಲೂ ಇನ್ನೂ ಹೆಚ್ಚು ಭಯಂಕರವಾಗಿತ್ತು. ಸುತ್ತಲೂ ಬಿದ್ದಿದ್ದ ಗಿಡದ ಎಲೆಗಳು. ಒಳಗಡೆ ಮಲಗಿದ್ದ ನಾಯಿಗಳು ಕಣ್ಣಿಗೆ ಬಿದ್ದವು. ಇಡೀ ಕಟ್ಟಡವನ್ನು ಜೇಡರ ಬಲೆ ಸುತ್ತಿಕೊಂಡಿತ್ತು. ಬೋರ್ಡು ಮೂರು ಮೊಳೆಗಳನ್ನು ಕಳಚಿಕೊಂಡು ಒಂಟಿ ಮೊಳೆಯಲ್ಲಿ ಜೋತಾಡುತ್ತಿತ್ತು. ಇವನು ಹೆಜ್ಜೆ ಊರಿದಂತೆ ಚರಕ್... ಚರಕ್... ಎನ್ನುವ ಸದ್ದು. ಪೊದೆಗಳಲ್ಲಿಯ ಶಿಕಾಡಗಳು ಒಂದೇ ಸವನೇ ಚಿರ್... ಚಿರ್... ಎಂದು ಒದರುತಿದ್ದವು. ಒಬ್ಬನೇ ಒಬ್ಬ ಮನುಷ್ಯನ ಸುಳಿವಿಲ್ಲ. ಸುತ್ತಮುತ್ತಲೂ ಬಣಗುಡುತ್ತಿತ್ತು. ಅವತ್ತು ರವಿವಾರ ಬೇರೆ. ಇಡೀ ಊರು ಸಂತೆಗೆ ತೆರಳಿ ದಂಗಿತ್ತು. ಆ ಕಟ್ಟಡದ ಹಿಂದೆ ಸ್ವಲ್ಪ ದೂರದಲ್ಲಿ ಒಂದೆರಡು ಕ್ವಾರ್ಟರ್ಸ್‌ಗಳು ಕಂಡವು. ಒಂದಕ್ಕೆ ಬಹಳ ದಿನಗಳಿಂದ ಬೀಗ ಜಡಿದಂತೆ ತೋರುತ್ತಿತ್ತು. ಇನ್ನೊಂದು ಸಣ್ಣದು, ಅದಕ್ಕೆ ಬೀಗ ಇರಲಿಲ್ಲ. ಬದಿಯಲ್ಲಿ ಒಣಹಾಕಿದ ಬಟ್ಟೆಗಳು ಆ ಮನೆಯಲ್ಲಿ ಯಾರೋ ವಾಸವಾಗಿರುವುದನ್ನು ಖಾತ್ರಿಗೊಳಿಸಿದವು. ಹತ್ತಿರ ಹೋಗಿ ಬಾಗಿಲು ಬಡಿದ. ಒಳಗಿನಿಂದ ''ಬಂದೆ...'' ಅನ್ನೋ ಹೆಂಗಸಿನ ದನಿ. ಬಾಗಿಲು ತೆಗೆದು,

''ಯಾರು ಬೇಕಾಗಿತ್ತು...?''

''ಇದು ಕಂಪೌಂಡರ್ ಚೆನ್ನಪ್ಪನ ಮನೆ ಹೌದಲ್ಲೋ...?''

''ಹೌದು, ತಾವ್ಯಾರು...?''

''ನನ್ನ ಹೆಸರು ಸುಹಾಸ ಅಂತ. ಇಲ್ಲಿಗೆ ವರ್ಗವಾಗಿ ಬಂದಿರುವ ಡಾಕ್ಟರು'' ಅಂದ.

''ಸರ್, ನಮಸ್ಕಾರ್ರಿ, ನಮ್ಮ ಯಜಮಾನರು ಸಂತಿಗಿ ಹೋಗ್ಯಾರ್ರಿ... ಆ ಮನಿ ಚಾವಿ ಕೊಡಲೇನ್ರಿ..?'' ಎಂದಳು.

''ಆಯ್ತು ಕೊಡಮ್ಮಾ...'' ಎಂದ.

''ನೀವು ತುಸು ಹೊತ್ತ ಇಲ್ಲೇ ಕುಂದರ್ರಿ. ಬಾಳ ಹೊಲಸ ಆಗೈತಿ. ನಾ ಕಸ ಹೊಡದು ಕೊಡ್ತೀನಿ'' ಅಂತ ಹೇಳಿ ಕಸಪೊರಕೆ ತಗೊಂಡು ನಡೆದಳು. ಮನೆಯಲ್ಲಿ ಸುತ್ತಲೂ ಕಣ್ಣಾಡಿಸಿದ. ಎದುರಲ್ಲಿ ದೇವರ ಫೋಟೋ... ಅವುಗಳ ಬಾಜೂ ಗಂಡ ಹೆಂಡತಿಯ ಫೋಟೋ... ಆ ಫೋಟೋದಲ್ಲಿ ಇದ್ದವನೇ ಚೆನ್ನಪ್ಪ ಎಂದು ಖಾತ್ರಿ ಮಾಡಿಕೊಂಡ. ಒಂದರ್ಧ ಘಂಟೆಯ ನಂತರ ಚೆನ್ನಪ್ಪನ ಹೆಂಡತಿ ಮೈತುಂಬಾ ಧೂಳು ಮೆತ್ತಿಕೊಂಡ ಸ್ಥಿತಿಯಲ್ಲೇ ಬಂದು, ''ಸಾಯಿಬರ... ಕಸ ಹುಡಗೀನಿ, ನಿಮಗ ಮತ್ತ ಏನಾರೇ ಬೇಕಾದರ ಹೇಳ್ರಿ...'' ಅಂದಳು.

''ಓ.ಕೆ. ಸ್ವಲ್ಪ ನೀರು ಕೊಡಮ್ಮ ಸಾಕು'' ಎನ್ನುತ್ತ ಸುಹಾಸ, ತನ್ನ ಬ್ಯಾಗ್ ಸಮೇತ ಆ ಮನೆಯಲ್ಲಿ ಎಂಟ್ರಿ ಹೊಡೆದ. ಅವನ ಬೆನ್ನ ಹಿಂದೆಯೇ ಅವಳು ಒಂದು ಕೊಡ ನೀರನ್ನು ತೆಗೆದುಕೊಂಡು ಅಡುಗೆಮನೆಯಲ್ಲಿಟ್ಟು ಬಂದಳು.

''ಮತ್ತೇನರೇ ಬೇಕಾದರ ಕರೀರಿ ಸಾರ್. ಇಲ್ಲೇ ಇರ್ತೀನ್ರಿ'' ಎಂದು ನಡೆದಳು. ಸುಹಾಸ ಭಯಾನಕ ಚಿತ್ರದ ಕಥಾನಾಯಕನಂತೆ ಮೆಲ್ಲಗೆ ಹೆಜ್ಜೆಯಿಡುತ್ತಾ ಮಲಗುವ ಕೋಣೆಗೆ ಬಂದ. ಅಲ್ಲಿ ಒಂದು ಬೆತ್ತಲೆ ಮಂಚವಿತ್ತು. ಅದರ ಮೇಲೆ ಮಚ್ಛರದಾನಿ ಕಟ್ಟಲಿಕ್ಕೆಂದು ಸಣ್ಣ ಕಟ್ಟಿಗೆಯ ಚೌಕಗಳಿದ್ದವು. ಮಂಚದ ಕಾಲಿಗೆ ವಿ.ಆಯ್.ಪಿ. ಬನಿಯನ್ ಸ್ಟಿಕರ್ ಅಂಟಿಸಿದ್ದರು. ಗೋಡೆಗೆ ಒಂದು ಹಳೆಯ ಕ್ಯಾಲೆಂಡರ್ ಇತ್ತು, ಅದರ ಕೆಳಗೆ ಸಂಗಮ್ ಟೆಕ್ಸ್‌ಟೈಲ್ಸ್, ಶಿವಮೊಗ್ಗ ಎಂದಿತ್ತು. ಬಚ್ಚಲು ಮನೆಯಲ್ಲಿ ಒಂದು ಪ್ಲಾಸ್ಟಿಕ್ ಬಕೆಟ್ ಮತ್ತು ಒಂದೆರಡು ಮಗ್‌ಗಳಿದ್ದವು. ನಲ್ಲಿಯ ಟ್ಯಾಪ್ ತಿರುಗಿಸಿದ. ನೀರು ಬರ್... ಎಂದು ಬೀಳತೊಡಗಿತು. ಅಡುಗೆಮನೆಯಲ್ಲಿ ಒಂದೆರಡು ಮುಖ ಕೆಡಿಸಿಕೊಂಡ ಚಮಚೆ, ಬಟ್ಟಲು, ಒಂದು ಮುರಿದ ಸ್ಥಿತಿಯಲ್ಲಿದ್ದ ಬತ್ತಿ ಸ್ಟೋವ್, ಮೈಮಾಟವಿಲ್ಲದ ಕಡ್ಡಿ ಪೆಟ್ಟಿಗೆ ಇದ್ದವು. ಮಂಚದ ಕೆಳಗೆ ಹೀಗೇ ಕಣ್ಣುಹಾಯಿಸಿದ. ಒಂದೆರಡು ಖಾಲಿ ವಿಸ್ಕಿ ಬಾಟಲ್ ಗಳಿದ್ದವು. ಅತ್ತಿತ್ತ ಕಣ್ಣು ಹೊರಳಿಸಿದ. ಗ್ಲಾಸುಗಳು ಕಾಣಸಲಿಲ್ಲ, ಒಂದು ಹರಿದ ಚಾಪೆಯೂ ಅಲ್ಲಿತ್ತು. ಡ್ರಾಯಿಂಗ್ ರೂಮಲ್ಲಿ ಕುಳಿತುಕೊಳ್ಳಲು ಎರಡು ಬೆತ್ತದ ಚೇರ್‌ಗಳಿದ್ದವು. ಅವೂ ಕೂಡ ಅಂಗವಿಕಲ ಸ್ಥಿತಿಯಲ್ಲಿದ್ದವು. ಇಲ್ಲಿ ಕಂಪೌಂಡರ್ ಆಗಿ ಕೆಲಸ ಮಾಡೋ ಚೆನ್ನಪ್ಪ ಇದೇ ಊರಿನವನು. ಮೊದಲು ದಿನಗೂಲಿ ನೌಕರನೆಂದು ಸೇರಿಕೊಂಡು ಆಮೇಲೆ ಕಾಯಂ ಆದವನು. ಸುಮಾರು ಐದು ವರ್ಷಗಳಿಂದಲೂ ಅವನು ಒಂದೇ ಒಂದು ದಿನ ಈ ದವಾಖಾನೆಯ ಬಾಗಿಲು ತೆಗೆದಿದ್ದಿಲ್ಲ. ಬದಲಾಗಿ ಅದನ್ನು ಬಿಟ್ಟು ಸಣ್ಣ ಪ್ರಮಾಣದಲ್ಲಿ ಬೇರೆ ದಂಧೆಯನ್ನೇ ಶುರುಹಚ್ಚಿಕೊಂಡಿದ್ದ. ಚನ್ನಪ್ಪ ತನ್ನ ಹಿಕಮತ್ ಬಳಸಿಕೊಂಡು ಇಲ್ಲಿ ಯಾವ ವೈದ್ಯರೂ ನಿಲ್ಲಲಾರದಂಗ ಮಾಡೂದರೊಳಗ ಸಕ್ಸಸ್ ಆಗಿದ್ದ.

* * *

ಆ ದಿನದಿಂದ ಆ ಕಟ್ಟಡಕ್ಕೆ ಮರುಜನ್ಮ. ದವಾಖಾನೆಯ ಹೊಸ ಬೋರ್ಡು ಕಟ್ಟಡದ ಎದೆಯ ಮೇಲೆ ರಾರಾಜಿಸುತ್ತಿತ್ತು. ಸುತ್ತಲಿನ ಕಸಕಡ್ಡಿಗಳನ್ನೆಲ್ಲಾ ಹೆಕ್ಕಿ ಸ್ವಚ್ಛ ಮಾಡಲಾಗಿತ್ತು. ಬಾಗಿಲು ತೆಗೆದು ಅದಾಗಲೇ ಏಳೆಂಟು ದಿನಗಳಾಗಿದ್ದರೂ ಇನ್ನೂ ಒಬ್ಬನೇ ಒಬ್ಬ ತನ್ನ ದನಕರುಗಳನ್ನು, ಸಾಕುಪ್ರಾಣಿಗಳನ್ನು ತಗೊಂಡು ಹತ್ತಿರ ಸುಳಿದಿರಲಿಲ್ಲ. ಕಾರಣವಿಷ್ಟೇ...! ಇನ್ನೂ ಊರ ಜನರ ತಲೆಯಲ್ಲಿ ದೆವ್ವಿನ ತರಾವರಿ ಕಥೆಗಳೇ ತುಂಬಿಕೊಂಡಿದ್ದವು. ಒಂದು ದಿನ ಹೀಗೇ ದವಾಖಾನೆ ಬದಿ ಸುಳಿದ ಊರ ಹಿರಿಯನೊಬ್ಬ ''ತಮ್ಮಾ... ಸುಮ್ನೇ ಯಾಕ ಇಲ್ಲಿ ಬಂದೀಯಪ್ಪಾ... ಇದು ಬಾಳ ಸುಮಾರ ಜಾಗ.. ಐದಾರು ಸಾರಿ ನಾನೇ ಈ ಕಣ್ಣಿಲೇ ಇಲ್ಲಿ ರಾತ್ರಿ ಕೊಳ್ಳಿದೆವ್ವ ತಿರುಗೂದು ನೋಡೀನಿ.'' ಅಂದಾಗ ಸುಹಾಸ, ''ನಾವೆಲ್ಲಾ ಸುಡುಗಾಡಲ್ಲಿ ಮಲಗಲಿಕ್ಕೂ ರೆಡಿ ಆಗಿ

ಬಂದೀವಿ. ನೋಡೋಣ, ಅದ್ಯಾ ದೆವ್ವ ಬರುತೈತಿ ಬರಲಿ'' ಅಂದಾಗ ಆ ಹಿರಿ ಮನುಷ್ಯಾ, ''ನಿಮಗೆಲ್ಲಾ ತಿಳಿಸಿ ಹೇಳೂ ತ್ರಾಣ ನಮ್ಮದಲ್ಲ..'' ಅನ್ನೋಂತ ಮೆಲ್ಲಗ ಜಾಗಾ ಖಾಲಿ ಮಾಡಿದ್ದ

ಚೆನ್ನಪ್ಪನೂ ಆ ಮುದುಕನ ಜೋಡಿ ಕೂಡಿಸೋ... ಅನ್ನೂದು ಮಾಡೂದನ್ನ ನೋಡಿ ಸುಹಾಸ್,

''ನೀ ಇನ್ನ ಮ್ಯಾಲ ಸುತ್ತಮುತ್ತ ಇರೋ ಹಳ್ಳಿಗೆ ಹೋಗಿ ದವಾಖಾನೆ ಶುರು ಆದ ಬಗ್ಗೆ ಡಂಗುರ ಹೊಡಿಸಿ ಬರಬೇಕು'' ಅಂತ ಹೇಳಿದ್ದು ಅಂವಗ ಬಾಳ ಬಿರಿ ಬಂದಂಗ ಆಗಿತ್ತು. ಡಾಕ್ಟರನ್ನ ಹ್ಯಾಂಗರೇ ಮಾಡಿ ಇಲ್ಲಿಂದ ಓಡಿಸಬೇಕು ಅಂತ ಮಾಡಿದ ಪ್ಲ್ಯಾನೆಲ್ಲಾ ರಿವರ್ಸ್ ಆಗತಾ ಇದ್ವು. ಒಂದು ದಿನ ಲಿಂಬೆಹಣ್ಣಿಗೆ ಕುಂಕುಮ ಹಚ್ಚಿ ದವಾಖಾನೆ ಬಾಗಿಲದಾಗ ತಾನೇ ಇಟ್ಟು, ಬಹಳ ಹೆದರದಂಗ ಮಾಡಿ ಅದನ್ನು ಮುಟ್ಟಲಿಕ್ಕೂ ಹಿಂದೇಟು ಹಾಕದಾಗ ಡಾಕ್ಟರ್ ಸುಹಾಸ ಅದನ್ನು ಕೈಯಿಂದ ಎತ್ತಿ ಒಗೆಯುವುದನ್ನು ನೋಡಿ, ಈ ಡಾಕ್ಟರ್ ಸಾಮಾನ್ಯ ದವನಲ್ಲ ಅನ್ನೂದು ಅಂವಗೂ ಗೊತ್ತಾಗಿ ಸುಮ್ಮ ಅಂವಾ ಹೇಳದಂಗ ಹೊಂದಕೊಂಡು ಹೋಗೋದು ಚುಲೋ ಅಂತ ರಾಜಿ ಆಗಿ ಒಂದು ದಾರಿಗೆ ಬಂದಿದ್ದ.

*　　　　*　　　　*

ಬಹಳ ದಿನಗಳ ಮ್ಯಾಲ ಒಬ್ಬ ಬಾಜೂ ಹಳ್ಳಿ ರೈತ ತನ್ನ ಎರಡೂ ಎತ್ತುಗಳನ್ನು ಹಿಡಕೊಂಡು ಬಂದ. ಅಂತೂ ಜನ ಬರಲಿಕ್ಕೆ ಶುರು ಮಾಡಿದರು ಅಂಥಾ ಸುಹಾಸ್‌ಗೆ ಖುಷಿ ಆಯ್ತು. ಲಗುಬಗೆಯಿಂದ ಆ ಎತ್ತುಗಳನ್ನು ಪರೀಕ್ಷೆ ಮಾಡಿದ.

''ಏನು ಸಮಸ್ಯೆ..?''

''ಸಾಯಿಬರೇ... ನಿನ್ನೆ ರಾತ್ರಿಯಿಂದ ಭೇಷನ್ನಾಗೆ ಮೇವು ತಿನ್ಲಿಕ್ಕೇ ತಯಾರಿಲ್ಲ''

''ಇಂಜಕ್ಷನ್ ಕೊಡ್ತೀನಿ... ಒಂದಷ್ಟು ಗುಳಿಗಿ ಬರೀತೀನಿ ಹಾಕು. ಸರಿ ಆಗತೈತಿ'' ಎಂದು ಎರಡೂ ಎತ್ತುಗಳಿಗೆ ಒಂದೊಂದು ಇಂಜಕ್ಷನ್ ಕೊಟ್ಟ. ಕ್ಷಣ ಹೊತ್ತು ಆ ರೈತ ಅಲ್ಲೇ ಕುಳಿತ. ಆಮೇಲೆ, ''ಸಾಯಿಬರ ಈಗ ಕಡಿಮೆ ಐತೇನು ನೋಡ್ರಿ'' ಅಂದ.

''ಅಲ್ಲ ಮಾರಾಯಾ... ಇಂಜಕ್ಷನ್ ಕೊಟ್ಟಿದ್ದೇ ಈಗ. ಇಷ್ಟು ಬೇಗ ಕಡಿಮೆ ಆಗಲಿಕ್ಕೆ ಇದೇನು ಜಾದೂನಾ..? ಇವತ್ತು ರಾತ್ರಿ ಕಡಿಮೆ ಆಗತೈತಿ. ಈ ಗುಳಿಗೆ ತರಿಸಿ ಹಾಕು'' ಎಂದು ಚೀಟಿ ಅವನ ಕೈಗೆ ಕೊಟ್ಟ.

''ಅಂದಾಜ್ ಇದಕ್ಕ ಎಷ್ಟು ಆಗತೈತರೀ ಸಾಯಿಬರ ?''

''ಏನಿಲ್ಲಂದರೂ ನಲವತ್ತು ರೂಪಾಯಿ ಆಗ್ಬೋದು...''

ಅವನು ಮುಖ ಒಣಗಿಸಿದಂಗೆ ಮಾಡಿ,

''ಅಟ್ಟು ರೊಕ್ಕ ನನ್ನ ಹತ್ರ ಇಲ್ಲಲ್ರೀ...'' ಅಂದ. ಎಷ್ಟೇ ಆಗಲಿ ಈ ಆಸ್ಪತ್ರೆಗೆ ಇವನೇ ಮೊದಲು ಬಂದವನು. ಹೋಗಲಿ ಎಂದು ಸುಹಾಸ ತನ್ನ ಕಿಸೆಯಿಂದ ನಲವತ್ತು ರೂಪಾಯಿ ಅವನ ಕೈಗಿಟ್ಟು, ''ನೋಡು ನಾನೇ ಕೊಟ್ಟೆ ಅಂತ ಊರಲ್ಲಿ ಯಾರಿಗೂ ಹೇಳಬ್ಯಾಡ'' ಎಂದು ಹೇಳಿಕಳುಹಿಸಿದ.

''ಸಾಯಿಬರ, ಈ ಜನ ಹಗರಿಲ್ಲ... ಬೆರಳು ತೋರಸದರ ಕೈನೇ ನುಂಗೂ ಮಕ್ಕಳು. ಇವರನ್ನು ಹಚಗೋಬ್ಯಾಡರಿ'' ಅಂತ ಸುಹಾಸಗ ಕಂಪೌಂಡರ್ ಚೆನ್ನಪ್ಪ ಕಿವಿಮಾತು ಹೇಳಿದ್ದ. ಅಂವಾ ಹೇಳಿದ್ದರಲ್ಲಿ ಸತ್ಯಾನೂ ಇತ್ತು. ಬರೀ ತಮ್ಮ ದನಕರುಗಳಿಗೆ ಮಾತ್ರವಲ್ಲ ತಮಗೂ ತುಸು ಅರಾಮಿಲ್ಲ, ಯಾವದರೇ ಗುಳಿಗಿ ಇದ್ರ ಕೊಡ್ರಿ ಅಂತ ಕೇಳಿ ಡಾಕ್ಟರನ್ನ ದಿಗಿಲು ಹಿಡಿಸಿದ ಜನ ಅವರು. ಈಗೀಗ ರಾತ್ರಿ, ಸವಾರಾತ್ರಿ ಡಾಕ್ಟರನ್ನ ಕರೀಲಿಕ್ಕ ಶುರು ಮಾಡಿದರು.

''ಡಾಕ್ಟ್ರ ಎಮ್ಮಿ ಈಯಾಕತ್ತೈತಿ ಬರ್ರಿ... ಕುರಿ ಹಾಲೇ ಕೊಡುವಲ್ಲದರೀ.. ಎಮ್ಮೀ ಕರುವಿಂದು ತಲಿ ಸಿಗಿಬಿದ್ದೈತಿ... ಎತ್ತಿಗ್ಗಿ ಹುಳ ಮುಟ್ಟೈತಿ...'' ...ಹಿಂಗ ನಾನಾ ನಮೂನಿ ಕಾರಣ. ಹಿಂಗೇ ಒಂದು ಸಾರಿ ದೊಡ್ಮನಿ ಸಂಗಣ್ಣೋರ ಎಮ್ಮಿ ಕರ ಹಾಕೂವಾಗ ಅದು ಸತ್ತು ಹೊರಗ ಬಂತು. ಅದಕ್ಕ ಕಾರಣ ಬ್ಯಾರೇನೇ ಇತ್ತು. ಅವರು ಏನು ಹೇಳಿದರೂ ಕೇಳಲಿಕ್ಕ ತಯಾರಿಲ್ಲ. ನೀವೇ ಹಂಗ ಮಾಡದಿರಿ ಅನ್ನೋ ನಿಮಿತ್ತ ಡಾಕ್ಟರ್ ಮ್ಯಾಲ ಹೊರಿಸಿ, ಐದು ಸಾವಿರ ರೂಪಾಯಿ ಉಚ್ಚಿದ್ದರು. ಅವಾಗಿನಿಂದ ಡಾಕ್ಟರು ಈ ಊರ ಜನ ಹ್ಯಾಂಗ ಅಂತ ತಿಳಕೊಂಡಿದ್ದರು. ಅದು ಅವರ ವೃತ್ತಿ ಬದುಕಿನೊಳಗ ಒಂದು ಪಾಠ ಆಗಿತ್ತು.

ಹಿಂಗೇ ಒಂದು ದಿನ ಮಧ್ಯ ರಾತ್ರಿಯೊಳಗ ಒಂದು ಮುದುಕಿ ಡಾಕ್ಟರ್ ಮನಿ ಬಾಗಿಲಕ ಬಂದು ಹೊರಗ ನಿಂತು, ''ಸಾಹೇಬರ... ಸಾಹೇಬರ...'' ಅಂತ ಕೂಗಿದಳು. ಡಾಕ್ಟರ್ ಲೈಟ್ ಹಾಕಿ ಕಣ್ಣು ತಿಕ್ಕೋಂತ ಹೊರಗ ಬಂದರು.

''ಏನು ವಿಷಯ ಅಜ್ಜೀ..?''

''ನಮ್ಮ ಎಮ್ಮಿ ಕರ ಹಾಕಾಗ ಅದರ ಕರಿನ ತಲಿ ಸಿಕ್ಕೊಂಡೈತಿ. ಹ್ಯಾಂಗರೇ ಮಾಡಿ ನನಗ ನನ್ನ ಎಮ್ಮಿ ಉಳಿಸಿಕೊಡ್ರಿ. ನನಗ ಕರ ಬ್ಯಾಡ, ಎಮ್ಮಿ ಉಳದರ ಸಾಕು... ನನ್ನ ಗಂಜಿಗಿ ಆಸರ ಅಂದ್ರ ಆ ಎಮ್ಮಿ. ಅದೇ ಹೋಗಿಬಿಟ್ಟರ ನಾ ಬದುಕೂದೇ ವಜ್ಜ ಆಗತೈತೀ'' ಅಂತ ಕಣ್ಣೀರ ಸುರಸದಳು. ಸುಹಾಸ ತುಸು ಸೆಂಟಿಮೆಂಟಲ್ ಮನುಷ್ಯ.

''ಸುಮ್ಮಿರಬೇ, ಅದ್ಯಾಕ ಅಳತೀ ? ಏನೂ ಆಗಂಗಿಲ್ಲ, ನೋಡೋಣ'' ಎಂದು ಶರ್ಟ್ ಹಾಕ್ಕೊಂಡು ಹೊರಟ. ಕರು ಸಿಗಿಬಿದ್ದದ್ದು ನೋಡಿ ಅದನ್ನು ಹೇಗೆ ಪಾರು ಮಾಡುವದೆಂದು ಯೋಚಿಸಿ, ಕೈಗೆ ಗ್ಲೌಸ್ ಹಾಕಿ ಆ ಕರುವನ್ನು ಸರಿ ಮಾಡಿ ಹೊರತೆಗೆದ. ಆ ಕರು, ಎಮ್ಮೆ ಎರಡೂ ಆರೋಗ್ಯದಿಂದಿದ್ದು. ಆ ಮುದುಕಿ ಖುಷಿಯಿಂದ, ''ಯಪ್ಪಾ ... ದೇವ್ರು ಬಂದಂಗ ಬಂದು ನನ್ನ ಎಮ್ಮಿ, ಕರ ಎರಡೂ ಉಳಸಿಕೊಟ್ಟಿ. ನಾ ಸಾಯೂಮಟ ನಿನಗ ಹಾಲು ಕೊಡ್ತೀನಿ. ನೀ ಬ್ಯಾಡ ಅನಬಾರದು'' ಅಂತ ಹೇಳಿದಳು.

''ನೋಡು ನನ್ನ ಕೆಲಸಾ ನಾ ಮಾಡೀನಿ. ನೀ ಹಾಲು ಕೊಡೂದು ಬ್ಯಾಡ ಅನ್ನೋದಿಲ್ಲ ಆದರ ರೊಕ್ಕ ಮಾತ್ರ ಬ್ಯಾಡ ಅನಬ್ಯಾಡ. ಚುಲೋ ಹಾಲು ಕೊಟ್ಟರೆ ಸಾಕು, ಅಷ್ಟೇ'' ಅಂದ.

''ಅಯ್ಯ, ಯಪ್ಪಾ ಒಂದೇ ಒಂದು ಹನಿ ನೀರ ಹಾಕುವಂಗಿಲ್ಲ, ನಿನ್ನ ಎದುರಿಗೇ ಹಿಂಡಿ ಕೊಡ್ತೀನಿ.''

''ಆಯ್ತು ನಾ ಬರ್ತೀನಿ'' ಎಂದು ಸುಹಾಸ ಮನೆ ಕಡೆ ನಡೆದ. ಮೂರು ವರ್ಷ ಆ ಹಳ್ಳಿಯಲ್ಲಿ ಸೇವೆ ಸಲ್ಲಿಸಿದ. ನಾಲ್ಕನೇ ವರ್ಷ ಸುಹಾಸನಿಗೆ ಹಾನಗಲ್ ಬಳಿ ಇರೋ ಹಳ್ಳಿಗೆ ಟ್ರಾನ್ಸ್‌ಫರ್ ಆಯ್ತು. ಅದಾಗಲೇ ದೆವ್ವದ ಕಥಿ ಇರೋ ದವಾಖಾನೆಯಲ್ಲಿ ಜನರಿಂದ ಗಿಜಿಬಿಜಿ ಅನ್ನೋ ವಾತಾವರಣ ಸೃಷ್ಟಿಯಾಗಿತ್ತು. ಯಾರ ಬಾಯಲ್ಲೂ ಈಗ ಅಲ್ಲಿ ದೆವ್ವವಿದೆ ಅನ್ನೋ ಮಾತಿಲ್ಲ. ಆ ಊರ ಜನ ಸುಹಾಸನನ್ನು ಬಿಡಲು ತಯಾರಿಲ್ಲ. ಆದರೆ ಅನಿವಾರ್ಯ. ಹೋಗಲೇಬೇಕು. ಅಂತೂ ಇಡೀ ಊರ ಜನರ ಅಪಾರ ಪ್ರೀತಿ - ವಿಶ್ವಾಸ ಗಳಿಸಿ ಸುಹಾಸ ಮುಂದಿನ ಸೇವೆಗಾಗಿ ಇನ್ನೊಂದು ಹಳ್ಳಿಯೆಡೆಗೆ ನಡೆದ.

*　　　　*　　　　*

ಆ ಹಳ್ಳಿಗೆ ಬಂದು ಆರು ತಿಂಗಳಾಗಿತ್ತು. ಅಲ್ಲಿಯೂ ಸುಹಾಸ ಊರ ಜನರ ಪ್ರೀತಿಗೆ ಪಾತ್ರನಾಗಿದ್ದ. ಸುತ್ತಮುತ್ತಲಿನ ಯಾವದೇ ಹಳ್ಳಿಯಲ್ಲಿ ಏನೇ ತೊಂದರೆಯಿರಲಿ ಹೋಗಿ ಅಟೆಂಡ್ ಮಾಡಿ, ತನ್ನ ಕೈಲಾದ ಮಟ್ಟಿಗೆ ಸಹಾಯ ಮಾಡಿ ಬರುವ ಅವನ ಗುಣ, ಊರ ಜನರ ಮಾತಾಯಿತು. ಆ ದಿನ ಬೆಳಿಗ್ಗೆ ಹಾನಗಲ್ ಬಸ್ ನಿಲ್ದಾಣದಲ್ಲಿ ಸುಹಾಸ ಹುಬ್ಬಳ್ಳಿಗೆ ಹೋಗುವ ಬಸ್ ಕಾಯುತ್ತಾ ನಿಂತ ಗಳಿಗೆ. ಇಡೀ ನಿಲ್ದಾಣ ಕಿರ್ರೋ... ಬರ್ರೋ... ಎನ್ನುತ್ತಿತ್ತು. ಕುಳಿತುಕೊಳ್ಳಲು ಎಲ್ಲೂ ಜಾಗವಿರಲಿಲ್ಲ. ಪಕ್ಕದ ಅಕ್ಕಿ-ಆಲೂರಿನ ಜಾತ್ರೆ ಬೇರೆ. ಹೀಗಾಗಿ ಜನ ಕಿಕ್ಕಿರಿದು ತುಂಬಿದ್ದರು. ಎಷ್ಟು ಬಸ್ಸುಗಳು ಬಂದರೂ... ಮೆಟಡೋರ್‌ಗಳು ಬಂದರೂ ಬರುತ್ತಿದ್ದ ಜನಕ್ಕೆ ಸಾಲುತ್ತಿರಲಿಲ್ಲ. ಇದೇ ವೇಳೆಯಲ್ಲಿ ಅಂಗವಿಕಲನೊಬ್ಬ ತನ್ನ ದೈನೇಸಿ ಸ್ಥಿತಿಯಲ್ಲಿ ಜನರ ಮಧ್ಯೆಯೇ ತೆವಳುತ್ತ ಭಿಕ್ಷೆ ಬೇಡುತ್ತಿದ್ದ. ಸುಹಾಸ ಮನದಲ್ಲಿಯೇ ''ಇವನಿಗೆ ದುಡಿಯಲಾಗದು. ಹೀಗಾಗಿ ಬೇಡುತ್ತಿದ್ದಾನೆ. ಅಲ್ಲೇ ಹತ್ತಿರದಲ್ಲಿದ್ದ ಎಲ್ಲಾ ನೆಟ್ಟಗಿರುವ ಓರ್ವ ಹೆಂಗಸಿಗಿಂತಲೂ ಇವನಿಗೆ ಒಂದೆರಡು ರೂಪಾಯಿ ಕೊಡುವದರಲ್ಲಿ ಒಂದರ್ಥವಿದೆ'' ಎಂದುಕೊಂಡು ಅವನಿಗೆ ಒಂದು ರೂಪಾಯಿ ಕೊಟ್ಟ. ಅವನು ಹಾಗೇ ಕುಂಟುತ್ತಾ ನಿಲ್ದಾಣದ ಹೊರಗೆ ತೆರಳಿ, ತನಗೆ ಆಸರೆಯಾಗಿದ್ದ ಎರಡೂ ಕೋಲುಗಳನ್ನು ಕೈಬಿಟ್ಟು ಇದ್ದಕ್ಕಿದ್ದಂತೆ ನೆಟ್ಟಗಾಗಿದ್ದ. ಇದನ್ನು ಗಮನಿಸುತ್ತಿದ್ದ ಸುಹಾಸ ಕ್ಷಣಹೊತ್ತು ವಿಚಲಿತನಾದ. ಕಣ್ಣಿಗೆ ಕಾಣುವದೆಲ್ಲಾ ಸತ್ಯವಲ್ಲ ಎಂದು ಅವನ ಮನಸು ನುಡಿಯಿತು. ಅಷ್ಟರಲ್ಲಿ ಹಿಂದಿನಿಂದ ಯಾವದೋ ಒಂದು ಕೈ ಸುಹಾಸನನ್ನು ಟಚ್ ಮಾಡಿತು. ಹೊರಳಿ ನೋಡಿದರೆ ಒಂದು ಅಜ್ಜಿ ಬೊಚ್ಚುಬಾಯಿ ತೆಗೆದು ಧನ್ಯತೆಯಿಂದ ನಗುತ್ತಿತ್ತು.

''ಸಾಹೇಬರೇ ನನ್ನ ನೆನಪ ಐತೇನ್ರೀ..?'' ಎಂದು ಕೇಳಿದಳು. ಸುಹಾಸನಿಗೆ ತಟ್ಟನೇ ಎಮ್ಮೆ... ಕರು... ಹೆರಿಗೆ... ದೆವ್ವಿನ ಕಥೆಯ ಹಳ್ಳಿ ಎಲ್ಲವೂ ನೆನಪಾದವು.

''ಓ ನೆನಪಾಯಿತು. ಅದೇ ನಿನ್ನ ಎಮ್ಮೆ ಈಯುವಾಗ ಬಂದಿದ್ದೆ'' ಅಂದ. ನಿಲ್ದಾಣದಲ್ಲಿ ಇವರ ಆಜೂಬಾಜೂ ನಿಂತ, ಕುಳಿತ ಜನ ಇವರಿಬ್ಬರ ಮಾತುಕತೆಯನ್ನು ಚಿತ್ತ ಕೊಟ್ಟು ಕೇಳುವಂತೆ ಗಮನಿಸುತ್ತಿದ್ದರು. ಅಜ್ಜಿ ಕಣ್ಣೀರು ತುಂಬಿಕೊಂಡು, ''ನೀವು ನನ್ನ ಮತ್ತು ನನ್ನ ಎಮ್ಮೆ ಪಾಲಿನ ದೇವರು !'' ಅಂದಳು.

''ಅಷ್ಟೆಲ್ಲಾ ದೊಡ್ಡ ಮಾತು ಯಾಕ...?''

''ಅಯ್ಯ ಹಂಗಂದರ ಹ್ಯಾಂಗರೀ... ನಿಮ್ಮ ಪುಣ್ಯದಿಂದೇ ನಾನು... ನನ್ನ ಎಮ್ಮಿ ಇವತ್ತು ಬದುಕೀವಿ.''

''ಅದು ಸರಿ, ನೀ ಹ್ಯಾಂಗ ನನ್ನ ಗುರುತು ಹಿಡದಿ ? ಇನ್ನೂ ಮರತಿಲ್ಲಲ್ಲ...!''

''ಅದ್ಯಾಂಗ ಮರೀತಿರಿ ಸಾಹೇಬರ... ನನ್ನ ಎಮ್ಮೀ ಮುಖಾ ನೋಡದಾಗೊಮ್ಮ ನಿಮ್ಮ ನೆನಪ ಆಗತೈತಿ...'' ಅಂದಳು.

ಡಾಕ್ಟರ್‌ಗ ಏನು ಮಾತಾಡಬೇಕಂತ ಗೊತ್ತಾಗದೇ ಮನಸಿನಲ್ಲಿ ತನ್ನ ಮುಖಾ ಅಜ್ಜೀ ಎಮ್ಮೀ ಮುಖದಂಗ ಇದ್ದರ... ನೆನಸಿಕೊಂಡು ನಗು ಬಂತು. ''ಅಜ್ಜೀ, ಬಸ್ ಬಂತು'' ಎಂದು ಆ ಜನಜಂಗುಳಿಯಿಂದ ಬಸ್ಸಿನೆಡೆಗೆ ನಡೆದ.

ಎಸ್. ಬಿ. ಜೋಗುರ
೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಶ್ರೀನಗರ, ಧಾರವಾಡ - ೫೮೦ ೦೦೩.

# ಹೊಸ ಓದು



## ಸಂಶೋಧನೆ – ಏನು ? ಏಕೆ ? ಹೇಗೆ ?

ಎಂ. ಚಂದ್ರ ಪೂಜಾರಿ

**ಪುಟ : viii + ೨೬೨**

ಬೆಲೆ : ರೂ. ೧೨೦

**ಪ್ರಸಾರಾಂಗ**, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ - ೫೮೩ ೨೭೬

ಸಾಮಾಜಿಕ ಸಮಸ್ಯೆಗಳ ಮೇಲೆ ಹೆಚ್ಚಿನ ಬೆಳಕು ಬೀರುವ ಒಂದು ಸಂಶೋಧನಾ ಅಧ್ಯಯನದ ಕ್ರಮ ಹೇಗೆ ಎಂದು ಚಿಂತಿಸಿದ ಫಲವಾಗಿ ಈ ಕೃತಿ ಮೂಡಿಬಂದಿದೆ. ಆರಂಭಿಕ ಸಂಶೋಧಕರಿಗೆ ಹಲವು ಸಮಸ್ಯೆಗಳು ಕಾಡುತ್ತಾ ತಾನು ಶೋಧಿಸಬೇಕಾದ ಸತ್ಯದ ಬೇರುಗಳೆಲ್ಲಿವೆಯೆಂದು ಆತ ಸ್ವತಃ ಅಗೆದು ನೋಡಬೇಕಾಗುತ್ತದೆ. ಇಲ್ಲವಾದಲ್ಲಿ ಇತರರು ಏನು ಶೋಧಿಸಿದರೋ ಅಷ್ಟಕ್ಕೇ ತಾನೂ ನಿಲ್ಲಬೇಕಾಗುತ್ತದೆ, ಒಂದು ರೀತಿ ರಿಕಾರ್ಡ್ ಬ್ರೇಕ್ ಆಗಿರುವ ಸಂಖ್ಯೆಯ ಹತ್ತಿರ ಬಂದು ನಿಂತಂತೆ. ಮುರಿದು ಮುಂದೆ ಹೋದರೆ ಮಾತ್ರ ಮಹತ್ವ. ಸಾಮಾಜಿಕ ಪಲ್ಲಟಗಳಾದಾಗ ಕಾಲದ ಚರಿತ್ರೆಯಲ್ಲಿ ಮೌಲ್ಯಗಳು ಅದಲು ಬದಲಾದಾಗ ಸಂಶೋಧಕನನ್ನು ಅವು ಕಂಗೆಡಿಸುತ್ತವೆ. ಸಮಾಜ ವಿಜ್ಞಾನದ ಸಂಶೋಧಕನಿಗೆ ಇದರ ತೀವ್ರತೆ ಹೆಚ್ಚು. ಸಂಶೋಧನೆಗಳಿಗೆ ಎಲ್ಲ ಕ್ಷೇತ್ರಗಳಲ್ಲೂ ಎಲ್ಲರಿಗೂ ಮುಕ್ತದ್ವಾರ. ಯಾವ ಕ್ಷೇತ್ರದ್ದೇ ಆಗಿರಲಿ, ಸಂಶೋಧನೆಯೊಂದು ಜನೋಪಯೋಗಿಯಾಗಿರಬೇಕಲ್ಲದೆ, ಕೇವಲ ಸಂಶೋಧಕನ ಸ್ಥಾನಮಾನ ಎತ್ತರಿಸುವ, ಮುಂಬಡ್ತಿ - ಕಾಯಂ ಉದ್ಯೋಗದ ಮೆಟ್ಟಿಲಾದ ಪಿಎಚ್.ಡಿ. ಪದವಿಗಳಿಕೆ ಮಾತ್ರ ಉದ್ದೇಶವಾಗಿರುವ ಸಂಶೋಧನೆಗಳಿಂದೇನು ಪ್ರಯೋಜನ? ಸಂಶೋಧನಾ ಪ್ರಬಂಧ ಮಂಡಿಸುವ ಎಲ್ಲರಿಗೂ ಡಾಕ್ಟರೇಟ್ ನೀಡುವ ಇಂದಿನ ಸನ್ನಿವೇಶದಲ್ಲಿ 'ಸಂಶೋಧನೆ' ಎಂಬುದರ ನಿಜವಾದ ಬೆಲೆಯನ್ನು, ಅರ್ಥವನ್ನು ಡಾ|| ಎಂ. ಚಂದ್ರ ಪೂಜಾರಿ ತಿಳಿಸಿದ್ದಾರೆ. ಈ ಪುಸ್ತಕದ ಓದು ನಿಜವಾಗಿಯೂ ಸ್ವಾರಸ್ಯಕರ, ಮಾಹಿತಿಗಳ ಆಕರ.

## ಗೀತಾ ನಾಗಭೂಷಣ : ಮಹಿಳಾ ಮಾರ್ಗ

ಸಂ. : ಡಾ|| ಕೆ. ಷರೀಫಾ, ಬಸವರಾಜ ಸೂಳಿಭಾವಿ

**ಪುಟ : ೧೨೮** **ಬೆಲೆ : ರೂ. ೮೦**

**ಲಡಾಯಿ ಪ್ರಕಾಶನ**, ನಂ. ೨೧, ಪ್ರಸಾದ ಹಾಸ್ಟೆಲ್, ಗದಗ - ೫೮೨ ೧೦೧

ನಿರ್ಗತಿಕ ಮಹಿಳೆಯರ ನೋವಿನ ಬದುಕಿಗೆ, ಅಕ್ಷರವಿಲ್ಲದ ಅಸಹಾಯಕ ಹಳ್ಳಿಯ ಮುಗ್ಧ ಹೆಣ್ಣುಗಳ ಆರ್ತನಾದಕ್ಕೆ, ಮುಖ್ಯವಾಗಿ ಪುರುಷ ನಿರ್ಮಿತ ಸಂಚುಗಳ ಕೋಟೆಯೊಳಗೆ ಬಂದಿಯಾಗಿ ಲೈಂಗಿಕ ಶೋಷಣೆಗೆ ಬಲಿಯಾಗುವ ಸ್ತ್ರೀ ಎಂಬ ಮೂಕಕಂಠಗಳಿಗೆ ದನಿ ನೀಡಿದವರು ಗೀತಾ ನಾಗಭೂಷಣ. ಮೊದಲಿನಿಂದಲೂ ಅವರದ್ದು ಬಂಡಾಯ- ಆಕ್ರೋಶ ಮಿಶ್ರಿತ ಸ್ತ್ರೀಪರ ಬರವಣಿಗೆ. ತನ್ನ ನೆಲದ ಇಂಥ ದುರ್ಭರ ಬದುಕನ್ನು ಕಣ್ಣಳತೆಯಲ್ಲಿ ಪ್ರತ್ಯಕ್ಷ ನೋಡದೆ, ಅನುಭವಿಸದೆ ಕಾಲ್ಪನಿಕವಾಗಿ ಎಂದಿಗೂ ಬರೆಯಲಾಗುವುದಿಲ್ಲ. ಪುರುಷರು ನಿರ್ದೇಶಿಸಿದಂತೆ ಸ್ತ್ರೀಯರಿರಬೇಕೆಂಬ ಸ್ಥಾಪಿತ ಮೌಲ್ಯಕ್ಕೆ ಪ್ರತಿಭಟಿಸುವಂಥ, ಹೊಸ ಮೌಲ್ಯವೊಂದರ ಸ್ಥಾಪನೆ ಅಗತ್ಯ ಇರುವ ಕಾಲವಿದು. ವ್ಯವಸ್ಥೆಯ ಒಂದು ಭಾಗವೆಂಬಂತೆ ಸಂಪ್ರದಾಯದ ಹೊರೆ ಹೊರೆಸಿ ಯಾರದೋ ಲಾಭಕ್ಕಾಗಿ ನಡೆವ ಬೆತ್ತಲೆ ಸೇವೆಯಂಥ ಪ್ರಕರಣಗಳನ್ನು ಧೈರ್ಯವಾಗಿ ಬರೆದು ಪ್ರಕಟಿಸದಿದ್ದರೆ, ಎಚ್ಚರಿಸದಿದ್ದರೆ ಸ್ತ್ರೀಗೆ ಖಂಡಿತ ಉಳಿಗಾಲವಿಲ್ಲವೆಂಬುದು ಖರೇ ಮಾತು. ಇಂತಹುದೇ ಸಾಮಾಜಿಕ ಅನಿಷ್ಟಗಳ ಬಗ್ಗೆ ದನಿ ಎತ್ತಿದ ಗೀತಾ ಇಂದು 'ಕೇಂದ್ರ ಸಾಹಿತ್ಯ ಅಕಾಡೆಮಿ' ಪ್ರಶಸ್ತಿ ಪಡೆದ ಇಬ್ಬರೇ ಕನ್ನಡದ ಮಹಿಳಾ ಲೇಖಕಿಯರಲ್ಲಿ ಒಬ್ಬರು. ಈ ಪುಸ್ತಕದಲ್ಲಿ ಗೀತಾ ಅವರ ಬರವಣಿಗೆಯನ್ನು ಕುರಿತು ಕೆಲವು ಲೇಖನಗಳಿವೆ; ಸ್ವತಃ ಗೀತಾ ಅವರೇ ತಮ್ಮ ಬಾಳಹಾದಿಯನ್ನು ನಮಗಾಗಿ ಹೇಳಿದ್ದಾರೆ.



## ಚಂಪಾಯಣ (ಬಿಂಬ : ಅಕ್ಷರ : ಕ್ರಿಯೆ)

ಸಂ. : ಡಾ|| ಕಮಲಾ ಹೆಮ್ಮಿಗೆ, ಡಾ|| ಆರ್. ಜಿ. ಮಠಪತಿ (ರಾಗಂ)

**ಪುಟ : ೪೦೪** **ಬೆಲೆ : ರೂ. ೩೦೦**

**ತನು ಮನು ಪ್ರಕಾಶನ**, 'ಕಾವ್ಯಲೋಕ' – ಎಚ್ಐಜಿ ೧೨೬೭, ೧ನೆಯ ಕ್ರಾಸ್ ಶ್ರೀರಾಂಪುರ ಬಡಾವಣೆ, ೨ನೆಯ ಹಂತ, ಮೈಸೂರು - ೫೭೦ ೦೨೩

ಚಂಪಾ – ಅಂದರೆ ಚಂದ್ರಶೇಖರ ಪಾಟೀಲರು 'ಸಂಕ್ರಮಣ' ಸಾಹಿತ್ಯ ಪತ್ರಿಕೆಯ ಸಂಪಾದಕರು ಎಂದೆಲ್ಲಾ ಹೇಳತೊಡಗಿದರೆ ಜನರೆಲ್ಲಾ ''ಅವೆಲ್ಲಾ ನಮ್ಗೂ ಗೊತ್ತೂರಿ... ಮುಂದಕ್ ಹೇಳ್ರಿ'' ಎಂದಾರು. ಕಳೆದ ದಶಕಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರೂ ಆಗಿದ್ದರು. ಕನ್ನಡಕ್ಕಾಗಿ ಅಹರ್ನಿಶಿ ದುಡಿದವರು. ಗೋಕಾಕ್ ಚಳುವಳಿಯನ್ನು ಪ್ರಾರಂಭಿಸಿ ಅಂತ್ಯದವರೆಗೂ ಮುನ್ನಡೆಸಿದವರು. ಕನ್ನಡದ ಪ್ರಸಿದ್ಧ ಸಾಹಿತಿಯಾಗಿ, ಅದರಲ್ಲೂ ಕವಿಗಳಾಗಿ ಪರಿಚಿತರು. ಹತ್ತರಲ್ಲೊಬ್ಬರಂತಾಗದ ಇವರ ಸ್ವಂತಿಕೆಯ ವ್ಯಕ್ತಿತ್ವ, ದಿಟ್ಟ ಬರವಣಿಗೆ ಮತ್ತು ಹೋರಾಟದ ಮೂಲಕ ಕನ್ನಡನಾಡಿನಲ್ಲಿ ಇವರ ಮಹತ್ವದ ಸೇವೆಗಳನ್ನು ಪರಿಗಣಿಸಿ ಮೂರು ವಿಭಾಗಗಳಲ್ಲಿ ಈ ಪುಸ್ತಕ ರಚನೆಯಾಗಿದೆ. ಇದು ಪರಿಚಯಾತ್ಮಕ ನೆಲೆಯಲ್ಲಿ ಮೂಡಿಬಂದಿರುವುದರಿಂದ ಅವರವರು ಕಂಡಂತೆ ಚಂಪಾ ಬಗ್ಗೆ ಸುಮಾರು ನೂರ ಒಂದು ಜನ ಲೇಖಕರು ತಮ್ಮ ಅನಿಸಿಕೆಯನ್ನು ಮನಬಿಚ್ಚಿ ಹೇಳಿಕೊಂಡಿದ್ದಾರೆ. ಚಂಪಾ ಅವರು, ''ಪ್ರೀತಿ ಇಲ್ಲದೆ ನಾನು ಏನನ್ನೂ ಮಾಡಲಾರೆ – ದ್ವೇಷವನ್ನೂ ಸಹ'' ಎಂದಿದ್ದಾರಂತೆ. ಈ ಒಂದು ಮಾತಿನಿಂದಲೇ ನಮಗವರು ಆತ್ಮೀಯರಾಗುವುದು, ಅವರ ಬಗ್ಗೆ ಗೌರವ ಮೂಡುವುದು. ಇಲ್ಲಿ ಇಷ್ಟೊಂದು ಜನ ಅವರನ್ನು ಹೇಗೆ ಕಂಡಿದ್ದಾರೆ – ನೇರ, ನಿಷ್ಠುರ ನಡವಳಿಕೆಯವರೆಂದು ಪ್ರಸಿದ್ಧರಾದ ಇವರ ಬಗ್ಗೆ ನಾವೂ ಓದಿ ನೋಡೋಣ.

## ಚರಿತ್ರೆಯ ಐಸಿರಿ (ಅಂಕಣ ಬರಹಗಳ ಸಂಕಲನ)

ಡಾ|| ಕೆ. ಸಾವಿತ್ರಿ

**ಪುಟ : viii + ೨೦೮**

**ಬೆಲೆ : ರೂ. ೧೫೦**

**ಎಂ. ಬೈರೇಗೌಡ, ಪ್ರಗತಿ ಗ್ರಾಫಿಕ್ಸ್**, ನಂ. ೧೧೯, ೩ನೇ ತಿರುವು, ೮ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು - ೫೬೦ ೧೦೪



ಚರಿತ್ರೆಯಲ್ಲಿ ಸ್ತ್ರೀ ಅವಗಣನೆಗೆ ತುತ್ತಾಗಿದ್ದಳೆಂಬ ವ್ಯಾಖ್ಯೆ ಇದೆ. ಜೊತೆಯಲ್ಲೇ ದಿಟ್ಟ, ವೀರ ಸ್ವಾಭಿಮಾನಿ ಸ್ತ್ರೀಯರು ಆಡಳಿತದಲ್ಲಿ ಪುರುಷರಿಗೆ ಸಮನಾಗಿ ನಿಂತು ಸಾಮ್ರಾಜ್ಯಗಳನ್ನೇ ಉಳಿಸಿರುವ ದಾಖಲೆಗಳೂ ಇವೆ. ಇಂಥ ಘಟನೆಗಳು ಮನೆ - ಸಂಸಾರದ ವಿಷಯಗಳಾದರೆ ಎಲ್ಲೂ ದಾಖಲಾಗಿರುವುದಿಲ್ಲ. ಭೂಮಂಡಲವನ್ನೇ ಗೆದ್ದ ಚಕ್ರವರ್ತಿಗಳ ಕಾಲದಲ್ಲಿ ಮತ್ತು ವೈದಿಕ ಸಂಸ್ಕೃತಿಯ ಸಂದರ್ಭಗಳಲ್ಲಿ ಹೆಣ್ಣಿನ ಸ್ವಾತಂತ್ರ್ಯಹರಣವಾಗಿತ್ತು. ಬುಡಕಟ್ಟು ಮತ್ತು ಕಾಡಿನ ಸಂಸ್ಕೃತಿಯ ಹೆಣ್ಣುಮಗಳು ಅದಕ್ಕೆ ಬಲಿಯಾದದ್ದು ಕಡಿಮೆ. ದಾಖಲಾದ ಅದೆಷ್ಟೋ ಪ್ರಕರಣಗಳಲ್ಲಿ, ವಿವಿಧ ಜನಾಂಗಗಳಲ್ಲಿ ಸ್ವಾಭಿಮಾನಿ ಮಹಿಳೆಯರ ಪ್ರತಿಭಟನೆಯ ಕಿಡಿ ಇದ್ದರೂ ಅದನ್ನು ಜಗಳಗಂಟಿ, ಗಂಡುಬೀರಿ ಎಂಬ ನೆಲೆಯಲ್ಲಿ ಅರ್ಥೈಸಲಾಗಿದೆ. ಇಂಥ ಸ್ತ್ರೀಪಾತ್ರಗಳನ್ನು ವಿಶ್ಲೇಷಿಸುತ್ತಲೇ ಪರಿಚಯಿಸಿ, ದಾಖಲಾದ ಸಂಗತಿಗಳಿಂದಲೇ ಆಕೆಯ ವ್ಯಕ್ತಿತ್ವವನ್ನೆತ್ತರಿಸುವ ಇವು ಅಪೂರ್ವ ವ್ಯಕ್ತಿಚಿತ್ರಣಗಳು. ಜಾನಪದೀಯ ಗ್ರಾಮೀಣ ಸಂಸ್ಕೃತಿಯ ಮೌಖಿಕ ದಾಖಲೆಗಳಾಗಿ ಉಳಿದಿರುವ ಗ್ರಾಮದೇವತೆಯಂತಹ ಸ್ತ್ರೀಪಾತ್ರ ಚಿತ್ರಣವೂ ಇದೆ. ಯಾವುದೋ ಕಾರಣದಿಂದ ಚರಿತ್ರೆಗಳಲ್ಲಿ, ಪುರಾಣಗಳಲ್ಲಿ ದಾಖಲಾಗಿರುವ ಸ್ತ್ರೀಪಾತ್ರಗಳು ಪ್ರತಿಭೆಯಿದ್ದೂ ಪೇಲವವಾಗಿ ಚಿತ್ರಿತವಾಗಿವೆ ಎಂಬ ಅಂಶವನ್ನು ಲೇಖಕಿ ನಿರೂಪಿಸಿದ್ದಾರೆ. ಇಂಥ ಹೆಜ್ಜೆ ಗುರುತು ಮೂಡಿಸಿದ ಅಂದಿನ ಕಾಲದ ಮಹಿಳೆಗೂ ಇಂದಿನ ಕಾಲದ ಎಲ್ಲ ಕ್ಷೇತ್ರಗಳಲ್ಲಿ ಮುಂದುವರಿದ ಮಹಿಳೆಗೂ ವ್ಯತ್ಯಾಸ ಇದೆಯೇ, ಚರಿತ್ರೆಯ ಪುನರಾವರ್ತನೆ ಆಗುತ್ತಿದೆಯೇ – ಓದುಗರನ್ನು ಚಿಂತನೆಗೆ ಹಚ್ಚುವ ಪುಸ್ತಕವಿದು.

**ಅವ್ವನ ಅಂಗನವಾಡಿ** (ಕವಿತೆಗಳು)

ಅರುಣ್ ಜೋಳದ ಕೂಡ್ಲಿಗಿ

**ಪುಟ : ೧೦೪** ಬೆಲೆ : ರೂ. ೬೦

**ಅಹರ್ನಿಶಿ ಪ್ರಕಾಶನ,** ಪ್ರಶಾಂತ ನಿಲಯ, ೪ನೇ ಅಡ್ಡರಸ್ತೆ, ವಿದ್ಯಾನಗರ, ಶಿವಮೊಗ್ಗ

ಊರ ಮಕ್ಕಳಿಗೆ ತಾಯಂದಿರಾದ ಅಂಗನವಾಡಿ ಕಾರ್ಯಕರ್ತೆಯರು, ಗಾರ್ಮೆಂಟ್ ಫ್ಯಾಕ್ಟರಿಯಲ್ಲಿ ಕೆಲಸ ಇದ್ದ ದಿನ ಮಾತ್ರ ಕೂಲಿ ಪಡೆಯುತ್ತ ಊರ ಜನರಿಗೆ ಬಟ್ಟೆ ಹೊಲಿಯುವ ಹೆಣ್ಣುಮಕ್ಕಳು, ಕಂಟ್ರಾಕ್ಟರುಗಳ ಕೈಯ ಉಪಕರಣಗಳಂತೆ – ಎಲ್ಲಿಂದಲೋ ಶಕ್ತಿಯನ್ನು ಆ ವಾಹಿಸಿಕೊಂಡಂತೆ ಮಹಲುಗಳನ್ನು ಕಟ್ಟುವ ಕೂಲಿಜನರು – ಇವರೆಲ್ಲರ ಬದುಕಿನ ಭಾರವನ್ನು ಹೊರಲಾರದೆ ಹೊತ್ತುಕೊಂಡು ಬೆವರಿಳಿಸುತ್ತ ಈ ಕವನಗಳು ನಮ್ಮ ಮುಂದೆ ನಿಂತಿವೆ. ದಿನದಿನದ ಕನಸುಗಳನ್ನು ಅಂದಂದೇ ಕೊಲ್ಲುತ್ತ ಮತ್ತೆ ಮತ್ತೆ ನನಸಾಗದ ಹೊಸ ಹೊಸ ಕನಸನ್ನು ಕಾಣುತ್ತಲೇ ಬಾಳು ಮುಗಿಸಿಬಿಡುವ ಜನರ ಕವಿತೆಗಳಿವು. ಅತಿ ಕಡಿಮೆ ವೇತನಕ್ಕೆ ಅತಿ ಹೆಚ್ಚು ದುಡಿವ ಇಂಥ ತಾಯೊಬ್ಬಳು ಕಾಂ|| ಸುಂದರೇಶ್ ರೈಲು ಅಪಘಾತವಲ್ಲಿ ಮಡಿದಾಗ ದಿನವಿಡೀ ಅತ್ತಿದ್ದಳಂತೆ – ಆತ ಇದ್ದಿದ್ದರೆ ತಮ್ಮ ನೌಕರಿ ಖಂಡಿತ ಕಾಯಂ ಆಗಿ ವೇತನ ಹೆಚ್ಚುತ್ತಿತ್ತೆಂದು ಆಕೆಯ ದೃಢ ನಂಬಿಕೆ. ಕ್ರಿಯಾಶೀಲರನ್ನು ನಿಷ್ಕ್ರಿಯರನ್ನಾಗಿಸಿ, ಬೆಳೆಯುವ ಬುದ್ಧಿಗಳಿಗೆ ಮಂಕುಹಿಡಿಸುವ, ಸಹಜವನ್ನು ಅಸಹಜವನ್ನಾಗಿಸುವ ಕಾಣದ ಕೈಗಳ ಬಗ್ಗೆ ಇಲ್ಲಿ ಆಕ್ರೋಶ ತುಂಬಿದೆ. ಕವಿತೆ ಬರೆದ ಅರುಣ್ ಚಿಕ್ಕವರೆಂದು ಹೇಳಲಾಗಿದೆ. ಆದರೆ ಪುಟ ೬೧ರ 'ಕಡೆಯ ಕನಸು' ಎಂಬ ರೈತನ ಬಗ್ಗೆ ಬರೆದ ಕವಿತೆ ನೋಡಿ – ಕವಿಯ ಮುಂದೆ ನಾವು ಚಿಕ್ಕವರಾಗುತ್ತೇವೆ.

**ಅನಾವರಣ** ('ವಾರ್ತಾ ಭಾರತಿ'ಯಲ್ಲಿ ಪ್ರಕಟವಾದ ಬರಹಗಳ ಸಂಗ್ರಹ)

ಗೋಪಾಲ ಬಿ. ಶೆಟ್ಟಿ

**ಪುಟ : x + ೧೩೪** ಬೆಲೆ : ರೂ. ೧೩೦

**ನೂತನ ಪಬ್ಲಿಕೇಶನ್ಸ್,** 'ಆರಾಧನಾ', ಇಂದ್ರಾಳಿ, ೩ನೇ ಅಡ್ಡರಸ್ತೆ, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

ನಮ್ಮ ದೇಶದ ರಾಜಕೀಯದಲ್ಲಿ, ಶ್ರೀಸಾಮಾನ್ಯನ ಜೀವನದಲ್ಲಿ ಬೇಕಾಗಿಯೋ ಬೇಡವಾಗಿಯೋ ಕೆಲವು ಘಟನೆಗಳು ನಡೆಯುತ್ತಿರುತ್ತವೆ. ಅವು ಅಂದಂದಿನ ದಿನಪತ್ರಿಕೆಗಳಲ್ಲಿ ಅವಕ್ಕಿರುವ ಅರ್ಹತೆಯ ಅನುಸಾರ ಪ್ರಕಟವಾಗುತ್ತವೆ. ಅದನ್ನನುಸರಿಸಿ ವಿವಿಧ ಲೇಖನಗಳು ಪರ-ವಿರೋಧಿ ನೆಲೆಯಲ್ಲಿ ಚರ್ಚಿಸಲ್ಪಡುತ್ತವೆ. ಕೆಲವು ಸತ್ಯವನ್ನೂ ದಾಟಿ ಮುಂದೆ ಓಡುತ್ತವೆ. ಮತ ಧಾರ್ಮಿಕ ಬಣ್ಣ ಬಳಿಯಲಾಗುತ್ತದೆ. ಸುದ್ದಿಯಾಗಬೇಕಾದವು ಪತ್ರಿಕೆಗಳಲ್ಲಿ ಬರದೆ ಜನರ ಮಧ್ಯೆಯೇ ಪ್ರಸಾರವಾಗಿ ಎಲ್ಲರಿಗೂ ತಿಳಿದ ಗುಟ್ಟು ಆಗಿಬಿಡುತ್ತದೆ. ಇದೀಗ ಶ್ರೀಯುತ ಗೋಪಾಲ ಬಿ. ಶೆಟ್ಟಿಯವರು ಸಂದರ್ಭಾನುಸಾರ ತಾವು ಬರೆದ, 'ವಾರ್ತಾ ಭಾರತಿ'ಯಲ್ಲಿ ಪ್ರಕಟವಾದ ಬರಹಗಳನ್ನು ಪುಸ್ತಕರೂಪವಾಗಿ ತಂದಿದ್ದಾರೆ. ಇವು ಈ ದೇಶದ ಒಬ್ಬ ನಾಗರಿಕನಾಗಿ ವ್ಯವಸ್ಥೆಯ - ಸಮಸ್ಯೆಯ ಬಗ್ಗೆ ಸ್ಪಂದಿಸಿದ ಲೇಖನಗಳು. ವೈಚಾರಿಕ, ವಿಡಂಬನಾತ್ಮಕ ಧಾಟಿಯಲ್ಲಿರುವ ಇವು ಈ ದೇಶ ಇಷ್ಟೊಂದು ಹದಗೆಟ್ಟಿದ್ದಕ್ಕಾಗಿ ಕಾರಣವನ್ನು ಹುಡುಕಲು ನಮ್ಮನ್ನೇ ವಿನಂತಿಸುತ್ತವೆ.

– ಇಂದಿರಾಕುಮಾರಿ

೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

## ಆಟ

### (ಪ್ರಭುತ್ವದ ಪ್ರಾಯೋಜಕತೆಯಲ್ಲಿ)

ಆಟ ಆಡಲಾಗುವುದಿಲ್ಲ
ಸಮ ಬಲವಿರದಲ್ಲಿ
ಸಮ ಬಯಲಿರದಲ್ಲಿ
ನಿಖರ ನಿಯಮಗಳಿರದಲ್ಲಿ

ಆಟ ಅಂದ ಮೇಲೆ
ಆ ಕಡೆ ಅಷ್ಟು
ಈ ಕಡೆ ಇಷ್ಟು
ಅಂತ ಸರಿಸಂಖ್ಯೆ ಜನರಿರಬೇಕು
ಮಧ್ಯೆ ಬಿಳಿಪಟ್ಟೆ ಎಳೆದಿರಬೇಕು

ಗೆರೆ ದಾಟಿದರೇನು ದಂಡ
ದಾಟದಿರಲೇನು ಅಂಕ ಅಂತ
ಆಡಿಸುವವರು ಮೊದಲೇ ಹೇಳಿರಬೇಕು

ಆದರಿಲ್ಲಿನ ಹಾಗೆ ನಡೆಯುತಿಲ್ಲ
ಆ ಕಡೆ ಆರು ಜನರಾದರೆ
ಈ ಕಡೆ ಇಬ್ಬರೇ
ನಡುವೆ ಎಳೆದ ಗೆರೆಗೆ ಬಣ್ಣವಿಲ್ಲ
ಕಣ್ಣಿಗೆ ಕಾಣುತಿಲ್ಲ

ನಿಯಮ ಮೀರಿದವನಿಗೇನು ಶಿಕ್ಷೆ?
ಮೀರದವನಿಗೇನು ರಕ್ಷೆ? ಯಾರೂ ಹೇಳುತಿಲ್ಲ
ಆದರಿಂದಿಲ್ಲಿ
ಈ ನೆಲದಲ್ಲಿ
ನಾನು ಆಟವಾಡುವುದಿಲ್ಲ
ನಿಮ್ಮ ಗೆಲುವಿಗೆ ಅಭಿನಂದಿಸುವುದಿಲ್ಲ!

ಕು. ಸ. ಮಧುಸೂದನ

ವಿಜಯಾ ಬ್ಯಾಂಕ್ ಮಹಡಿ, ರಂಗೇನಹಳ್ಳಿ - ೫೭೭ ೧೪೪ ಚಿಕ್ಕಮಗಳೂರು ಜಿಲ್ಲೆ



ನಭಾವಲೋಕನ

# ಶುಕ್ರಗ್ರಹದ ವಿದಾಯ

**ಕ**ಳೆದ ತಿಂಗಳು ಗಣಪತಿ ಹಬ್ಬದ ದಿನ ಚಂದ್ರನನ್ನು ನೋಡಿ ಸುಂದರ ದೃಶ್ಯವೊಂದನ್ನು ಸೆರೆ ಹಿಡಿಯಲು ಮೋಡಗಳು ಅವಕಾಶ ಕೊಡಲಿಲ್ಲ. ಆದರೆ ರಾಜಸ್ಥಾನದ ರಾಹುಲ್ ಝೋಟಾ ಈ ಅವಕಾಶ ಕಳೆದುಕೊಳ್ಳಲಿಲ್ಲ.

ಈ ತಿಂಗಳ ಮೊದಲ ಭಾಗದಲ್ಲಿ ಶುಕ್ರ ಮಂಗಳ ದೊಡನೆ ಜೋಡಿಯಾಗಿ ಕಾಣುತ್ತದೆ. ೯ರಂದು ಚಂದ್ರ ಈ ಜೋಡಿಯೊಡನೆ ಸೇರುವುದನ್ನು ನೋಡಬಹುದು. ಶುಕ್ರ ಕ್ರಮೇಣ ದಿಗಂತದ ಅಂಚಿಗೆ ಸರಿದು ಮಂಗಳವನ್ನು ಒಂಟಿಯಾಗಿ ಉಳಿಸಿ ಮಾಯವಾಗಿಬಿಡುತ್ತದೆ. ದಿನೇ ದಿನೇ ಆಕಾಶವನ್ನು ಗಮನಿಸುತ್ತಿದ್ದರೆ ಈ ಓಟವನ್ನು ಗುರುತಿಸುವುದು ಸಾಧ್ಯವಾಗ ಬಹುದು. ಈ ತಿಂಗಳಲ್ಲಿ ಆಕಾಶ ಶುಭ್ರ ವಾಗಿರುವ ಸಾಧ್ಯತೆ ಇದೆ. ಆದ್ದರಿಂದ ಶುಕ್ರ ಗ್ರಹವನ್ನು ತೆಳ್ಳನೆಯ ಮೋಡದ ಮಧ್ಯೆಯೂ ಪತ್ತೆಮಾಡಬಹುದು. ಸಂಜೆ ಕತ್ತಲಾದ ಮೇಲೆ ಪೂರ್ವಕ್ಕೆ ತಿರುಗಿ ಅಲ್ಲಿ ಇರುವ ಗುರು ಗ್ರಹವನ್ನು ಶುಕ್ರ ಎಂದು ತಪ್ಪು ತಿಳಿಯಬೇಡಿ. ಕಳೆದ ತಿಂಗಳು ಯುತಿಯಲ್ಲಿದ್ದ ಅದು ಈಗ ರಾತ್ರಿ ಇಡೀ ಕಾಣುವುದು. ಶುಕ್ರನಿಲ್ಲದ ಆಕಾಶಕ್ಕೆ ಕಳೆ ಕಟ್ಟುವ ಪ್ರಯತ್ನ ಅದರದ್ದು.

ಆಕಾಶಗಂಗೆಯ ಕೇಂದ್ರವನ್ನು ಅಂದರೆ ವೃಶ್ಚಿಕ, ಧನು ರಾಶಿಗಳನ್ನು ನೋಡಲು ಈ ತಿಂಗಳು ಅತಿ ಪ್ರಶಸ್ತ ವಾಗಿದೆ. ರಾಜಹಂಸ (ಸಿಗ್ನಸ್), ಗರುಡ (ಅಕ್ವಿಲಾ) ಮತ್ತು ವೀಣಾ (ಲೈರಾ) ಪುಂಜಗಳ ತ್ರಿಕೋಣದ ಮೂಲಕ ನದಿಯನ್ನು ಗುರುತಿಸಬಹುದು.

ಈ ತಿಂಗಳಲ್ಲಿ ಹ್ಯಾಲೀ ಧೂಮಕೇತುವಿನ ತುಣುಕುಗಳು ಉಲ್ಕೆಗಳಾಗಿ ಸುರಿಯುವುವು. ಇದಕ್ಕೆ ಅಕ್ವಾರಿಡ್ಸ್ ಉಲ್ಕಾವೃಷ್ಟಿ ಎಂದೇ ಹೆಸರು. ೨೧ಕ್ಕೆ ಗರಿಷ್ಠ ಮುಟ್ಟುವುದು.

ಈ ತಿಂಗಳ ೧೮ರಂದು 'ತುಲಾ ಸಂಕ್ರಮಣ' ಎಂಬುದೊಂದು ಆಚರಣೆ ಉಂಟು. ಅಂದು ಸೂರ್ಯ ಇನ್ನೂ ಕನ್ಯಾರಾಶಿಯಲ್ಲೇ ಇರುವುದನ್ನು ಕಾಣಬಹುದು. ಹೇಗೆ? ಮಂಗಳ ಶುಕ್ರಗಳೆರಡೂ ಕಾಣುವ ಪುಂಜವೇ ತುಲಾ. ತಿಂಗಳ ಕೊನೆಗೆ ಶುಕ್ರ ತುಲಾದಿಂದ ಕನ್ಯಾರಾಶಿಗೆ ಹಿನ್ನಡೆಯುತ್ತದೆ. ಸೂರ್ಯ ತುಲಾರಾಶಿಗೆ ಬರುತ್ತದೆ. ಮಂಗಳ ಮುನ್ನಡೆದು ತುಲಾದಿಂದ ವೃಶ್ಚಿಕಕ್ಕೆ ಬರುತ್ತದೆ. ವೃಶ್ಚಿಕದ ಜ್ಯೇಷ್ಠಾ ನಕ್ಷತ್ರಕ್ಕೆ ಮಂಗಳದ ಪ್ರತಿಸ್ಪರ್ಧಿ - ಅಂಟಾರೆಸ್ - ಎಂದು ಹೆಸರು. ಇದು ಕೆಂಪು ನಕ್ಷತ್ರ. ಆರೆಸ್ ಎಂದರೆ ಮಂಗಳ; ಯುದ್ಧ ದೇವತೆ. ಅದರ ಪ್ರತಿಸ್ಪರ್ಧಿಯಂತೆ ಕೆಂಪಗೆ ಕಾಣುತ್ತಿದ್ದುದರಿಂದ ಈ ಹೆಸರು. ಹೀಗೆ ಎರಡು ಕೆಂಪು ಕಾಯಗಳನ್ನು ಅಕ್ಕಪಕ್ಕದಲ್ಲಿ ನೋಡಬಹುದು. ಯಾವುದು ನಕ್ಷತ್ರ ಯಾವುದು ಗ್ರಹ ಎಂದು ಕಲಿಯಲು ಒಳ್ಳೆಯ ಅವಕಾಶ.




**ಖಗೋಳ ದಿನಚರಿ**

೧ ಶನಿ ಗ್ರಹದ ಯುತಿ: ಚಾಂದ್ರಮಾಸದ ಕೊನೆಯ ಪಾದ
೬ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೭ ಚಂದ್ರ - ಬುಧ ನಡುವೆ ಕನಿಷ್ಠ ಕೋನ
೮ ಅಮಾವಾಸ್ಯೆ ೦೦:೧೪ಕ್ಕೆ; ಶುಕ್ರ ಗ್ರಹದ ಹಿನ್ನಡೆ ಆರಂಭ
ಬುಧ - ಶನಿ ಜೋಡಿ
೯ ಶುಕ್ರ - ಚಂದ್ರ ಜೋಡಿ
೧೦ ಮಂಗಳ - ಚಂದ್ರ ಜೋಡಿ
೧೧ ಚಂದ್ರ - ಜ್ಯೇಷ್ಠಾ ಜೋಡಿ*
೧೪ ಚಾಂದ್ರ ಮಾಸದ ಮೊದಲ ಪಾದ
೧೭ ಬುಧ ಗ್ರಹದ ಯುತಿ
೧೮ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೨೦ ಚಂದ್ರದ ಪಕ್ಕ ಗುರು
೨೧ ಅಕ್ವಾರಿಡ್ಸ್ ಉಲ್ಕಾ ವೃಷ್ಟಿ
೨೩ ಹುಣ್ಣಿಮೆ ೦೭:೦೭ಕ್ಕೆ
೨೪ ಶುಕ್ರ - ಬುಧ ಜೋಡಿ
೨೮ ಚಂದ್ರ - ಕೃತ್ತಿಕಾ ಜೋಡಿ
೨೯ ಶುಕ್ರ ಗ್ರಹದ ಯುತಿ
೩೦ ಚಾಂದ್ರ ಮಾಸದ ಕೊನೆಯ ಪಾದ
(* ಛಾಯಾಗ್ರಹಣಕ್ಕೆ ಸದವಕಾಶ)



*ಗಣಪತಿ ಹಬ್ಬದಂದು ಶುಕ್ರ-ಚಂದ್ರರ ಸಮಾಗಮ – ರಾಜಸ್ಥಾನದ ರಾಹುಲ್ ಝೋಟಾ ತೆಗೆದ ಚಿತ್ರ*



*ಅಕ್ಟೋಬರ್ ೯ರ ಸಂಜೆ ಶುಕ್ರ, ಮಂಗಳ ಮತ್ತು ಚಂದ್ರ*


**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಪಂ॥ ರಾಜೀವ್ ತಾರಾನಾಥ್

## ಸರೋದ್ 'ಸೇನಾ'ಧಿಪತಿ

**ವಿಜಯವಾಮನ**

ಇತ್ತೀಚೆಗೆ 'ಕಂಕಣ ಗ್ರಹಣ' ನೋಡುವ ಸಲುವಾಗಿ ಕನ್ಯಾಕುಮಾರಿಗೆ ಹೋಗಿದ್ದೆ. 'ಓಹ್! ಆಕಾಶ ಸುಂದರಿಗೊಂದು ಅಪರೂಪದ ವಜ್ರದ ಬುಲಾಕು! ಅದೇ ನೆವದಲ್ಲಿ ತಂಜಾವೂರಿಗೆ ಹೋದೆ. ಬರೋಬ್ಬರಿ ಒಂದು ಸಾವಿರ ವರ್ಷಗಳ ಅಮೋಘ ಗಗನಚುಂಬಿ ಗೋಪುರದ ಕೆಳಗೆ ಬೃಹದೇಶ್ವರ ಕುಳಿತಿದ್ದಾನೆ. ಅಲ್ಲೊಂದು ಇಲ್ಲೊಂದು ತೇಲಾಡುವ ಬಿಳಿ ಮೋಡಗಳು, ಶುಭ್ರ ನೀಲಿ ಆಕಾಶಕ್ಕೇ ಆಧಾರವೇನೋ ಅನ್ನುವ ಹಾಗಿದೆ ತಂಜಾವೂರಿನ ಗೋಪುರ! ಸರಿಯಾಗಿ ಈ ಗೋಪುರವನ್ನು ಗ್ರಹಿಸಲು ತಿಂಗಳುಗಳೇ ಬೇಕಾದಾವು. ಆ ದೊಡ್ಡ ಪ್ರಾಂಗಣದ ಮೂಲೆಯಲ್ಲಿ ಎಲ್ಲೋ ರಾಜರಾಜ ಚೋಳ ನಿಂತಿದ್ದಾನೆ. ನಗಣ್ಯ! ಗೋಪುರವೋ... ಇದು ಮನುಷ್ಯ ನಿರ್ಮಿತವೇ ಎಂದು ಸೋಜಿಗಪಡುತ್ತಲೇ, ಇದು ಮನುಷ್ಯ ನಿರ್ಮಿತವೇ ಎಂದು ಹೆಮ್ಮೆಯೂ ಆಗುತ್ತದೆ. ಬುಡದಿಂದ ಮುಗಿಲ ತುದಿಯವರೆಗೂ ಭಿತ್ತಿಚಿತ್ರಗಳು, ಉಬ್ಬುಶಿಲ್ಪಗಳು, ಸ್ಥೂಲಕಾಯಗಳು, ಸೂಕ್ಷ್ಮ ಚಿತ್ತಾರಗಳು, ಕುಸುರಿ ಕೆತ್ತನೆಗಳು, ಪುರುಷ/ಸ್ತ್ರೀ ಶಿಲ್ಪಗಳು, ಜ್ಯಾಮಿತೀಯ ವಿನ್ಯಾಸಗಳು, ಸೌಂದರ್ಯ ಹಾಗೂ ವಾಸ್ತು ರಚನೆಯ ಅನುಪಮ ಸಂಗಮಗಳು, ಇವೆಲ್ಲವನ್ನೂ ಆಸ್ವಾದಿಸುತ್ತಾ... ಒಳಕ್ಕೆ... ಒಳಕ್ಕೆ... ಒಳಕ್ಕೆ... ಇನ್ನೂ ಒಳಕ್ಕೆ ಸಾಗಿದಾಗ... ಈ ಗೋಪುರದ ಅಂತಃಸತ್ವ ಶಿವ! ಬೃಹದೇಶ್ವರ!

ಕಳೆದ ೬-೯-೨೦೧೦ರ ಸಂಜೆ, ಶಿವಮೊಗ್ಗದ ಕುವೆಂಪು ರಂಗಮಂದಿರದ ಹೇಮಾಂಗಣಕ್ಕೆ ನಿಧಾನವಾಗಿ ನಡೆದುಬಂದ ರಾಜೀವ ತಾರಾನಾಥರನ್ನು ಕಂಡಾಗ ನನಗೆ ಥಟ್ಟನೆ ನೆನಪಾಗಿದ್ದು ಈ ತಂಜಾವೂರು ಗೋಪುರ.

ಆ ಸಂಜೆ ರಾಜೀವರ ಸರೋದ್ ವಾದನವಿತ್ತು. ಶುಭ್ರವಾದ ಬಿಳೀ ಉಡುಪು. ಅದೇ ಟ್ರೇಡ್ ಮಾರ್ಕ್ ಕೆದರಿದ ಕೇಶರಾಶಿಯ ದಪ್ಪ ತಲೆ! ಒಳ್ಳೆ ಗಾರುಡಿ ಬೊಂಬೆಯ ತಲೆ. ಈತ ಸರೋದ್ ಗಾರುಡಿಗ. ಹುಬ್ಬುಗಂಟಿನ ಸಿಡುಕುಮೋರೆ. ಒಮ್ಮೆ ಪಂ॥ ರವಿಶಂಕರ್ ಅವರು ''ಈ ಗಂಟುಮೋರೆ ಬಿಟ್ಟು ವೇದಿಕೆಯ ಮೇಲಾದರೂ ನಗಾಡು ಮಾರಾಯಾ'' ಎಂದರಂತೆ. ಉಹೂ... ಜಪ್ಪಯ್ಯ ಎಂದರೂ ಜಗ್ಗದು ಈ ವ್ಯಕ್ತಿ. ನೋಡಲು ಒರಟುಗಲ್ಲಿನಲ್ಲಿ ಕಡೆದ ಮೈಕೆಲೆಂಜಲೋ ಮೂರ್ತಿ. ಬೆರಳುಗಳಲ್ಲಿ ಸದಾ ಉರಿವ ಸಿಗರೇಟು. ಆದರೆ ಸರೋದ್ ತಂತಿ ಮೀಟಿದರೆ... ಲಿಂಗ ಮೆಚ್ಚಿ ಅಹುದಹುದೆನ್ನಬೇಕು. ಈ ಶತ ಒರಟ ಕಾಲೇಜು ದಿನಗಳಲ್ಲಿ ತಲತ್ ಮಹಮೂದನ ಹಾಡುಗಳನ್ನು ಹಾಡುತ್ತಿದ್ದ ಎಂದರೆ ನಂಬುವುದು ಸಾಧ್ಯವಾ? ಇಂಗ್ಲಿಷ್ ಕಾವ್ಯದ ಪಾಠ ಮಾಡುತ್ತಾ ಗದ್ಗದಿತನಾಗುತ್ತಿದ್ದ ಎಂದರೆ ನಂಬುವುದು ಸಾಧ್ಯವಾ? ಗುರುವಿನ ಭಾವಚಿತ್ರವನ್ನು ಎದೆಗವಚಿಕೊಂಡು ತಬ್ಬಲಿಯಂತೆ ಬಿಕ್ಕುತ್ತಿದ್ದ ಎಂದರೆ...

**ಗೋಪುರ ಹೊರಗಿನದು ಮಾತ್ರ. ಒಳಗೆ ಸತ್ಯಂ ಶಿವಂ ಸುಂದರಂ!**

ತುಂಬ ಅಪರೂಪದ ಸಂಗೀತದ ಹೊಳಹನ್ನು ನೀಡಬಲ್ಲ ಅಪರೂಪದ ಸಂಗೀತಕಾರ ರಾಜೀವ ತಾರಾನಾಥ. ಬಾಬಾ ಅಲೀ ಅಕ್ಬರ್‌ಖಾನ್ ಸಾಹೇಬರ ಚಂದ್ರನಂದನ್ ನೀಡಿದ ದಿವ್ಯಾನುಭವದ ನಂತರ ಅವರ ಪ್ರೀತಿಯ ಶಿಷ್ಯ ರಾಜೀವರು ನನಗೆ ತೀರಾ ತಳಮಳದ ಸಂದರ್ಭಗಳಲ್ಲಿ ಅವರ ಸಂಗೀತದ ಮೂಲಕ ಆಧಾರ ಒದಗಿಸಿದ್ದಾರೆ. ಸಾಂತ್ವನ ನೀಡಿದ್ದಾರೆ. ನಾನು ಅವರನ್ನು ಏಕಲವ್ಯ ನಿಷ್ಠೆಯಿಂದ ಆರಾಧಿಸುತ್ತಾ ಬಂದಿದ್ದೇನೆ. ತುಂಬ ಋಣಿಯಾಗಿದ್ದೇನೆ. ಈ ಪುಣ್ಯಾತ್ಮ ಬಿಹಾಗ್ ರಾಗವನ್ನು ಅಂತರ್ಗತ ಮಾಡಿಕೊಳ್ಳುತ್ತಿರಬೇಕಾದ ಗಳಿಗೆಯಲ್ಲಿ ಫೋನ್ ಕರೆಯೊಂದು ಬಂದು, ''ಹೌ ಆರ್ ಯು?'' ಎಂದಾಗ ''ಐಯಾಮ್ ರಾಗ್ ಬಿಹಾಗ್'' ಎನ್ನುತ್ತಾರೆ! ಇದೆಂಥಾ ತಾದಾತ್ಮ್ಯ! ಪದೇ ಪದೇ ಅವರು ಕೋಟ್ ಮಾಡುವ ಕವಿ ಎಲಿಯಟ್ಟನ 'You are the music, while the music lasts' ಸಾಲುಗಳನ್ನು ಅಕ್ಷರಶಃ ಬದುಕಿ, ಸಾಧಿಸಿ ತೋರಿಸಬಲ್ಲ ಅಸಾಧಾರಣ ಪ್ರತಿಭೆ ರಾಜೀವ ತಾರಾನಾಥ.

೧೯೭೨. ಮಾನಸಗಂಗೋತ್ರಿಯ ಮಾನವಿಕ ಸಭಾಂಗಣ. ಅಲ್ಲೇ ಅವರ ಮೊದಲ ಕಚೇರಿ ಕೇಳಿದ್ದು ನಾನು. ಸಂಗೀತ ಕೇಳಿ ಹುಚ್ಚೆದ್ದು ಹೋದ ನಾನು ಅವರ ಕೈ ಕುಲುಕುವ ಭರಾಟೆಯಲ್ಲಿ ಕೈಗಳನ್ನು ಜೋರಾಗಿ ಅಮುಕಿಬಿಟ್ಟೆ. ಸಟ್ ಎಂದು ಕೈ ಕೊಡವಿಕೊಂಡು ವ್ಯಗ್ರರಾದ ಅವರ ಮುಖವನ್ನು ಇನ್ನೂ ಮರೆತಿಲ್ಲ ನಾನು. ಸರೋದ್ ವಾದನದಲ್ಲಿ ಬೆರಳ ತುದಿಗಳಿಂದ ತಾರುಗಳನ್ನು ಎಳೆಯುತ್ತಿರುತ್ತಾರೆ, ಮೀಟುತ್ತಿರುತ್ತಾರೆ. ಪೊಲೀಸ್ ಠಾಣೆಗಳಲ್ಲಿ ನೀಡುವ ಥರ್ಡ್ ಡಿಗ್ರಿ ಶಿಕ್ಷೆಗಳನ್ನೂ ಮೀರಿಸುವ ನೋವಾಗುತ್ತದೆ. ಅವರ ಸಂಗೀತವೇ ಹಾಗೆ. ತಂಜಾವೂರು ಗೋಪುರದ ವಿಧವಿಧ ಮಾದರಿಯ ಚೆಲುವು ಚಿತ್ತಾರಗಳನ್ನು ಬಿಡಿಸುತ್ತಾ... ಬಿಡಿಸುತ್ತಾ... ಒಳ ಒಳಗೆ ಸಾಗಿ ಕೊನೆಯಲ್ಲಿ ಶಿವಸಾಕ್ಷಾತ್ಕಾರ! ಇದು ನನ್ನ ಎಳವೆಯಲ್ಲಿ ಹೇಗೆ ತಿಳಿಯಬೇಕು? ಆದರೆ ಕೈಗಳ ಮಾಂತ್ರಿಕ ಗ್ರಿಪ್, ಬೆರಳ



> ರಾಜೀವರು ರಾಗಸೌಧವನ್ನು ಕಟ್ಟುತ್ತಾ-ಕೆಡವುತ್ತಾ, ಕೆಡವುತ್ತಾ - ಕಟ್ಟುತ್ತಾ ಸಾಗುವ ಬಗೆ ಅನನ್ಯವಾದುದು. ಸಂಗೀತದಲ್ಲಿ ಲಾಲಿತ್ಯ, ಮಾಧುರ್ಯಗಳೇ ಮುಖ್ಯ ಎಂದುಕೊಂಡವರಿಗೆ ಲಯವಿನ್ಯಾಸಗಳು, ತಾಳಬದ್ಧ ಚಲನೆಗಳು, ಅನಿರೀಕ್ಷಿತ ತಿರುವುಗಳು ಲಭ್ಯವಾಗುವುದೇ ಇಲ್ಲ. ಇವರೆಲ್ಲರೂ ಕವಿ ರವೀಂದ್ರರು ಹೇಳಿದಂತೆ 'ಸೂರ್ಯ ಮುಳುಗಿಹೋದ' ಎಂದು ಭ್ರಮಿಸಿ 'ನಕ್ಷತ್ರಗಳ ಸೊಬಗಿನ ಸೌಭಾಗ್ಯ' ಕಳೆದುಕೊಳ್ಳುವವರು. ವೇಗವನ್ನೇ ಸಂಗೀತವೆಂದುಕೊಂಡವರಿಗೆ ಆಲಾಪದ ಬಿಡುವು ಹೇಗೆ ತಿಳಿದೀತು? ಅರ್ಥಪೂರ್ಣ ಮೌನಗಳ ಅರ್ಥ ಹೇಗಾದೀತು? 'ಅಶ್ರುತಗಾನಮಭಿರಾಮತರಂ' ಎಂದರೇನು? ಖಾನ್ ಸಾಹೇಬರ 'ದೇಸ್ ಮಲ್ಹಾರ್' ಆಲಿಸಿದಾಗ ನನ್ನ ಮಾತುಗಳು ನಿಮಗೂ ತಿಳಿಯಬಹುದು.

ತುದಿಗಳಿಂದ ನನ್ನೆದೆಗೆ ಹರಿದುಬಂದ ಆ ರಾಗದ ಒಲವು ಚೆಲುವು, ನೋವು ನಲಿವುಗಳು ಇಂದಿಗೂ ಅಚ್ಚಳಿಯದೇ ಉಳಿದುಬಿಟ್ಟಿವೆ.

ಒಮ್ಮೆ ನನ್ನ ಗೆಳೆಯರೊಬ್ಬರು ಅನಿವಾರ್ಯ ಕಾರಣಗಳಿಂದ ಅವರ ಮೂರು ವರ್ಷದ ಪುಟ್ಟ ಮಗಳನ್ನು ನಮ್ಮ ಮನೆಯಲ್ಲಿ ಬಿಟ್ಟುಹೋಗಿದ್ದರು. ಅದು ತನ್ನ ಅಪ್ಪ-ಅಮ್ಮನಿಗಾಗಿ ಅತ್ತೂ... ಅತ್ತೂ ಸುಸ್ತಾಗಿ ಮಲಗಿತ್ತು. ನಾನು ಏನಾದರೂ ಸಂಗೀತ ಕೇಳೋಣವೆಂದು ರಾಜೀವರ ಮಿಶ್ರ ಶಿವರಂಜನಿಯನ್ನು ಹಾಕಿಕೊಂಡೆ. ಅದೊಂದು ಲೈವ್ ಕಾರ್ಯಕ್ರಮದ ಧ್ವನಿಮುದ್ರಿಕೆ. ಮೊದಲ ಮೀಟಿನಲ್ಲೇ ಖಾನ್ ಸಾಹೇಬರ ಆವಾಹನೆ! ಈ ರಾಗದಲ್ಲಿ ರಾಜೀವರು ಮೀಟಿ, ನೇಯ್ದು, ನಾದು, ಹೊಸಕಿ, ಹೊರಳಿಸಿ, ಜಗ್ಗಿ ಎಳೆದು, ಸೆಳೆದು, ಎಬ್ಬಿ ನರನಾಡಿಗಳ ಮೂಲೆಮೂಲೆಗಳಲ್ಲಿನ ದುಃಖವನ್ನು ಸೋಸಿ ಬಸಿದು ತೆಗೆದುಬಿಡುತ್ತಾರೆ. ನಡೆದದ್ದು ಇದು. ನಂಬಿ. ನನ್ನ ಪ್ರೀತಿಯ ನಾಯಿ ಬ್ಲ್ಯಾಕೀ ಕೂಡ ತನ್ನ ಉದ್ದ ಮುಸುಡಿಯನ್ನು ಪೂರ್ಣ ನೆಲಕ್ಕೆ ಹಚ್ಚಿ ಮಂತ್ರಮುಗ್ಧವಾಗಿ ಟೇಪ್ ರಿಕಾರ್ಡರ್ ಮುಂದೆ ಕುಳಿತುಬಿಟ್ಟಿತ್ತು! ರಾಗ ಮುಗಿದಾಗ ನಾನು ಬಿಕ್ಕಿಬಿಕ್ಕಿ ಅಳುತ್ತಿದ್ದೆ. ಅದುವರೆಗೂ ಅತ್ತೂ ಅತ್ತೂ ಸುಸ್ತಾಗಿ ನಿದ್ದೆಮಾಡಿದೆ ಎಂದುಕೊಂಡಿದ್ದ ಆ ಪುಟ್ಟ ಹುಡುಗಿ ಬೆಪ್ಪಾಗಿ, ಸ್ವಲ್ಪ ಸಮಯದ ನಂತರ '' 'ಹಾಡು' ಚೆನ್ನಾಗಿತ್ತು ಅಲ್ವಾ ಮಾಮಾ ?'' ಎಂದಿತು. ನಾನು ಮರುಮಾತಾಡದೇ ಅದನ್ನು ಎದೆಗವಚಿಕೊಂಡು ''ಹೂಂ'' ಎಂದೆ.

ಅವರ ಲಂಕಾದಹನ ಸಾರಂಗ್ ಎನ್ನುವ ರಾಗದ ಪ್ರಸ್ತುತಿಯೂ ತದ್ವತ್ ಖಾನ್ ಸಾಹೇಬರದೇ. ನಾನದನ್ನು ನೂರಾರು ಬಾರಿ ಕೇಳಿದ್ದೇನೆ. ಪ್ರತಿಬಾರಿಯೂ ಭಾವಾತಿರೇಕಕ್ಕೆ ಒಳಗಾಗುತ್ತೇನೆ. ಲಂಕೆಯನ್ನು ಸುಟ್ಟ ಮೇಲೆ ಅಲ್ಲಿಯವರ ಶೋಕಕ್ಕೆ ಸ್ಪಂದಿಸುತ್ತಾ ಹನುಮಂತ ಈ ರಾಗದಲ್ಲಿ ಪ್ರಲಾಪಿಸಿದ ಎನ್ನುತ್ತಾರೆ. ಅದಕ್ಕೇ ಆ ಹೆಸರು ಈ ರಾಗಕ್ಕೆ. ಕಣ್ಮುಚ್ಚಿ ಕೇಳುತ್ತಾ ಹೋದರೆ ಖಾನ್ ಸಾಹೇಬರೋ, ತಾರಾನಾಥರೋ ತಿಳಿಯುವುದಿಲ್ಲ. ಗುರು-ಶಿಷ್ಯರ Divine Onenessನ ದಿವ್ಯಗಳಿಗೆ ಆ ರಾಗದ ಪ್ರಸ್ತುತಿ ಅದು. ರಾಜೀವರ ಭೈರವಿ/ಸಿಂಧು ಭೈರವಿ/ನಟ ಭೈರವ/ದರ್ಬಾರಿ ಇತ್ಯಾದಿಗಳಲ್ಲೂ ನನ್ನದು ಇದೇ ಅವಸ್ಥೆ. ಕೀರವಾಣಿ/ಕಾಪಿ ಕೇಳುವಾಗ ನನಗೆ ಇನ್ನೂ ಇಂಥ ಅನುಭವಗಳಾಗಿಲ್ಲ. ಇದು ನನ್ನ ಮಿತಿ. ಯಮನ್ ಕೇಳುವಾಗ ತುಂಬ ಕಾವ್ಯಾಭ್ಯಾಸದ ಎಚ್ಚರಿಕೆಯಿಂದ ಕೇಳುತ್ತೇನೆ. ಅವರ ಆಲಾಪಗಳು, ದೀರ್ಘವಾದ ಮೀಂಡ್‌ಗಳು ಕೈಹಿಡಿದು ನಡೆಸುತ್ತಾ ಕೊನೆಗೆ ಕೋಡುಗಲ್ಲಿನ ತುದಿ ಮುಟ್ಟಿಸಿ ಇದ್ದಕ್ಕಿದ್ದಂತೆ ತಳವಿಲ್ಲದ ಪಾತಾಳಕ್ಕೆ ತಳ್ಳಿ, ಗಾಬರಿಗೊಂಡು ಪರದಾಡುವ ನನ್ನ ಇನ್ನೊಂದು ತುದಿಯಿಂದ ಕೈಹಿಡಿದು ಮೇಲೆತ್ತಿಕೊಂಡು ಉದ್ಧರಿಸುತ್ತಾರೆ. ಅಚಾನಕ ಸಂಚಾರಗಳ ಸುಳಿಗಳಲ್ಲಿ ಸೆಳೆದು ಬಂಧಿಸಿ, ಮತ್ತೆ ಬಂಧ ಕಳಚಿ ನಿರಾಳವಾಗಿಸಿ ಅಚ್ಚರಿ ಮೂಡಿಸುತ್ತಾರೆ.

ರಾಜೀವ್ ಬಗ್ಗೆ ಮಾತನಾಡುತ್ತಾ ಅವರು performer ಅಲ್ಲ ಎಂದು ಕೆಲವರ ಅಭಿಪ್ರಾಯ ಇದೆ. Nonsense! ಏನು ಸ್ವಾಮಿ ಹಾಗೆಂದರೆ? ನೀವು ಹೊರಗಣ ಗೋಪುರ ಮಾತ್ರ ನೋಡುತ್ತಾ ಮೈ ಮರೆಯಬೇಡಿ. ಸಂಗೀತ ಅಷ್ಟು ಸುಲಭವಾಗಿ, ಸುಸೂತ್ರವಾಗಿ ದಕ್ಕಿಬಿಡುತ್ತದೋ? ಕೇಳುಗರಾದ ನಮ್ಮ ಮನೋಭಾವ, ತಯ್ಯಾರಿಗಳೂ ಬೇಡವೋ? ರಾಜೀವರಿಗೆ ಪದೇಪದೇ ಬೀಳುತ್ತಿದ್ದ ಕನಸೊಂದರ ಬಗ್ಗೆ ಕೇಳಿದ್ದೇನೆ. ಸಮುದ್ರದ ದೈತ್ಯಾಕಾರದ ಅಲೆಗಳು ತನ್ನನ್ನು ಅಪ್ಪಳಿಸಲು ಬರುತ್ತಿರುವಂತೆ. ಗುರು ಸಮಾನರಾದ ಪಂ॥ ರವಿಶಂಕರ್ ಹೇಳುತ್ತಾರೆ – ಆ ಅಲೆಗಳನ್ನೇ ಗಮನಿಸು. ಅದರ ರೂಪುರೇಷೆಗಳು, ಅಂಚಿನ ರೇಖೆಗಳ ವಕ್ರತೆ, ಅದರ ಅನುಪಮ ಹೊಳಪು, ಪುನರಾವರ್ತಗಳು, ನಿರಂತರತೆ ಇವೆಲ್ಲವನ್ನೂ ಹಿಡಿದಿಟ್ಟುಕೋ. ಎಂಥಾ ಗುರು; ಎಂಥಾ ಶಿಷ್ಯ; ಎಂಥಾ ಶಿಕ್ಷಣ !

ಖಾನ್ ಸಾಹೇಬರು ರಾಗವೊಂದರ ಪ್ರಸ್ತುತಿಯನ್ನು ಒಂದು ಪಯಣದ ರೂಪಕದಲ್ಲಿ ಹೇಳುತ್ತಾರೆ. ಭಾಸ್ಕರ್ ಚಂದಾವರಕರ್ ತಮ್ಮ 'ಸಂಗೀತ ಸಂವಾದ'ದಲ್ಲಿ ಇದನ್ನು ತುಂಬ ಹೃದಯಂಗಮವಾಗಿ ವಿವರಿಸುತ್ತಾರೆ: '' 'ಪಯಣ' ಎಲ್ಲಿಗೆ? ಗೊತ್ತಿಲ್ಲ. ಈಗಲೇ ಹೊರಡಬೇಕು. ಹೇಗೆ? ಗೊತ್ತಿಲ್ಲ. ತಯಾರಿಯಾಗಬೇಕಲ್ಲ? ಅದನ್ನು ಗುರುಗಳು ತಿಳಿಸುತ್ತಾರೆ. ವಿಚಿತ್ರವೇನು ಗೊತ್ತೆ? ಗುರುಗಳಿಗೂ ಪಯಣ ಎಲ್ಲಿಗೆ ಅಂತ ಗೊತ್ತಿಲ್ಲ! ಕಾರಣ, ಅವರ ಗುರು, ಗುರುವಿನ ಗುರು, ಗುರುವಿನ ಗುರುವಿನ ಗುರುಗಳಿಗೂ 'ಪಯಣ' ಗೊತ್ತೇ ವಿನಾ 'ಎಲ್ಲಿಗೆ' ಎಂಬುದು ಗೊತ್ತಿಲ್ಲ.'' ಫೆಬ್ರುವರಿ ೧೩ರಲ್ಲಿ ಖಾನ್ ಸಾಹೇಬರು ರಾಜೀವರಿಗೆ ಬಾಗೇಶ್ರೀ ಕಾನಡ ನುಡಿಸೋಣ ಅಂದಾಗ ಹೀಗೇ ಆಗಿರಬೇಕು. ಅಂಥದ್ದರಲ್ಲಿ performer ಅಲ್ಲ ಎಂದು ಹೇಳುವ ದಡ್ಡತನ ಯಾಕೆ ?



ರಾಜೀವರು ರಾಗಸೌಧವನ್ನು ಕಟ್ಟುತ್ತಾ-ಕೆಡವುತ್ತಾ, ಕೆಡವುತ್ತಾ-ಕಟ್ಟುತ್ತಾ ಸಾಗುವ ಬಗೆ ಅನನ್ಯವಾದುದು. ಸಂಗೀತದಲ್ಲಿ ಲಾಲಿತ್ಯ, ಮಾಧುರ್ಯಗಳೇ ಮುಖ್ಯ ಎಂದುಕೊಂಡವರಿಗೆ ಲಯವಿನ್ಯಾಸಗಳು, ತಾಳಬದ್ಧ ಚಲನೆಗಳು, ಅನಿರೀಕ್ಷಿತ ತಿರುವುಗಳು ಲಭ್ಯವಾಗುವುದೇ ಇಲ್ಲ. ಇವರೆಲ್ಲರೂ ಕವಿ ರವೀಂದ್ರರು ಹೇಳಿದಂತೆ 'ಸೂರ್ಯ ಮುಳುಗಿಹೋದ' ಎಂದು ಭ್ರಮಿಸಿ 'ನಕ್ಷತ್ರಗಳ ಸೊಬಗಿನ ಸೌಭಾಗ್ಯ' ಕಳೆದುಕೊಳ್ಳುವವರು. ವೇಗವನ್ನೇ ಸಂಗೀತವೆಂದುಕೊಂಡವರಿಗೆ ಆಲಾಪದ ಬಿಡುವು ಹೇಗೆ ತಿಳಿದೀತು? ಅರ್ಥಪೂರ್ಣ ಮೌನಗಳ ಅರ್ಥ ಹೇಗಾದೀತು? 'ಅಶ್ರುತಗಾನಮಭಿರಾಮತರಂ' ಎಂದರೇನು? ಖಾನ್ ಸಾಹೇಬರ 'ದೇಸ್ ಮಲ್ಹಾರ್' ಆಲಿಸಿದಾಗ ನನ್ನ ಮಾತುಗಳು ನಿಮಗೂ ತಿಳಿಯಬಹುದು.

ರಾಜೀವರ ಕೆಲವು ಶಿಷ್ಯರಿಗೆ ಒಂದು ಕೊರಗು ಉಳಿದುಬಿಟ್ಟಿದೆ. ಅವರಿಗೆ ಸಿಗಬೇಕಾದ 'ಮನ್ನಣೆ' ಸಿಗಲಿಲ್ಲ. ರಾಜೀವರಿಗೆ ತಾರು ಮೀಟುವುದು ಗೊತ್ತೇ ಹೊರತು wire pulling ಗೊತ್ತಿಲ್ಲ! ಅರವತ್ತರ ದಶಕದಲ್ಲಿ ಅವರ ಇತರೆ ಗೆಳೆಯರ ಜೊತೆ ಮೈಸೂರಿನ ಕಾಫಿ ಹೌಸ್‌ನಲ್ಲಿ ಕಾಲ ಕಳೆದರೂ ರಾಜೀವರಿಗೆ coffee-stain ಮೆತ್ತಿಕೊಳ್ಳಲಿಲ್ಲ. ಅದು ಸಂಗೀತಲೋಕದ ಪುಣ್ಯ; ಸಾಹಿತ್ಯಲೋಕದ ಲುಕ್ಸಾನು! ಅಂದಿನ ಲೋಹಿಯಾವಾದಿಗಳಿಂದ ಕಲುಷಿತವಾಗದೇ ಉಳಿದ ಅಮೃತದ ಬಿಂದು. ಆದರೆ ಅವರೆಲ್ಲರಿಗಿಂತ ಹೆಚ್ಚಾಗಿ ತಮ್ಮ ಬದುಕಿನಲ್ಲಿ ಲೋಹಿಯಾತನವನ್ನು ರಾಜೀವರು ಅಳವಡಿಸಿಕೊಂಡಿದ್ದಾರೆ. ಈ ಶಿಷ್ಯರ ಕೊರಗು ಒಂದು ರೀತಿ 'ಭೈರಪ್ಪನವರ ರೋದನ'ದ ಹಾಗೆ. ''ನನ್ನ ಕೃತಿಗಳನ್ನು ಯಾರೂ ಸರಿಯಾಗಿ ಓದಿಲ್ಲ; ನನ್ನ ಕಾದಂಬರಿಗಳನ್ನು ಯಾರೂ ತಾಂತ್ರಿಕವಾಗಿ ವಿಮರ್ಶೆ ಮಾಡೇ ಇಲ್ಲ'' ಇತ್ಯಾದಿ. ಇದನ್ನೆಲ್ಲ 'ಯಾರು' ಮಾಡಬೇಕೆಂದು ಅವರ ಇಷ್ಟವೋ ನಾ ಕಾಣೆ. ಹಾಗಾದರೆ ಪ್ರಿಂಟಾಗುವ ಮೊದಲೇ ಶ್ರೀಯುತರ ಕಾದಂಬರಿಗಳು 'ಖಾಲಿ'ಯಾಗುವ ಪವಾಡ ಹೇಗೆ? ಇರಲಿ. ರಾಜೀವರ ಬಗ್ಗೆ ಇಂಥಾ ವಿಷಾದಗಳ ಅಗತ್ಯವಿಲ್ಲವೆಂದೇ ನನ್ನ ಅನಿಸಿಕೆ. ಅವರಿಗೆ ರಸಿಕರ 'ಮನ್ನಣೆ' ದೊರೆತಿದೆ. ಸಾಕ್ಷಾತ್ ಗುರುಗಳಿಂದಲೇ ಶಭಾಶ್‌ಗಿರಿ ಸಿಕ್ಕಿದೆ. ಯಾವನೋ ನಿರ್ಗತಿಕ ಮಂತ್ರಿ ಇವರ ಕೊರಳಿಗೆ ಹಾರ ಹಾಕಿ, ಕೈಗೆ ಪ್ರಶಸ್ತಿ ತುರುಕಿ, ಲಕ್ಷದ ಭಿಕ್ಷೆ ಹಾಕಬೇಕೇನು ? ಖುದ್ದು ರಾಜೀವರಿಗೇ ಅಪಥ್ಯ ಇದು.

ಮೊನ್ನೆ ಶಿವಮೊಗ್ಗದ ಕಚೇರಿಯ ನಂತರ ಜಿಟಿಗುಟ್ಟುವ ಮಳೆಯಲ್ಲಿ ಕುವೆಂಪು ರಂಗಮಂದಿರದ ಮೆಟ್ಟಿಲುಗಳನ್ನಿಳಿದು ಹೋಗುತ್ತಿದ್ದರೆ... ಸಾಗುತ್ತಾ... ಸಾಗುತ್ತಾ ತನ್ನದೇ 'ದಾರಿ' ಮಾಡಿಕೊಂಡು ನಡೆಯುತ್ತಿದ್ದ ರಾಜೀವ್ ಒಬ್ಬ war veteranನಂತೆ ತೋರುತ್ತಿದ್ದರು. ಸಾಮ್ರಾಟ-ಭಂಗಿಯಲ್ಲಿ ಕುಳಿತು ತೊಡೆಯ ಮೇಲೆ ಸರೋದ್ ಇಟ್ಟುಕೊಂಡಾಗ ಅದು ಶಿವಧನುಸ್ಸಿನಂತೆ ಘಳಗುಟ್ಟುತ್ತಿತ್ತು. ಕೆಲವೊಮ್ಮೆ ಸರೋದನ್ನು ನಲ್ಲೆಯಂತೆ ರಮಿಸುತ್ತಿದ್ದರೆ, ಕೆಲವೊಮ್ಮೆ ಮಗುವಿನಂತೆ ಸಂತೈಸುತ್ತಿದ್ದರು. ಬಿಳೀ ಉಡುಗೆ, ಅಂಕೆಗೆ ಸಿಲುಕದ ಕೇಶರಾಶಿ, ನುಡಿಸುವಾಗ ಅವನತಮುಖಿಯಾಗುವುದರಿಂದ ಮುಖ ಮಾತ್ರ ಅವ್ಯಕ್ತ! ಅದೇ ರಾಜೀವ್! ಸರೋದ್ 'ಸೇನಾ'ಧಿಪತಿ. ಆ ಗಳಿಗೆಯಲ್ಲಿ ಸರೋದ್ ಮತ್ತು ಸಾಧಕ ಅದ್ವೈತ. ನಮಾಮಿ ತ್ವಾಂ.

ವಿಜಯವಾಮನ
'ಗುಲ್ ಮೊಹರ್', ಕೆ.ಹೆಚ್.ಬಿ. ಕಾಲನಿ
ಗಾಂಧಿನಗರ, ಸಾಗರ - ೫೭೭ ೪೦೧

ಕಂಬಾರರ ನಾಟಕಗಳ ಕೆಲವು ಮುಖ್ಯ ರೂಪಗಳನ್ನು ಗಮನಿಸಿದರೆ, ನಾಟಕಗಳ ಒಂದು ಮಾದರಿಯೇ ಸಿದ್ಧವಾಗುತ್ತದೆ. 'ಹೇಳತೇನ ಕೇಳ' ಪುರಾಣದ ಮೂಲಕ ಕಂಬಾರರು 'ಋಷ್ಯಶೃಂಗ' ನಾಟಕವನ್ನು ಬರೆಯುತ್ತಾರೆ. 'ಋಷ್ಯಶೃಂಗ'ದ ಮುಂದುವರಿಕೆಯಾಗಿ 'ಹುಲಿಯ ನೆರಳು' ಎನ್ನುವ ಇನ್ನೊಂದು ನಾಟಕವನ್ನು ರಚಿಸುತ್ತಾರೆ. ಅದು ಮುಂದುವರಿದು ಈ ಹೊಸಕಾಲದ ಅನಾಥ ಭಾರತೀಯನ ಅಸ್ತಿತ್ವ ಏನು, ಎನ್ನುವುದನ್ನು ಶೋಧಿಸುವ ರೂಪಕವಾಗಿ ಭಾರತೀಯ ಸಮುದಾಯದ ಮನಃಸ್ಥಿತಿಯನ್ನು ಪರಿವರ್ತನೆ ಹೊಂದುತ್ತದೆ. ಅಂದರೆ, ಕಂಬಾರರು ಪರಂಪರೆಯಿಂದ ಲಭ್ಯವಿರುವ ಜನಪದ ಪುರಾಣಗಳನ್ನು ನೇರವಾಗಿ ಇದ್ದಕ್ಕಿದ್ದಂತೆ ಬಳಸಿಕೊಳ್ಳದೆ ತಮ್ಮ ಕಾಲದ ಸೃಜನಶೀಲ ಅಗತ್ಯಗಳಿಗಾಗಿ ಮಾರ್ಪಾಡು ಮಾಡಿಕೊಂಡು ಬಳಸುತ್ತಾರೆ.

# ಕಂಬಾರರ ನಾಟಕಗಳಲ್ಲಿ ಪರಂಪರೆ ಮತ್ತು ಆಧುನಿಕ ಪ್ರಜ್ಞೆ

ಡಾ॥ ಸುಖದೇವ ಎಮ್. ಹಾನಬುಡೆ

ಉತ್ತರ ಕರ್ನಾಟಕದಲ್ಲಿ ಒಂದು ಮಹತ್ವದ ಸೃಜನಶೀಲ ಪ್ರಯೋಗ ನಡೆದಿತ್ತು. ಅದು 'ಸಂಗ್ಯಾ ಬಾಳ್ಯಾ'ಸಣ್ಣಾಟದ ರಚನೆ. ಈ ಆಟದ ವಸ್ತುವೂ ಕೂಡ ಸಮಕಾಲೀನವೆ. ಈ ಸಣ್ಣಾಟದ ಲೇಖಕ ಪತ್ತಾರ ಮಾಸ್ತರನೆಂಬ ಪ್ರಾಥಮಿಕ ಶಾಲಾ ಶಿಕ್ಷಕ. ಇಂಗ್ಲಿಷ್ ವಿದ್ಯಾಭ್ಯಾಸದ ಸಂಪರ್ಕಕ್ಕೆ ಬಂದ ಈತ ತನ್ನ ಪರಿಸರದಲ್ಲಿ ನಡೆಯಿತೆನ್ನಲಾದ ವ್ಯಭಿಚಾರದ ಘಟನೆಯನ್ನಾಧರಿಸಿ ಒಂದು ಸಣ್ಣಾಟವನ್ನು ಬರೆದ. ಇದಕ್ಕೆ ಆಯ್ಕೆ ಮಾಡಿಕೊಂಡ ಬಂಧ ಜನಪದದಿಂದ ಅವನಿಗೆ ದತ್ತವಾಗಿರುವ ಸಣ್ಣಾಟದ ಪರಂಪರೆ. ಇದಕ್ಕೆ ಮೊದಲು 'ಇಗ್ಗಪ್ಪ ಹೆಗ್ಗಡೆ ವಿವಾಹ ಪ್ರಹಸನ' ಎಂಬ ನಾಟಕ ರಚನೆಯಾಗಿತ್ತು. ಅದು ದೇಸೀಯ ವಸ್ತು ಮತ್ತು ವಿದೇಶೀ ಚೌಕಟ್ಟುಗಳ ನಡುವೆ ಘರ್ಷಣೆ ಆಗಿತ್ತು.

ಈ ಎರಡೂ ರಚನೆಗಳು ಹೆಚ್ಚುಕಡಿಮೆ ಒಂದೇ ಸಮಯಕ್ಕೆ ಬಂದುದೂ ಕುತೂಹಲಕಾರಿ ಸಂಗತಿಯಾಗಿದೆ. ಇವುಗಳಲ್ಲಿ ಯಾವುದು ಮೊದಲು, ಯಾವುದು ಅನಂತರ ಎನ್ನುವುದು ಗೌಣ. ಈ ಎರಡೂ ಪ್ರಯೋಗಗಳು ಹೊಸ ಬಗೆಯ ಸೃಜನಶೀಲ ಚಟುವಟಿಕೆಗಳಿಗೆ ದಿಕ್ಸೂಚಿಯಾಗಿ ಪರಿಣಮಿಸಿದುವು.

ಡಾ॥ ಚಂದ್ರಶೇಖರ ಕಂಬಾರರು ಕಾವ್ಯ ನಾಟಕಗಳನ್ನು ತಮ್ಮ ಸೃಜನಶೀಲ ಅಭಿವ್ಯಕ್ತಿಯ ಮಾಧ್ಯಮವಾಗಿ ಮಾಡಿಕೊಂಡರು. ಈ ಆಯ್ಕೆಗೆ ಕಾರಣಗಳು ಕೂಡ ನಮಗೆ ಸ್ಪಷ್ಟವಾಗಿ ಕಾಣುತ್ತವೆ. ಕಂಬಾರರ ನಾಟಕಗಳನ್ನು ಅಧ್ಯಯನ ಮಾಡಿದರೆ ಒಂದು ರೀತಿಯಲ್ಲಿ ಉತ್ತರ ಕರ್ನಾಟಕದ 'ಸಂಗ್ಯಾ ಬಾಳ್ಯಾ' ನಾಟಕದ ಮುಖಾಂತರ ಒಂದು ಹೊಸ ಪ್ರಯೋಗ ನಡೆದದ್ದು ತಿಳಿದುಬರುತ್ತದೆ. ಈ 'ಸಂಗ್ಯಾ ಬಾಳ್ಯಾ' ಸಣ್ಣಾಟದ ಮುಂದುವರಿಕೆಯಾಗಿ ಕಂಬಾರರು ಕಂಡುಬರುತ್ತಾರೆ. ಕಂಬಾರರ ವಾಙ್ಮಯದಲ್ಲಿ ಬೇರೆ ರೀತಿಯ ಪ್ರಯೋಗಗಳು ಇಲ್ಲವೆಂದಲ್ಲ. ಆದರೆ ಮೂಲತಃ ಅವು 'ಸಂಗ್ಯಾ ಬಾಳ್ಯಾ' ಪ್ರಯೋಗದ ಅರ್ಥಪೂರ್ಣವಾದ ವಿಸ್ತರಣೆಯಾಗಿವೆ ಎಂದೇ ಹೇಳಬೇಕು. ಏಕೆಂದರೆ ಅವರ ಬಹುಪಾಲು ನಾಟಕಗಳಲ್ಲಿ ಈ ಸಣ್ಣಾಟದ ಅಂಶಗಳನ್ನು ಕಾಣುತ್ತೇವೆ. ಅಲ್ಲದೆ, ಕಂಬಾರರು ತಮ್ಮ ನೆಚ್ಚಿನ ಕಾವ್ಯ ನಾಟಕಗಳಿಗೆ ಜಾನಪದ ಕಾವ್ಯ ಮತ್ತು ರಂಗಪ್ರಕಾರಗಳಿಂದ ವಸ್ತುವನ್ನು ಪಡೆದುಕೊಂಡಿದ್ದಾರೆ. ಆದರೆ ಅವುಗಳನ್ನು ಅವರು ತೀರ ಇದ್ದ ಹಾಗೆಯೇ ಉಪಯೋಗಿಸದೆ ಆಧುನಿಕ ಕವಿಯ ಮನೋಧರ್ಮದಲ್ಲಿ ಮಾರ್ಪಡಿಸಿ ಮರುಸೃಷ್ಟಿ ಮಾಡಿದ್ದಾರೆ. ಆದ್ದರಿಂದ ನಾವು ಕಂಬಾರರನ್ನು ಸರಳವಾಗಿ ಜಾನಪದ ಕವಿ, ನಾಟಕಕಾರರೆಂದು ಹೇಳಲಾಗುವುದಿಲ್ಲ. ಏಕೆಂದರೆ ಕಂಬಾರರು ಬಳಸಿಕೊಂಡ ಸೃಜನಶೀಲತೆಯಲ್ಲಿ ಜಾನಪದ ಸತ್ವ ಇದ್ದರೂ ಅದನ್ನು ನಿರ್ವಹಿಸುವ ಮನಸ್ಸು ಮಾತ್ರ ಆಧುನಿಕವಾಗಿರು ವುದನ್ನು ಕಾಣುತ್ತೇವೆ.

ಕಂಬಾರರು ಆಧುನಿಕ ಕಾಲದಲ್ಲಿ ಬರೆಯುತ್ತಿದ್ದರೂ ತಮ್ಮ ಅಭಿವ್ಯಕ್ತಿಗಾಗಿ ತಮ್ಮದೇ ಆದ 'ಶಿವಾಪುರ' ಎಂಬ ಪುರಾಣ ಲೋಕವನ್ನು ನಿರ್ಮಾಣ ಮಾಡಿಕೊಂಡಿರುವುದನ್ನು ಕಾಣುತ್ತೇವೆ. ಅಂದರೆ ವಾಸ್ತವವಾದಿ ಜಗತ್ತಿಗಿಂತ ತೀರ ಭಿನ್ನವಾದ ಒಂದು ಜಗತ್ತನ್ನು ನಿರ್ಮಿಸಿಕೊಳ್ಳುತ್ತಾರೆ. ಆದುದರಿಂದ ಕಂಬಾರರು ಈ ದೃಷ್ಟಿಯಿಂದ ಆಧುನಿಕ ಕನ್ನಡ ನಾಟಕ ಸಾಹಿತ್ಯದಲ್ಲಿ ಉಳಿದೆಲ್ಲ ಲೇಖಕರಿಗಿಂತ ವಿಶಿಷ್ಟ ಲೇಖಕರಾಗಿ ಕಂಡುಬರುತ್ತಾರೆ.

ಕಂಬಾರರ ಕಾವ್ಯ, ನಾಟಕ, ಕಾದಂಬರಿಗಳೆಲ್ಲವೂ ಜನ್ಮ ತಳೆಯುವುದು ಅವರ ಶಿವಾಪುರದಲ್ಲಿ, ಆ ಶಿವಾಪುರ ಎನ್ನುವುದು ಎಲ್ಲಿದೆ, ಎಂದು ಯಾರಾದರೂ ಪ್ರಶ್ನಿಸಿದರೆ ಅದು ಎಲ್ಲಿಯೋ ಬೆಳಗಾವಿ, ಗೋಕಾಕಗಳ ಆಸುಪಾಸಿನಲ್ಲಿ ಇದ್ದಂತೆ ಭಾಸವಾಗುತ್ತದೆ. ಅದು ಕವಿ, ನಾಟಕಕಾರ ಕಂಬಾರರು ನಿರ್ಮಿಸಿಕೊಂಡ ಗ್ರಾಮ-ಲೋಕ. ಆ ಶಿವಾಪುರದಲ್ಲಿ ಪುರಾಣ-ಇತಿಹಾಸಗಳೆಲ್ಲವೂ ನಡೆಯುತ್ತವೆ. ಕಂಬಾರರ ಬಾಲ್ಯಜೀವನದ ನೆನಪುಗಳೆಂಬಂತೆ ಈ ಶಿವಾಪುರ ಕಾಣುತ್ತದೆ. ಅವರ ನಾಟಕ ಮತ್ತು ಇತರ ಸಾಹಿತ್ಯವನ್ನು ಅರ್ಥ ಮಾಡಿಕೊಳ್ಳಲು 'ಶಿವಾಪುರ' ಎನ್ನುವುದನ್ನು ಗಮನಿಸಲೇಬೇಕಾಗುತ್ತದೆ. ಈ ಶಿವಾಪುರದ ಒಳಗಡೆ ಕೆಲವು ಮಿಥ್‌ಗಳನ್ನು ಸೃಷ್ಟಿಸುತ್ತಾರೆ. ಅವುಗಳಲ್ಲಿ ಒಂದು 'ಹೇಳತೇನ ಕೇಳ' ಕಾವ್ಯ. ಅದು ಒಂದು ಲಾವಣಿ. ಶಿವಾಪುರದ ಗೌಡನನ್ನು ಹುಲಿ ರೂಪದ ರಾಕ್ಷಸ ಕೊಂದು, ಗೌಡನ ವೇಷ ಧರಿಸಿ ಬರುವುದು, 'ಬಾಳಗೊಂಡ' ಎನ್ನುವ ಮಗನ ಹುಟ್ಟಿಗೆ ಕಾರಣವಾಗುವುದು. ಅವನಿಗೆ ಅನುಮಾನ ಬರುವುದು, ಅವನು ತನ್ನ ನಿಜವಾದ ತಂದೆಯೋ, ಅಲ್ಲವೋ ಎಂಬ ಪ್ರಶ್ನೆ ಮಗನಿಗೆ ಕಾಡುವುದು. ಅಪ್ಪನ ಭೂತ ಬಾವಿಯಲ್ಲಿ ಕಾಣಿಸಿಕೊಂಡು ನಡೆದ ಘಟನೆಯನ್ನು ಹೇಳುವುದು – ಈ ರೀತಿಯ 'ಮಿಥ್' ಇದಾಗಿದೆ. ಈ ಮಿಥ್‌ಅನ್ನು ಕಂಬಾರರು ಸುಮಾರು ೫೦ರ ದಶಕದ ಕೊನೆಯಲ್ಲೇ ಸೃಷ್ಟಿಸಿದರು. ಆಧುನಿಕ ವಿಮರ್ಶಕರು ಇದನ್ನು ವಿಧವಿಧವಾಗಿ ಚರ್ಚೆಗೊಳಪಡಿಸಿದ್ದಾರೆ. ಈ ಮಿಥ್‌ನ ಭೌತಿಕ ವಿವರಗಳು ನಮಗೆ ಸಿಗದಿದ್ದರೂ ಅದರ ತಾತ್ವಿಕ ವಿವರಗಳನ್ನು ಮಾತ್ರ ಗ್ರಹಿಸಲು ಸಾಧ್ಯವಾಗುತ್ತದೆ.

ಕಂಬಾರರ ನಾಟಕಗಳ ಕೆಲವು ಮುಖ್ಯ ರೂಪಗಳನ್ನು ಗಮನಿಸಿದರೆ, ನಾಟಕಗಳ ಒಂದು ಮಾದರಿಯೇ ಸಿದ್ಧವಾಗುತ್ತದೆ. 'ಹೇಳತೇನ ಕೇಳ' ಪುರಾಣದ ಮೂಲಕ ಕಂಬಾರರು 'ಋಷ್ಯಶೃಂಗ' ನಾಟಕವನ್ನು ಬರೆಯುತ್ತಾರೆ. 'ಋಷ್ಯಶೃಂಗ'ದ ಮುಂದುವರಿಕೆಯಾಗಿ 'ಹುಲಿಯ ನೆರಳು' ಎನ್ನುವ ಇನ್ನೊಂದು ನಾಟಕವನ್ನು ರಚಿಸುತ್ತಾರೆ. ಅದು ಮುಂದುವರಿದು ಈ ಹೊಸಕಾಲದ ಅನಾಥ ಭಾರತೀಯನ ಅಸ್ತಿತ್ವ ಏನು, ಎನ್ನುವುದನ್ನು ಶೋಧಿಸುವ ರೂಪಕವಾಗಿ ಭಾರತೀಯ ಸಮುದಾಯದ ಮನಃಸ್ಥಿತಿಯನ್ನು ಪರಿವರ್ತನೆ

ಹೊಂದುತ್ತದೆ. ಅಂದರೆ, ಕಂಬಾರರು ಪರಂಪರೆಯಿಂದ ಲಭ್ಯವಿರುವ ಜನಪದ ಪುರಾಣಗಳನ್ನು ನೇರವಾಗಿ ಇದ್ದಕ್ಕಿದ್ದಂತೆ ಬಳಸಿಕೊಳ್ಳದೆ ತಮ್ಮ ಕಾಲದ ಸೃಜನಶೀಲ ಅಗತ್ಯಗಳಿಗಾಗಿ ಮಾರ್ಪಾಡು ಮಾಡಿಕೊಂಡು ಬಳಸುತ್ತಾರೆ. ಯಾವುದೋ ಒಂದು ಹಳ್ಳಿಯ ಜಾನಪದದ ನಿರ್ದಿಷ್ಟ ಕಾಲ-ದೇಶಗಳು ಇಲ್ಲದ ಒಂದು ಕತೆ. ಈ ಹೊಸಕಾಲದ ವಸಾಹತುಶಾಹಿ ಅನುಭವಗಳನ್ನು ಅರ್ಥ ಮಾಡಿಕೊಳ್ಳಲು ಒಂದು ವಿಶಿಷ್ಟ ರೂಪಕವಾಗಿ ಬಳಸುವುದನ್ನು ಕಂಬಾರರ ಸಾಹಿತ್ಯದಲ್ಲಿ ಕಾಣುತ್ತೇವೆ. ಅಂದರೆ ಭಾರತೀಯ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ಸಂಕರಣ, ಆ ಕಾಲದ ಎಲ್ಲ ತಲ್ಲಣಗಳನ್ನು ಅವು ಸೂಚಿಸುತ್ತವೆ.

ಕಂಬಾರರು 'ಜೋಕುಮಾರಸ್ವಾಮಿ', 'ಸಾಯಿಕತೆ', 'ಕಾಡುಕುದುರೆ' ಇತ್ಯಾದಿ ನಾಟಕಗಳಲ್ಲಿ ಇನ್ನೊಂದು ಮಾದರಿಯನ್ನು ಕೊಡುತ್ತಾರೆ. ಸ್ಥೂಲವಾಗಿ ಹೇಳುವುದಾದರೆ ಇಲ್ಲಿಯೂ ಕೂಡ ಗೌಡ-ಗೌಡ್ತಿ ಇದ್ದಾರೆ. ಈ ನಾಟಕಗಳಲ್ಲಿ ಬರುವ ಜೋಕುಮಾರಸ್ವಾಮಿ, ದೇಸಾಯಿ, ಪಟೇಲ, ಗೌಡ್ತಿ ಇವರೆಲ್ಲ ದುಷ್ಟವಾದ ಎಲ್ಲ ಊಳಿಗಮಾನ್ಯ ವ್ಯವಸ್ಥೆಯ ದರ್ಪವನ್ನು ಮೈಗೂಡಿಸಿಕೊಂಡವರೆ. ದುರ್ಬಲನಾದ ಗಂಡ, ಹೆಂಡತಿಯ ಆಸೆಗಳನ್ನು ಈಡೇರಿಸದ ಷಂಡ, ಇಂಥವರಿಗೆ ಅಧಿಕಾರ ಮತ್ತು ಆರ್ಥಿಕ ಬಲವೂ ಇರುತ್ತದೆ. ಅವರ ನಾಟಕಗಳಲ್ಲಿ ಕೆಳವರ್ಗದ, ದುಡಿಯುವ ಸದೃಢನಾದ ಯುವಕನ ಪಾತ್ರವೂ ಬರುತ್ತದೆ. ಅದು ಅತೃಪ್ತಳಾದ ಗೌಡನ ಹೆಂಡತಿಯ ಬಯಕೆಗಳನ್ನು ಶಾರೀರಿಕವಾಗಿ ಈಡೇರಿಸುವ, ಯಜಮಾನ ವ್ಯವಸ್ಥೆಯ ವಿರುದ್ಧ ಹೋರಾಡಲು, ಪ್ರತಿಭಟಿಸಲು ರೂಪ ತಳೆದಿರುವ ಪಾತ್ರವೆಂದು ತೋರುತ್ತದೆ. ಈ ಆಕೃತಿಗಳು ಎರಡು ರೀತಿಯ ಚಾಲನೆಯನ್ನು ಪಡೆಯುತ್ತವೆ. ಒಂದು ಯಜಮಾನ ಸಂಸ್ಕೃತಿಯ ವಿರುದ್ಧ ಕೆಳಸ್ತರದ ಪ್ರತಿಭಟನೆಗಳು ಜಾಗೃತವಾಗುತ್ತಿರುವುದನ್ನು ಸೂಚಿಸುತ್ತವೆ. ಇನ್ನೊಂದು, ಈ ಪ್ರತಿಭಟನೆಗೆ ಇನ್ನೂ ಸ್ಪಷ್ಟವಾದ ಸಾಮಾಜಿಕ, ರಾಜಕೀಯ ರೂಪ ಸಿಕ್ಕಿಲ್ಲವೆಂಬುದನ್ನು ಇಲ್ಲಿ ತೋರಿಸಲಾಗಿದೆ. ಅಲ್ಲದೆ, ಈ ಪ್ರತಿಭಟನೆ ಲೈಂಗಿಕ ಶಕ್ತಿಯಾಗಿ, ಸಾಂಕೇತಿಕವಾಗಿ ಹೊರಹೊಮ್ಮಿರುವುದನ್ನು ಈ ನಾಟಕಗಳಲ್ಲಿ ಕಾಣಬಹುದು.

'ಕಾಡು ಕುದುರೆ', 'ತುಕ್ರನ ಕನಸು', 'ಹರಕೆಯ ಕುರಿ', 'ಸಾಯಿಕತೆ' ನಾಟಕಗಳಲ್ಲಿ ಬೇರೆ ಬೇರೆ ಸ್ತರಗಳಲ್ಲಿ ಒಂದು ಬಗೆಯ ಲೈಂಗಿಕ ವಿಮೋಚನೆ ಮತ್ತು ರಾಜಕೀಯ ಪ್ರತಿಭಟನೆ ಏಕಕಾಲದಲ್ಲಿ ನಡೆಯುವುದನ್ನು ನೋಡಬಹುದು. ಅಂಚಿಗೆ ಸರಿಸಲ್ಪಟ್ಟವರು ಎಂದು ಯಾರನ್ನು ಕರೆಯುತ್ತೇವೆಯೋ ಅಂಥವರು ಈಗ ಮುಖ್ಯರಾಗುತ್ತಿದ್ದಾರೆ. ಕಾರಣ ಇಲ್ಲಿ ಮುಖ್ಯಸ್ಥಾನದಲ್ಲಿರುವ ಗೌಡ, ಪಟೇಲ, ದೇಸಾಯಿ ಮತ್ತು ಅವರ ಊಳಿಗಮಾನ್ಯ ದರ್ಪವ್ಯವಸ್ಥೆಯನ್ನು ಪ್ರಶ್ನಿಸುವಂತೆ ಕಾಣುತ್ತಾರೆ. ಇವರೆಲ್ಲ ಕೆಳಜಾತಿಗೆ ಸೇರಿದ, ಶ್ರಮಿಕ ಸಮುದಾಯದಿಂದ ಬಂದವರಾಗಿರುತ್ತಾರೆ. ಕಂಬಾರರ ಈ ಬಗೆಯ ನಾಟಕಗಳಲ್ಲಿ ಇವರ ವಿಮೋಚನೆ ಒಂದು ಹಂತದಲ್ಲಿ ಸಾಧ್ಯವಾದಂತೆ ಭಾಸವಾಗುತ್ತದೆ. ಅದು ಈ ಕೆಳವರ್ಗದ ಗಂಡುಗಳು, ಮೇಲ್ವರ್ಗದ ಹೆಣ್ಣುಗಳ ಜೊತೆಯಲ್ಲಿ ಕೂಡುವುದರ ಮುಖಾಂತರ ಎಂಬುದು ಗಮನಾರ್ಹ.

ಚಂದ್ರಶೇಖರ ಕಂಬಾರ ಅವರು ಮನುಷ್ಯ ಅವಸ್ಥೆಯ ಅಸ್ತಿತ್ವದ ಹುಡುಕಾಟದ ವಸ್ತುವನ್ನಿಟ್ಟುಕೊಂಡು ಕೆಲವು ನಾಟಕಗಳನ್ನು ಬರೆದಿದ್ದಾರೆ. ತನ್ನ ಸ್ವರೂಪ ಏನು ? ತಾನು ಏನು ? ತನ್ನ ವ್ಯಕ್ತಿತ್ವ ಏನು ? – ಇವುಗಳನ್ನು ಕುರಿತು ಅವರು ಬಹಳ ದಿನಗಳಿಂದ ತಮ್ಮ ಸೃಜನಶೀಲ ಜೀವನದ ಬೇರೆ ಬೇರೆ ಘಟ್ಟಗಳಲ್ಲಿ ಬರೆಯುತ್ತ ಬಂದಿದ್ದಾರೆ. ಅವರ ಪ್ರಾರಂಭದ ನಾಟಕಗಳಲ್ಲಿ ಮತ್ತು ಅವರಿಗೆ ನಾಟಕಕಾರರೆಂಬ ಪ್ರಸಿದ್ಧಿ ತಂದುಕೊಟ್ಟ ಇಂದಿನ ನಾಟಕಗಳಲ್ಲಿ ಈ ರೀತಿಯ ರಚನೆಗಳು ಸಿಗುತ್ತವೆ.

'ನೆರಳಿನ ಜೋಡಿ ಹಾದರ ಮಾಡಿ' ಅನ್ನುವ ಪ್ರಸಿದ್ಧವಾದ ಪದ್ಯವನ್ನು ಕಂಬಾರ ಅವರು ರಚಿಸಿದ್ದಾರೆ. ಡಿ. ಆರ್. ನಾಗರಾಜ್ ಅವರು ತಮ್ಮ 'ಅಮೃತ ಮತ್ತು ಗರುಡ' ಎಂಬ ಸಂಕಲನದಲ್ಲಿ ಈ ಪದ್ಯದ ವಿಮರ್ಶೆ ಬರೆದಿದ್ದಾರೆ. ಅವರು ಈ ಹಿಂದೆ 'ನಾರ್ಸಿಸಸ್' ಎನ್ನುವ ನಾಟಕವನ್ನು ೬೦ರ ದಶಕದಲ್ಲಿ ರಚಿಸಿದ್ದರು. ಇತ್ತೀಚೆಗೆ 'ಸಿರಿಸಂಪಿಗೆ' ಎಂಬ ನಾಟಕವನ್ನು ರಚಿಸಿದ್ದಾರೆ. ಇವೆಲ್ಲವು ಕೆದಕುವ ಪ್ರಶ್ನೆಗಳು ಸತ್ಯ ಯಾವುದು, ಬಿಂಬ ಯಾವುದು, ಪ್ರತಿಬಿಂಬ ಯಾವುದು ಎಂಬುವಂತಹವು. ಪ್ರತಿಯೊಂದು ವ್ಯಕ್ತಿತ್ವಕ್ಕೂ ಒಂದು ನೆರಳಿದೆ. ಆ ನೆರಳು ಅವನನ್ನು ಉದ್ದಕ್ಕೂ ಹಿಂಬಾಲಿಸುವುದು. ಪ್ರತಿಯೊಂದು ವ್ಯಕ್ತಿತ್ವದಲ್ಲೂ ಕೂಡ ನಮಗೆ ಮೇಲುನೋಟಕ್ಕೆ ವಿರುದ್ಧ ಅನ್ನಿಸುವ ಅಂಶಗಳು ಕಾಣುತ್ತಿರುತ್ತವೆ. ಮನುಷ್ಯ ಇಡಿಯಾಗಿ ಶ್ರಮಿಸಬೇಕು. ಒಂದು ಸಮಗ್ರ ವ್ಯಕ್ತಿತ್ವದ ಶೋಧಕ್ಕಾಗಿ ಪ್ರಯತ್ನಿಸಬೇಕು. ತನ್ನ ವ್ಯಕ್ತಿತ್ವವನ್ನು ಛಿದ್ರಮಾಡಿಕೊಳ್ಳಬಾರದು. ಅಂದರೆ, ಅದನ್ನು ಹೋಳುಮಾಡಿಕೊಳ್ಳಬಾರದು. ಯಾಕೆಂದರೆ, ಈ ಪ್ರಶ್ನೆ ಆಧುನಿಕ ಕಾಲದಲ್ಲಿ ಬಹಳ ದೊಡ್ಡ ಪ್ರಶ್ನೆಯಾಗಿದೆ. ಅದು ಪಾಶ್ಚಾತ್ಯ ಮತ್ತು ಪೌರ್ವಾತ್ಯ ಎನ್ನುವ ಒಂದು ಛಿದ್ರತೆ, ಇವತ್ತು ನಾವು ಕೇವಲ ಮನುಷ್ಯರು ಎನ್ನುವ ನೆಲೆಯಲ್ಲಿ ಪ್ರಪಂಚದಲ್ಲಿ

## ಸಾದರ ಸ್ವೀಕಾರ

**ಮಿಶ್ರಕೃಷಿ - ಮೌಲ್ಯವರ್ಧನೆ - ನೇರ ಮಾರುಕಟ್ಟೆ : ಎಸ್. ಎಂ. ಪಾಟೀಲರ ಮಾದರಿ** *ಲೀಲಾ ನಾ. ಕೌಜಗೇರಿ*
**ಪುಟ :** *೨೮* **ಬೆಲೆ :** *ರೂ. ೨೦*
**ಕೃಷಿ ಮಾಧ್ಯಮ ಕೇಂದ್ರ,** ನಂ. ೧೧೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ ಧಾರವಾಡ - ೫೮೦ ೦೦೮

**ನಮ್ಮ ಸಂಸಾರಿ ಮರಗಳು** *ಸಿ. ಎನ್. ಶ್ರೀನಾಥ್*
**ಪುಟ :** *೨೦* **ಬೆಲೆ :** *ರೂ. ೫೦*
**ಧ್ವನ್ಯಾಲೋಕ ಪ್ರಕಾಶನ,** ಮೈಸೂರು

**೩೫ ಗಜಲುಗಳು ೪೫ ಹೈಕುಗಳು** *ಸಿದ್ಧರಾಮ ಹಿರೇಮಠ*
**ಪುಟ :** *೧೩೬* **ಬೆಲೆ :** *ರೂ. ೧೦೦*
**ಚಾಮರ ಪ್ರಕಾಶನ,** ೩೧/C-೨ ಇಂಡಸ್ಟ್ರಿಯಲ್ ಸಬರ್ಬ್ ೨ನೇ ಹಂತ, ಮೈಸೂರು - ೫೭೦ ೦೨೩

**ನಂದಗೋಕುಲದಲ್ಲೊಂದು ಪಾಪಪ್ರಜ್ಞೆ** (ಕಥಾ ಸಂಕಲನ)
೨೧ ಕಥೆಗಳು *ಚಂದ್ರಶೇಖರ ಜಿ. ತೋಟದ*
**ಪುಟ :** *೧೪೦* **ಬೆಲೆ :** *ರೂ. ೮೦*
**ರೂಪಾ ಪ್ರಕಾಶನ,** ವಿದ್ಯಾನಗರ ೨ನೆಯ ತಿರುವು, ತಿಪಟೂರು - ೫೭೨ ೨೦೧ (ತುಮಕೂರು ಜಿಲ್ಲೆ)

**ಬಾಡಿಗೆ ದೇವರು** (ಕಥಾ ಸಂಕಲನ) *ಡಾ॥ ಹೆಬ್ಬಾಲೆ ಕೆ. ನಾಗೇಶ್*
**ಪುಟ :** *೯೨* **ಬೆಲೆ :** *ರೂ. ೯೫*
**ರುಚಿರ ಪ್ರಕಾಶನ,** ಎಂ. ಪಿ. ಪ್ರಕಾಶ್‌ನಗರ ಹೊಸಪೇಟೆ - ೫೮೩ ೨೦೧

**ಕರ್ನಾಟಕದಲ್ಲಿ ಶವಸಂಸ್ಕಾರ** (ಲೇಖನಗಳು) *ಸಂ. : ರೇಣುಕಾ ಕೋಡಗುಂಟಿ*
**ಪುಟ :** *೨೬೦* **ಬೆಲೆ :** *ರೂ. ೨೦೦*
**ಬಂಡಾರ ಪ್ರಕಾಶನ,** ಮಸ್ಕಿ - ೫೮೪ ೧೨೪ (ರಾಯಚೂರು ಜಿಲ್ಲೆ)

**ಯೋಗ ದರ್ಶನ** *ಎಸ್. ಎಸ್. ಹಿರೇಮಠ*
**ಪುಟ :** *೨೫೨* **ಬೆಲೆ :** *ರೂ. ೨೫೦*
**ಸಮತಾ ಪ್ರಕಾಶನ,** ಸಾಣಿಕೊಪ್ಪ, ಜಿಲ್ಲೆ ಬೆಳಗಾವಿ

**ಪಥ** (ಲೇಖನ ಸಂಗ್ರಹ) *ಅರವಿಂದ ಚೊಕ್ಕಾಡಿ*
**ಪುಟ :** *೧೬೨* **ಬೆಲೆ :** *ರೂ. ೯೭*

**ಸಾಹಿತ್ಯ ಚಂದನ** (ಲೇಖನ ಸಂಗ್ರಹ) *ಡಾ॥ ಬಿ. ಎಸ್. ಸ್ವಾಮಿ*
**ಪುಟ :** *೨೦೬* **ಬೆಲೆ :** *ರೂ. ೧೨೫*

**ಸಮನ್ವಯ** (ಲೇಖನ ಸಂಕಲನ) *ಅರವಿಂದ ಚೊಕ್ಕಾಡಿ*
**ಪುಟ :** *೧೫೮* **ಬೆಲೆ :** *ರೂ. ೯೫*

**ನಮ್ಮನ್ನಾಳುವ ಒಲವುಗಳು ಮತ್ತು ಇತರ ಬರಹಗಳು** *ರಹೀಂ ಉಜಿರೆ*
**ಪುಟ :** *೧೨೮* **ಬೆಲೆ :** *ರೂ. ೮೦*

**ಕಾಡ್ನತಾವ ನೆನಪು** (ವ್ಯಕ್ತಿ ಚಿತ್ರಗಳು) *ಕಗ್ಗೆರೆ ಪ್ರಕಾಶ್*
**ಪುಟ :** *೧೨೮* **ಬೆಲೆ :** *ರೂ. ೮೦*
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ದಾಮಿನಿ ಸಾಹಿತ್ಯ,** ನಂ. ೫೫೯, ೯ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು - ೦೪೦

**ತಂತ್ರಗಾರ್ತಿ** (ಮಕ್ಕಳ ನಾಟಕ) *ಪಾರ್ವತಿ ಜಿ. ಐತಾಳ್*
**ಪುಟ :** *೫೨* **ಬೆಲೆ :** *ರೂ. ೫೦*
**ಜನಪ್ರತಿನಿಧಿ ಪ್ರಕಾಶನ,** ಕಾಲೇಜ್ ರಸ್ತೆ, ಕುಂದಾಪುರ - ೫೭೬ ೨೦೧

**ಕನ್ನಡ ಸಾಹಿತ್ಯ : ತತ್ವ ಮತ್ತು ವಿಮರ್ಶೆ - ಕೆಲವು ನೆಲೆಗಳು** *ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ*
**ಪುಟ :** *೧೫೬* **ಬೆಲೆ :** *ರೂ. ೭೫*
**ದಿವ್ಯಚಂದ್ರ ಪ್ರಕಾಶನ,** ನಂ. ೪೫, ಪಾಪಣ್ಣನ ತೋಟ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

**ನೆನಪಾಗುತ್ತಿಲ್ಲ** (ಕವನ ಸಂಕಲನ) *ಈಶ್ವರ ಕಟ್ಟಿಮನಿ*
**ಪುಟ :** *೧೧೨* **ಬೆಲೆ :** *ರೂ. ೧೦೦*
**ಸಾಧು ಪ್ರಕಾಶನ,** ದೇವರ ಗೋನಾಲ - ೫೮೫ ೨೨೦, ತಾ. ಸುರಪುರ, ಜಿ. ಯಾದಗಿರಿ.

**ಬೈಜಿಕ ವಿದ್ಯುತ್ - ಒಂದು ಪರಿಚಯ** *ಡಾ॥ ಎಮ್. ಎಸ್. ಎಸ್. ಮೂರ್ತಿ*
**ಪುಟ :** *೧೨೮* **ಬೆಲೆ :** *ರೂ. ೭೦*

**ಇಂಧನಗಳು** *ಡಾ॥ ಹೆಚ್. ರಾಮಚಂದ್ರಸ್ವಾಮಿ*
**ಪುಟ :** *೮೦* **ಬೆಲೆ :** *ರೂ. ೫೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಭಿನ್ನವಾಗಿ ನಿಲ್ಲಲಿಕ್ಕೆ ಆಗುವುದಿಲ್ಲ. ಇಂದು ಮನುಷ್ಯ ಕುಲ ಎನ್ನುವುದೇ ಜಾತಿ-ಜನಾಂಗಗಳಲ್ಲಿ, ಗಂಡು-ಹೆಣ್ಣು ಎನ್ನುವ ಭೇದ ಭಾವಗಳಲ್ಲಿ ಒಡೆದುಹೋಗಿದೆ ಅಥವಾ ಆಧುನಿಕ ಕಾಲದಲ್ಲಿ ನಮಗೆ ಭಾವನೆ ಮತ್ತು ಬೌದ್ಧಿಕತೆಗಳ ನಡುವೆ ಒಂದು ಕಂದರ ಉಂಟಾಗಿದೆ.




ಇಲ್ಲಿ ಚರ್ಚೆಗೊಳಪಡಿಸಿದ ಮೇಲಿನ ಚಿತ್ರಣ 'ಸಿರಿಸಂಪಿಗೆ' ಎನ್ನುವ ನಾಟಕದಲ್ಲಿ ಬರುತ್ತದೆ. ಇದರಲ್ಲಿ ಎರಡು ರೀತಿಯಲ್ಲಿ ಛಿದ್ರೀಕರಣ ವ್ಯಕ್ತವಾಗುತ್ತದೆ. ಒಂದು ಕಡೆಗೆ ರಾಜಕುಮಾರ ಶಿವನಾಗದೇವನಿಗೆ ಅವನ ತಾಯಿ ಮದುವೆ ಮಾಡಬೇಕೆಂದು ಯೋಚಿಸುತ್ತಾಳೆ. ಆದರೆ ಶಿವನಾಗದೇವ ತನಗೆ ಬೇಕಾದ ಹೆಣ್ಣನ್ನು ತಾನೇ ಹುಡುಕುತ್ತಿದ್ದೇನೆ ಎಂದು ಹೇಳುತ್ತಾನೆ. ಕಡೆಗೆ 'ದೀಪದ ಮೊಲ್ಲೆ' ಎನ್ನುವ ಒಂದು ಅಂಶ (ಜ್ಯೋತಿ) ತನ್ನಲ್ಲಿ ಸೇರಿಕೊಂಡಿತು ಎಂದು ಅವನಿಗೆ ಅನ್ನಿಸುತ್ತದೆ. ವಾಸ್ತವದಲ್ಲಿ ಅವನು ತನ್ನಲ್ಲಿ ತನ್ನ ಪ್ರತಿಬಿಂಬವನ್ನೇ ಮೋಹಿಸಿಕೊಳ್ಳುತ್ತಿರುತ್ತಾನೆ. ದೀಪದ ಮೊಲ್ಲೆ ಎಂಬುದು ಬೇರೆ ಯಾವುದೂ ಅಲ್ಲ. ಅದು ಅವನ ವ್ಯಕ್ತಿತ್ವದ ಒಂದು ಅಂಶವೇ ಆಗಿರುತ್ತದೆ. ಆಮೇಲೆ ಮದುವೆಗೆ ಒಪ್ಪಿದ್ದೇನೆ ಎಂದು ಶಿವನಾಗದೇವ ತಾಯಿಗೆ ಹೇಳುತ್ತಾನೆ. ಆದರೆ ''ಒಂದು ಷರತ್ತು. ನನ್ನನ್ನು ಸೀಳಿಬಿಟ್ಟು ಎರಡು ತುಂಡಾದ ಮೇಲೆ ಒಂದೊಂದು ತುಂಡನ್ನು ಒಂದೊಂದು ಹೂವಿನ ಗಡಿಗೆಯಲ್ಲಿ ಹೂಳಬೇಕು. ಸ್ವಲ್ಪ ದಿನಗಳಾದ ಮೇಲೆ ಗಡಿಗೆಯನ್ನು ಒಡೆಯಬೇಕು. ಒಂದು ಗಡಿಗೆಯಿಂದ ನಾನು ಬರುತ್ತೇನೆ. ಇನ್ನೊಂದರಿಂದ ದೀಪದ ಮೊಲ್ಲೆ ಬರುತ್ತಾಳೆ. ಆಗ ನಮ್ಮಿಬ್ಬರಿಗೆ ಮದುವೆ'' ಎನ್ನುತ್ತಾನೆ. ಇದೊಂದು ರೀತಿಯ ಛಿದ್ರೀಕರಣ.

ಎರಡನೇ ಛಿದ್ರೀಕರಣ ಈ ನಾಟಕದಲ್ಲಿ ಯಾವ ಹೆಣ್ಣೂ ಬರದೆ ಒಂದು ಗಡಿಗೆಯಿಂದ ಒಂದು ಹಾವು ಬಂದರೆ ಇನ್ನೊಂದರಿಂದ ಈ ರಾಜಕುಮಾರ ಬರುತ್ತಾನೆ. ಮುಂದೆ ತಾಯಿಯ ಇಚ್ಛೆಯಂತೆ ಸಿರಿಸಂಪಿಗೆಯೊಂದಿಗೆ ರಾಜಕುಮಾರನ ಮದುವೆಯಾಗುತ್ತದೆ. ಆದರೆ ರಾಜಕುಮಾರ ಸಿರಿಸಂಪಿಗೆಯನ್ನು ಒಮ್ಮೆಯೂ ಕೂಡುವುದಿಲ್ಲ. ಏನೋ ಕಳೆದುಹೋಗಿರುವುದನ್ನು ಹುಡುಕುತ್ತಿರುವಂತೆ ಭಾಸವಾಗುತ್ತಾನೆ. ಕೊಳದೊಳಗೆ ತನ್ನ ಪ್ರತಿಬಿಂಬವನ್ನು ನೋಡುವುದು, ಅದನ್ನು ಮೋಹಿಸುವುದು. ಅದನ್ನು ತಿನ್ನುವುದಕ್ಕೆ ಪ್ರಯತ್ನಿಸುವುದು ಮುಂತಾಗಿ ವರ್ತಿಸುತ್ತಿರುತ್ತಾನೆ.

ಕಥೆಯ ದೃಷ್ಟಿಯಿಂದ ಇನ್ನೊಂದು ಕಡೆಗೆ ಆ ಗಡಿಗೆಯಿಂದ ಹೊರಬಂದ ಹಾವು ಕಾಳಿಂಗ ಮನುಷ್ಯವೇಷ ಧರಿಸಿ ಶಿವನಾಗದೇವನ ವೇಷದಲ್ಲಿಯೇ ಸಿರಿಸಂಪಿಗೆಯನ್ನು ಕೂಡುತ್ತದೆ. ಸಿರಿಸಂಪಿಗೆ ಸಂದಿಗ್ಧತೆಗೆ ಒಳಗಾಗುತ್ತಾಳೆ. ಇವರಲ್ಲಿ ಯಾರು ನಿಜ ಎಂಬ ಯೋಚನೆಗೊಳಗಾಗುತ್ತಾಳೆ. ಗಂಡ ಹಗಲು ಹೊತ್ತಿನಲ್ಲಿ ಹತ್ತಿರ ಸುಳಿಯುವುದೇ ಇಲ್ಲ. ಎಲ್ಲೆಲ್ಲಿಯೋ ಅಲೆಯುತ್ತಿರುತ್ತಾನೆ. ರಾತ್ರಿ ನನ್ನ ಕಡೆಗೆ ಬರುತ್ತಾನೆ. ಹಗಲೊತ್ತು ಮಾತನಾಡುವುದಿಲ್ಲ. ರಾತ್ರಿ ಹೊತ್ತು ಸರಸವಾಡುತ್ತಾನೆ. ಹಗಲಿನಲ್ಲಿ ನಿರುತ್ಸಾಹ, ರಾತ್ರಿಯಲ್ಲಿ ಸರಸ. ಅವಳು ಗರ್ಭಧರಿಸಿ ಗಂಡುಮಗುವಿಗೆ ಜನ್ಮ ನೀಡುತ್ತಾಳೆ. ರಾಜಕುಮಾರನಿಗೆ ಸಿರಿಸಂಪಿಗೆಯ ಮೇಲೆ ಸಂಶಯ ಬರುತ್ತದೆ. ಏಕೆಂದರೆ ಹೆಂಡತಿಯ ಜೊತೆಯಲ್ಲಿ ಒಮ್ಮೆಯೂ ಬೆರೆತಿಲ್ಲ. ಕೊನೆಗೆ ನಾಗದಿವ್ಯ ಏರ್ಪಟ್ಟು ಕಾಳಿಂಗನಿಗೂ ರಾಜಕುಮಾರನಿಗೂ ದ್ವಂದ್ವ ಯುದ್ಧವಾಗುತ್ತದೆ. ಇಬ್ಬರೂ ಸಾಯುವ ಸ್ಥಿತಿ ಉಂಟಾಗುತ್ತದೆ. ಕೊನೆಗೆ ಶಿವನಾಗದೇವ ಸಿರಿಸಂಪಿಗೆಗೆ, ''ನಮ್ಮ ಮಗ ಸೀಳಿಕೊಳ್ಳದಂತೆ ನೋಡಿಕೋ'' ಎಂದು ಹೇಳುವ ಮಾತು ಬಹಳ ಮುಖ್ಯವಾಗುತ್ತದೆ. ಅಂದರೆ, ಈ ನಾಟಕ ಒಂದು ತಾತ್ವಿಕ ಪ್ರಶ್ನೆಯನ್ನು ಎತ್ತುತ್ತದೆ. ತತ್ವಶಾಸ್ತ್ರಜ್ಞರು ಕೂಡ ಈ ಪ್ರಶ್ನೆಯನ್ನು ಚರ್ಚೆಮಾಡಿದ್ದಾರೆ. ಇಲ್ಲಿರುವ ಸಮಸ್ಯೆ ಆಧುನಿಕ ಮನುಷ್ಯ ತನ್ನ ವ್ಯಕ್ತಿತ್ವವನ್ನು ಕೆಲವು ಹೋಳುಗಳಾಗಿ ಮಾಡಿಕೊಂಡಿದ್ದಾನೆ. ಆದರೆ ಹಾಗೆ ಮಾಡಿಕೊಳ್ಳಲಿಕ್ಕೆ ಸಾಧ್ಯವಿಲ್ಲ. ಹಾಗೆ ಮಾಡಿಕೊಂಡರೆ ಅದರ ಅರ್ಥ ಬೇರೆಯೇ ಆಗುತ್ತದೆ. ಪ್ರತಿಯೊಂದು ವ್ಯಕ್ತಿತ್ವದಲ್ಲೂ ಆಕಾರ ಬೇರೆ ಬೇರೆ ಆದರೂ ಗಂಡಿನ ಅಂಶ ಮತ್ತು ಹೆಣ್ಣಿನ ಅಂಶ ಎರಡೂ ಇರುತ್ತವೆ. ಕೆಲವರಲ್ಲಿ ಕೆಲವು ಅಂಶಗಳು ಪ್ರಧಾನವಾಗಿ ಪ್ರಕಟವಾಗುತ್ತವೆ. ನಮ್ಮಲ್ಲಿ ಕೆಲವು ಗಾದೆ ಮಾತುಗಳಿವೆ. ಅವುಗಳ ಪೂರ್ವಾಪರವನ್ನು ನೋಡಿದರೆ ಈ ಅಂಶ ನಮಗೆ ಮನದಟ್ಟಾಗುತ್ತದೆ. ಉದಾಹರಣೆಗೆ, ಒಬ್ಬ ಹುಡುಗ ನಮ್ಮ ನಿರೀಕ್ಷೆಗೆ ತಕ್ಕ ಹಾಗೆ ಹುಡುಗತನ ತೋರದಿದ್ದರೆ ಅವನನ್ನು 'ಹೆಣ್ಣಿಗ', 'ಹಿಜಡಾ' ಎಂದು ಕರೆಯುತ್ತೇವೆ. ಹಾಗೇನೇ ಒಬ್ಬ ಹುಡುಗಿ ನಮ್ಮ ನಿರೀಕ್ಷೆಗೆ ತಕ್ಕ ಹಾಗೆ ಇಲ್ಲದಿದ್ದರೆ ಅವಳನ್ನು 'ಗಂಡುಬೀರಿ' ಎಂದು ಕರೆಯುತ್ತೇವೆ. ನಮ್ಮ ಸಂಸ್ಕೃತಿ ಈ ತರಹ ಕಲ್ಪಿಸಿಕೊಂಡಿರುವುದು ಒಂದು ಅದ್ಭುತ ರೂಪಕವೇ ಸರಿ. ಇದನ್ನೇ ನಾವು ಮುಂದುವರಿದು 'ಅರ್ಧನಾರೀಶ್ವರ' ಕಲ್ಪನೆಯನ್ನು ಹುಟ್ಟುಹಾಕಿ ಇಡೀ ಎನ್ನುವುದು, ಅದನ್ನು ಮತ್ತೆ ದೈವವೆಂದು ಹೇಳುತ್ತೇವೆ. ಇದು ಗಂಡು ಹೆಣ್ಣಿನ ಅಂಶಗಳು ಬೆರೆತಿರುವಂಥ ಸ್ಥಿತಿ. ಮನುಷ್ಯನ ವ್ಯಕ್ತಿತ್ವವೇ ಹಾಗೆ. ಅಂದರೆ, ಆಗಲೇ ನಮ್ಮಲ್ಲಿ ಹೇಳಿದ ಹಾಗೆ ಸಹಜವಾಗಿ ಗಂಡಿನ ಅಂಶ, ಹೆಣ್ಣಿನ ಅಂಶಗಳೆರಡೂ ಇರುತ್ತವೆ. ನಾವು ಇದನ್ನು ಸೀಳಿಕೊಂಡು ಪ್ರತ್ಯೇಕವಾಗಿ ಒಂದು ಗಂಡು, ಒಂದು ಹೆಣ್ಣು ಎಂದು ವಿಭಜಿಸಲಿಕ್ಕೆ ಹೋದರೆ ಅನಾಹುತಗಳು ಸಂಭವಿಸುತ್ತವೆ. ಆದ್ದರಿಂದಲೇ ಮನುಷ್ಯನ ನಾಗರಿಕತೆಯಲ್ಲಿ ಲಿಂಗಭೇದ ಹುಟ್ಟಿಕೊಂಡದ್ದನ್ನು ಕಾಣುತ್ತೇವೆ. ಗಂಡು ಎಂದರೆ ಹೀಗೆ, ಹೆಣ್ಣು ಎಂದರೆ ಹೀಗೆ ಎಂಬ ಕೆಲವು ನಿರ್ದಿಷ್ಟ ಗುಣಲಕ್ಷಣಗಳು ಇರಬೇಕು ಎಂದು ನಿರ್ಧರಿಸಿಬಿಟ್ಟಿದ್ದೇವೆ. 'ಹೆಣ್ಣು ನಕ್ಕು ಕೆಟ್ಟಿತು - ಗಂಡು ಅತ್ತು ಕೆಟ್ಟಿತು' ಎಂಬಂತಹ ಬಹಳ ವಿಚಿತ್ರವಾದ ಗಾದೆಗಳನ್ನು ನಿರ್ಮಿಸಿದ್ದೇವೆ. ಆದರೆ ಗಂಡಸಾದ ಮಾತ್ರಕ್ಕೆ ಅವನ ಹೃದಯ ಮಿಡಿಯುವುದಿಲ್ಲವೇ ? ಅಥವಾ ಹೆಣ್ಣು ಅಂದ ತಕ್ಷಣ ಅವಳ ಹೃದಯದಲ್ಲಿ ವೀರತ್ವದ ಗುಣಗಳು ಇರಬಾರದೇ ? ಇದನ್ನೇ ನಾವು ಬೇರೆಬೇರೆ ಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದೇವೆ. ಅಂದರೆ ಕಂಬಾರರ ಈ ನಾಟಕಗಳು ಒಂದು ದುರಂತವನ್ನು ಹೇಳುತ್ತವೆ. ಅದೆಂದರೆ, ಗಂಡು-ಹೆಣ್ಣು ಎಂದು ನಾವು ಮಾಡಿಕೊಂಡಿರುವುದು. ಹಾಗೆಯೇ ಈ ಮನಸ್ಸು ಮತ್ತು ದೇಹಗಳನ್ನು ವಿಂಗಡಣೆ ಮಾಡಿಕೊಳ್ಳಲು ಆಗುತ್ತದೆಯೇ ? ಅಥವಾ ದೇಹವನ್ನು ಸೀಳಿಕೊಳ್ಳಲು ಆಗುತ್ತದೆಯೇ ? ಕಾಳಿಂಗ ಒಂದು ಶರೀರವಾಗಿ, ರಾಜಕುಮಾರ ಕೇವಲ ಮನಸ್ಸಾಗಿ ಇರುವ ಅಸ್ತಿತ್ವ ಎಷ್ಟು ದುರ್ಬಲ ಮತ್ತು ಅಪೂರ್ಣ ! ಅಂದರೆ ಇದು ಸಾಧ್ಯವೇ ? ಇಂಥ ವಿಭಜನೆ ಎಂದಿಗೂ ಸಾಧ್ಯವಿಲ್ಲ. ಅದಕ್ಕೋಸ್ಕರವೇ ನಾಟಕದ ಕೊನೆಯಲ್ಲಿ ಈ ಎರಡು ಬಗೆಯ ಸೀಳುವಿಕೆಗೆ ಒಳಗಾದ ಶಿವನಾಗದೇವನ ಬಾಯಿಯಲ್ಲಿ, ''ನಮ್ಮ ಮಗ ಸೀಳುಕೊಳ್ಳದ ಹಾಗೆ ನೋಡಿಕೋ'' ಎನ್ನುವ ಮಾತು ಬರುತ್ತದೆ. ಆದುದರಿಂದ ಈ ನಾಟಕದಲ್ಲಿ ಕೂಡ ನಾವು ಬಹಳ ಮುಖ್ಯವಾಗಿ ಗಮನಿಸಬೇಕಾದುದು ಮೇಲುನೋಟಕ್ಕೆ ಒಂದು ಜಾನಪದ ಕಥೆ. ವಾಸ್ತವವಾದ ಯಾವ ತರ್ಕಕ್ಕೂ ಸಿಗದ ಒಂದು ಕಥೆಯನ್ನು ಇಟ್ಟುಕೊಂಡು ಆಧುನಿಕ ಮನುಷ್ಯನ ಮನಸ್ಸಿನ ಒಂದು ಅತ್ಯಂತ ಮುಖ್ಯವಾದ ತಾತ್ವಿಕ ತುಡಿತಕ್ಕೆ ಕಂಬಾರರು ಈ ನಾಟಕದಲ್ಲಿ ಒಂದು ಆಕೃತಿಯನ್ನು ಕೊಟ್ಟಿದ್ದಾರೆ. ಹೀಗಾಗಿ ಕಂಬಾರರ ನಾಟಕಗಳನ್ನು ವಾಸ್ತವವಾದಿ ತರ್ಕಗಳಿಂದ ಎದುರಿಸುವುದಕ್ಕೆ ಆಗುವುದಿಲ್ಲ. ಹೀಗೆ ನಡೆಯಬಹುದೇ ? ಹಾವು ಮನುಷ್ಯನಾಗಬಹುದೇ ? ಆ ರೀತಿಯ ತರ್ಕದಿಂದ ಕಂಬಾರರ ಜಗತ್ತನ್ನೂ ನಾವು ಪ್ರವೇಶಿಸಲಿಕ್ಕೆ ಆಗುವುದಿಲ್ಲ. ಏಕೆಂದರೆ ಇದು ಜಾನಪದ ಪುರಾಣದ ಜಗತ್ತು, ಅದರ ತರ್ಕಗಳೇ ಬೇರೆ. ಹಾಗೆಯೇ ಅಭಿಜಾತ ಪುರಾಣದ ಜಗತ್ತು ಸಹ. ಅದರ ತರ್ಕಗಳೇ ಬೇರೆ. ಅಂತೆಯೆ ವಾಸ್ತವ ಜಗತ್ತೇ ಬೇರೆ. ಆದ್ದರಿಂದ ಕನ್ನಡ ಲೇಖಕರು ತಮ್ಮ ತಮ್ಮ ಮನೋಧರ್ಮಕ್ಕೆ ಅನುಗುಣವಾಗಿ ಬೇರೆ ಬೇರೆ ಜಗತ್ತುಗಳನ್ನು ನಿರ್ಮಿಸಿಕೊಂಡರು. ಕಂಬಾರ ಅವರ ಜಾನಪದ ಪುರಾಣ ಜಗತ್ತು, ಕುವೆಂಪು ಅವರ ಅಭಿಜಾತ ಜಗತ್ತು ಮತ್ತು ಶಿವರಾಮ ಕಾರಂತ ಅವರ ವಾಸ್ತವ ಜಗತ್ತು ಬೇರೆ ಬೇರೆಯಾಗಿಯೇ ವಿಶಿಷ್ಟವಾಗಿ ನಿಲ್ಲುತ್ತವೆ.

**ಡಾ|| ಸುಖದೇವ ಎಮ್. ಪಾನಬುಡೆ**
ಆಯ್ಕೆ ಶ್ರೇಣಿ ಕನ್ನಡ ಉಪನ್ಯಾಸಕರು
ಕೆ.ಎಲ್.ಇ. ಸಂಸ್ಥೆಯ ಎಸ್.ವ್ಹಿ.ಎಸ್. ಬೆಳ್ಳುಬ್ಬಿ ಮಹಾವಿದ್ಯಾಲಯ
ಸವದತ್ತಿ, ಬೆಳಗಾವಿ ಜಿಲ್ಲೆ

# ವಾಷಿಂಗ್ಟನ್‌ನ ಎರಡು ಅಣಕಗಳು



## ಇರಾಕಿನಿಂದ ಅಮೆರಿಕಾದ ಸೇನೆ ವಾಪಸಾತಿ ಎಷ್ಟು ಸತ್ಯ ?

ಇರಾಕ್‌ನ ಆಕ್ರಮಣದ ಏಳು ವರ್ಷಗಳ ನಂತರ ಅಮೆರಿಕಾದ ಯೋಧರು ಸ್ವದೇಶಕ್ಕೆ ಮರಳಿದ್ದಾರೆ. ಆಗಸ್ಟ್ ೩೧ರಂದು ಕೊನೆಯ ಅಮೆರಿಕನ್ ಯೋಧರು ಇರಾಕಿನ ಗಡಿ ದಾಟಿ ಪ್ರವೇಶಿಸಿದರು. ಅಧ್ಯಕ್ಷ ಬರಾಕ್ ಒಬಾಮಾ ಆಶ್ವಾಸನೆ ನೀಡಿದ್ದಂತೆ ನಡೆದುಕೊಂಡಿದ್ದಾರೆ. ೨೦೧೨ರ ವೇಳೆಗೆ ಉಳಿದಿರುವ ಅಮೆರಿಕಾದ ಸೇನೆ ವಾಪಸ್ಸಾಗುವುದು. ಈ ಬಗ್ಗೆ ಸಾಕಷ್ಟು ಅಬ್ಬರದ ಪ್ರಚಾರ ಅಮೆರಿಕಾದ ಪತ್ರಿಕೆಗಳಲ್ಲಿ, ದೇಸೀ ಪತ್ರಿಕೆಗಳು ಮಾಧ್ಯಮಗಳಲ್ಲಿ ನಡೆಯಿತು. ಇದು ಎಷ್ಟು ನಿಜ ಎಂಬುದನ್ನು ನೋಡೋಣ.

ಆಗಸ್ಟ್ ತಿಂಗಳ ನಂತರವೂ ಇರಾಕಿನಲ್ಲಿ ೫೦,೦೦೦ ಮಂದಿ ಅಮೆರಿಕನ್ ಸೈನಿಕರು ಇರುತ್ತಾರೆ. ಇದು ದಕ್ಷಿಣ ಕೊರಿಯಾದ ನೆಲೆಯಲ್ಲಿರುವುದಕ್ಕಿಂತ ಎರಡರಷ್ಟು ಹೆಚ್ಚು. ಈ ಸೈನಿಕ ನೆಲೆ ಕಾಯಂ ಆಗಿರುತ್ತದೆ. ೨೦೧೧ರ ನಂತರವೂ. ಯುದ್ಧದಲ್ಲಿ ತೊಡಗಿದ್ದ ಒಂದು ಲಕ್ಷ ಸೈನಿಕರು ವಾಪಸ್ಸಾಗಿದ್ದಾರೆ, ನಿಜ. ಆದರೆ ಅವರ ಜಾಗ ತುಂಬಲು ೧೦೦,೦೦೦ ಕೂಲಿ ಸಿಪಾಯಿಗಳಿದ್ದಾರೆ. ಇವರಲ್ಲಿ ಹೆಚ್ಚಿನವರು ಅಮೆರಿಕಾ ಸೇನೆಯ ನಿವೃತ್ತರು ಮತ್ತು ಉಗಾಂಡ, ಪೆರು, ಕೊಲಂಬಿಯಗಳಿಂದ ತಂದಿರುವ ಯೋಧರು. ಇವರೆಲ್ಲ ಕಂಟ್ರಾಕ್ಟ್‌ನ ಮೇಲೆ ಬಂದಿರುವವರು. ಇರಾಕಿ ಸೈನಿಕರಿಗೆ ತರಬೇತಿ ನೀಡುವುದು ಮತ್ತು ಕಾನೂನು ಶಿಸ್ತು ಪರಿಪಾಲನೆ, ಅಮೆರಿಕಾದ ವಾಣಿಜ್ಯ ಸಂಸ್ಥೆಗಳ ರಕ್ಷಣೆ ಇವರ ಹೊಣೆ. ಇದಲ್ಲದೆ ಇರಾಕಿನಲ್ಲಿರುವ ಅಮೆರಿಕಾದ ಉದ್ಯಮಗಳು, ಮುಖ್ಯವಾಗಿ ಇರಾಕಿ ತೈಲೋದ್ಯಮದ ರಕ್ಷಣೆಗಾಗಿ ವಿಶೇಷ ಭದ್ರತಾ ಪಡೆಗಳಿವೆ. ಇರಾಕ್ ಆಕ್ರಮಣ ಮಾಡಿದ ಮೇಲೆ ಶೇಕಡ ಅರವತ್ತರಷ್ಟು ಪಾಲು ತೈಲೋದ್ಯಮ ಪಾಶ್ಚಾತ್ಯರ ವಶಕ್ಕೆ ಬಂದಿದೆ. ಈ ಅಮೆರಿಕನ್ ಕಂಪೆನಿಗಳು ಕಾಯಂ ಆಗಿರುತ್ತವೆ, ಏಕೆಂದರೆ ೨೦ ವರ್ಷಗಳ ಒಪ್ಪಂದ ಮಾಡಿಕೊಂಡಿವೆ. ಹಾಗಿರುವಾಗ, ಅಮೆರಿಕನ್ ಸೇನೆಗಳು ಇವುಗಳ ರಕ್ಷಣೆಗೆ ಇರಬೇಕಲ್ಲವೆ ? ಇನ್ನೊಂದು ಸಂಗತಿ. ಅಮೆರಿಕಾ ಇರಾಕಿನಲ್ಲಿ ಅತಿ ದೊಡ್ಡ ರಾಯಭಾರಿ ಕಛೇರಿಯನ್ನು ನಿರ್ಮಿಸುತ್ತಿದೆ. ೭೪೦ ಮಿಲಿಯ ಡಾಲರುಗಳ ವೆಚ್ಚದಲ್ಲಿ ನಿರ್ಮಾಣವಾಗುತ್ತಿರುವ ಈ ಬೃಹತ್ ಸಂಕೀರ್ಣ ಬಾಗ್ದಾದ್‌ನ ಪ್ರತಿಷ್ಠಿತ ಸ್ಥಳದಲ್ಲಿದ್ದು, ವ್ಯಾಟಿಕನ್ ಸಿಟಿಗಿಂತ ದೊಡ್ಡದು ಎನ್ನಲಾಗಿದೆ. ಇದರಲ್ಲಿ ೮೦೦ ಮಂದಿ ಸಿಬ್ಬಂದಿ ಇರುತ್ತಾರೆ. ಇರಾಕಿ ಸರಕಾರ ನಿಯಂತ್ರಿಸುವ ಈ ವ್ಯವಸ್ಥೆಯ ರಕ್ಷಣೆಗೆ ಸೈನಿಕರು ಬೇಕೇಬೇಕು. ಹಾಗಿರುವಾಗ, ಅಮೆರಿಕಾದ ಆಕ್ರಮಣದಿಂದ ಇರಾಕಿಗೆ ಮುಕ್ತಿ ಸದ್ಯಕ್ಕಂತೂ ಇಲ್ಲ.



ಈ ಮಧ್ಯೆ ಇರಾಕಿ ಜನರ ಜೀವನ ದಿನೇ ದಿನೇ ದುಸ್ತರವಾಗುತ್ತಿದೆ. ೧೯೯೧ರಿಂದ ಹನ್ನೆರಡು ವರ್ಷಗಳ ಕಾಲ ಒಂದಲ್ಲ ಒಂದು ಕಾರಣಕ್ಕಾಗಿ ಸತತ ಬಾಂಬು ದಾಳಿಗೀಡಾಗಿರುವ ಈ ನಾಡು ಜರ್ಜರಿತಗೊಂಡಿದೆ. ಮನೆಗಳು, ಶಾಲೆಗಳು, ಆಸ್ಪತ್ರೆಗಳು, ಮಸೀದಿಗಳು, ಸಾರ್ವಜನಿಕ ಕಟ್ಟಡಗಳು ಹಾಳಾಗಿವೆ. ಸರಬರಾಜು ವ್ಯವಸ್ಥೆ, ರಸ್ತೆಗಳು, ನೀರು ಸರಬರಾಜು, ವಿದ್ಯುಚ್ಛಕ್ತಿ ಎಲ್ಲವೂ ಮುರಿದುಬಿದ್ದಿವೆ. ಜನಜೀವನ ಅಸ್ತವ್ಯಸ್ತವಾಗಿದೆ. ಇರಾಕಿ ಸಮಾಜದ ಮೈಕಟ್ಟು ಶಿಥಿಲಗೊಂಡಿದೆ. ವಾಷಿಂಗ್ಟನ್ ಪೋಸ್ಟ್ ವರದಿಯೊಂದರ ಪ್ರಕಾರ ಜನಸಾಮಾನ್ಯರು ಹಿಂದಿನ ವ್ಯವಸ್ಥೆಯೇ ಎಷ್ಟೋ ಚೆನ್ನಾಗಿತ್ತು ಎಂದು ಹೇಳುತ್ತಿದ್ದಾರೆ. ಇರ್ರಾಕಿನ ಪುನರ್ನಿರ್ಮಾಣಕ್ಕಿಂತ ಅಮೆರಿಕಾದ ಕಂಪೆನಿಗಳಿಗೆ ಲಾಭ ಸೂರೆ ಮಾಡುವುದೇ ಗುರಿ. ವಿದೇಶೀ ಆಕ್ರಮಣದಲ್ಲಿರುವ ಇರಾಕಿನ ಅಭಿವೃದ್ಧಿ ಕನಸಿನ ಮಾತು. ಅಮೆರಿಕಾದ ವಿರುದ್ಧ, ಅದು ಸ್ಥಾಪಿಸಿರುವ ಕೈಗೊಂಬೆ ಸರಕಾರದ ವಿರುದ್ಧ ಪ್ರತಿಭಟನೆ ಇದ್ದೇ ಇದೆ. ಪ್ರತಿನಿತ್ಯ ಒಂದಲ್ಲ ಒಂದು ಕಡೆ ದಾಳಿ ನಡೆಯುತ್ತಲೇ ಇದೆ. ಮೂಲಭೂತವಾದಿಗಳು ಮೇಲುಗೈ ಪಡೆಯುತ್ತಿದ್ದಾರೆ. ಇದು ನಿಜ ಸ್ಥಿತಿ. ಆಕ್ರಮಣದ ಫಲಶ್ರುತಿ ಏಳು ವರ್ಷಗಳ ನಂತರ.

## ಇಸ್ರೇಲ್-ಪ್ಯಾಲಸ್ಟೈನ್ ಮಾತುಕತೆ

ವಾಷಿಂಗ್ಟನ್‌ನಲ್ಲಿ ಜರಗಿದ ಈ ಮಾತುಕತೆ ಇನ್ನೊಂದು ಪ್ರಹಸನ. ಅಧ್ಯಕ್ಷ ಬರಾಕ್ ಒಬಾಮಾ ಪ್ರೇರಿತ ಈ ಮಾತುಕತೆ ಮೊದಲಬಾರಿಗೆ ಇಸ್ರೇಲಿನ ಪ್ರಧಾನಿ ನೆತಾನ್ಯಾಹು ಮತ್ತು ಪ್ಯಾಲಸ್ಟೈನ್‌ನ ಪ್ರತಿನಿಧಿ ಅಧ್ಯಕ್ಷ ಮೊಹಮ್ಮದ್ ಅಬ್ಬಾಸ್ ಇವರ ಮುಖಾಮುಖಿ ಭೇಟಿ. ಇದಕ್ಕೆ ಕಳೆದ ೨೦ ತಿಂಗಳಿಂದ ಸಿದ್ಧತೆ. ಜೋರ್ಡಾನ್‌ನ ಅಧಿಪತಿ ಕಿಂಗ್ ಅಬ್ದುಲ್ಲಾ, ಈಜಿಪ್ಟಿನ ಅಧ್ಯಕ್ಷ ಹೋಸ್ನಿ ಮುಬಾರಕ್, ಬ್ರಿಟನ್ನಿನ ಮಾಜಿ ಪ್ರಧಾನಿ ಟೋನಿ ಬ್ಲೇರ್ ಮತ್ತಿತರರ ಪೌರೋಹಿತ್ಯ. ಜಿಮ್ಮಿ ಕಾರ್ಟರ್ ಮತ್ತು ಬಿಲ್ ಕ್ಲಿಂಟನ್‌ರಂತೆ ಅಂತರರಾಷ್ಟ್ರೀಯವಾಗಿ ಏನಾದರೂ ಸಾಧಿಸಬೇಕೆಂಬ ಹಂಬಲ ಒಬಾಮಾಗೆ. ಇದಕ್ಕಾಗಿ ಬೇಕಾದಷ್ಟು ಪ್ರಚಾರ. ಒಬಾಮಾಗೆ ನವೆಂಬರ್‌ನಲ್ಲಿ ಅಮೆರಿಕಾದ ಕಾಂಗ್ರೆಸ್ಸಿಗೆ ನಡೆಯುವ ಮಧ್ಯಂತರ ಚುನಾವಣೆಯ ಮೇಲೆ ಕಣ್ಣು. ಇದು ಹಿನ್ನೆಲೆ. ಉದ್ದುದ್ದ ಭಾಷಣಗಳು, ಗಂಟೆಗಟ್ಟಲೆ ಚರ್ಚೆ ನಡೆದರೂ ಫಲಿತಾಂಶ ಸೊನ್ನೆ. ಮುಖ್ಯ ಕಾರಣ ಇಸ್ರೇಲ್ ತನ್ನ ಬಿಗಿಪಟ್ಟನ್ನು ಬಿಡದಿರುವುದು. ಈ ಮಾತುಕತೆ ಮಾತ್ರ ಮುಂದುವರಿಯುವುದು. ಅಮೆರಿಕಾದ ಪ್ರಕಾರ ನಿರಂತರವಾಗಿ ಗುರಿಮುಟ್ಟುವವರೆಗೆ. ವಾಷಿಂಗ್ಟನ್ ಸಭೆ ನಂತರ ಈಜಿಪ್ಟಿನ ರಾಜಧಾನಿ ಕೈರೋದಲ್ಲಿ ಮುಂದುವರಿಯಲಿದೆ ಮಾತುಕತೆಗಳು. ಸ್ವಾರಸ್ಯದ ಸಂಗತಿ ಎಂದರೆ ಬಹುಸಂಖ್ಯಾತ ಪ್ಯಾಲಸ್ಟೈನ್ ಜನರನ್ನು ಪ್ರತಿನಿಧಿಸುವ ಹಮಾಸ್ ಸಂಘಟನೆಯನ್ನು ಬಿಟ್ಟು ಮಾತುಕತೆ ನಡೆಸುತ್ತಿರುವುದು. ೨೦೦೬ರಲ್ಲಿ ನಡೆದ ಚುನಾವಣೆಯಲ್ಲಿ ಪ್ಯಾಲಸ್ಟೈನ್‌ನ ೧೩೨ ಕೌನ್ಸಿಲ್ ಸ್ಥಾನಗಳಲ್ಲಿ ೭೪ ಸ್ಥಾನಗಳಿಸಿರುವ ಗಾಜ಼ಾಪಟ್ಟಿ ಪ್ರದೇಶದ ಜನರ ಏಕೈಕ ಪ್ರತಿನಿಧಿಯಾಗಿರುವ ಹಮಾಸ್‌ಅನ್ನು ಬಿಟ್ಟು ಯಾವುದೇ ಒಪ್ಪಂದ ನಿರರ್ಥಕ.

ಇಸ್ರೇಲಿನ ಅಸ್ತಿತ್ವಕ್ಕೆ ಮಾನ್ಯತೆ ನೀಡಿ ಒಪ್ಪಂದ ಮಾಡಿಕೊಂಡ ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಯ ನಾಯಕ ಯಾಸೆರ್ ಅರಾಫತ್ ಇಸ್ರೇಲ್ ಸ್ಥಾಪನೆಗೆ ಪೂರ್ವದಲ್ಲಿದ್ದ ಪ್ಯಾಲಸ್ಟೈನ್ ಪ್ರದೇಶದಲ್ಲಿ ಶೇಕಡ ೭೮ ಭಾಗ ಪ್ರದೇಶವನ್ನೇ ಪ್ಯಾಲಸ್ಟೈನ್ ಸ್ವಯಮಾಡಳಿತೆಗೆ ಒಪ್ಪಿಕೊಂಡಿದ್ದರು. ಹಮಾಸ್ ಇದನ್ನು ಒಪ್ಪಿರಲಿಲ್ಲ. ಅಲ್ಲದೆ ಇಸ್ರೇಲಿ ಆಕ್ರಮಿತ ಪಶ್ಚಿಮ ದಂಡೆ ಪ್ರದೇಶದಲ್ಲಿ ಇಸ್ರೇಲ್ ಯೆಹೂದಿ ಸ್ವಾಸ್ಥ್ಯಗಳ ನಿರ್ಮಾಣವನ್ನು ನಿರಂತರವಾಗಿ ಮುಂದುವರಿಸಿದೆಯಲ್ಲದೆ ೧.೫ ಮಿಲಿಯ ಪ್ಯಾಲಸ್ತೀನಿಯನ್ನರನ್ನು ಗುಲಾಮರಂತೆ ದುಡಿಸಿಕೊಳ್ಳುತ್ತಿದೆ. ಇವರು ಯಾವುದೇ ನಾಗರಿಕ ಸೌಲಭ್ಯಗಳಿಲ್ಲದೆ ನಿರಾಶ್ರಿತರಾಗಿಯೇ ಇದ್ದಾರೆ. ೧೯೯೦ರಿಂದೀಚೆಗೆ ಪಶ್ಚಿಮ ದಂಡೆ ಪ್ರದೇಶದಲ್ಲಿ ಇಸ್ರೇಲಿಗಳನ್ನು ನೆಲೆಗೊಳಿಸುವ ಕಾರ್ಯ ತ್ರಿಗುಣಗೊಂಡಿದೆ. ಅವರ ಸಂಖ್ಯೆ ೧,೧೦,೦೦೦ದಿಂದ ೩,೦೦,೦೦೦ಕ್ಕೇರಿದೆ. ಇಸ್ರೇಲ್ ನಿರಂತರವಾಗಿ ಪ್ಯಾಲಸ್ಟೈನ್ ಪ್ರದೇಶದ ಅತಿಕ್ರಮಣವನ್ನು ಮುಂದುವರಿಸಿದೆ. ಯಾವುದೇ ಬಗೆಯಲ್ಲಿಯೂ ಇಸ್ರೇಲ್ ಈ ಪ್ರದೇಶವನ್ನು ಬಿಟ್ಟುಕೊಡಲು ಸಿದ್ಧವಿಲ್ಲ. ಹಾಗಿರುವಾಗ ಮಾತುಕತೆಯಿಂದ ಯಾವ ರೀತಿಯ ಒಪ್ಪಂದವೂ ಸಾಧ್ಯವಾಗದು. ಇದೊಂದು ವ್ಯರ್ಥ ಪ್ರಯತ್ನ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಸ್ತ್ರೀ - ಪುರುಷ ಸಮಾನತೆ ಮತ್ತು ನಮ್ಮ ಮದುವೆಗಳು

**ದಿನದಿನಕ್ಕೂ ಹೆಚ್ಚುತ್ತಿರುವ ಹೆಣ್ಣು ಭ್ರೂಣಹತ್ಯೆಗೆ ಹೆಣ್ಣಿನ ಮದುವೆ ಖರ್ಚು ಒಂದು ಮುಖ್ಯ ಕಾರಣ. ಯುಕ್ತ ವಯಸ್ಸಿಗೆ ಬರುವವರೆಗೂ ಹೆಣ್ಣನ್ನು ಸಾಕಿ ಸಲಹಬೇಕು. ಭಾವೀ ಅಳಿಯ, ಬೀಗರು ಬಯಸುವಂತಹ, ಹೆಚ್ಚು ಸಂಬಳ ಬರುವ, ಉದ್ಯೋಗ ದೊರಕುವ ವಿದ್ಯಾಭ್ಯಾಸವನ್ನು ಕೊಡಿಸಬೇಕು. ಅನಂತರ, ಈಗಾಗಲೇ ತಿಳಿಸಿದಂತೆ, ಲಕ್ಷಾಂತರ ರೂಪಾಯಿ ಖರ್ಚುಮಾಡಿ ಮದುವೆ ಮಾಡಿಕೊಡಬೇಕು. ಮದುವೆಯ ನಂತರ, ಹೆಣ್ಣು ಹಾಗೂ ಅವಳ ಸಂಪಾದನೆಯ ಹಣ ಅವಳ ಗಂಡ ಹಾಗೂ ಗಂಡನ ಮನೆಯವರಿಗೇ ಸೇರತಕ್ಕದ್ದು, ಸೇರುತ್ತಿದೆ. ಈ ಒಂದು ಸಂಪ್ರದಾಯ ಇಂದು ಸರ್ವೇಸಾಧಾರಣ ಎಂಬಂತಾಗಿದೆ.**

ಬಿ. ಜಿ. ಕುಸುಮಾ

'ಗಂಡು ಹೆಣ್ಣುಗಳೆಂಬ ಭೇದಭಾವ ಸಲ್ಲದು. ಸ್ತ್ರೀ ಪುರುಷರಿಬ್ಬರೂ ಸಮಾನರು' ಎಂಬಂತಹ ಘೋಷಣೆಗಳನ್ನು ನಾವೆಲ್ಲರೂ ಕೇಳಿದ್ದೇವಲ್ಲವೇ? ಎಷ್ಟೋ ಬಾರಿ ನಾವೇ ಆ ಮಾತನ್ನು ಆಡಿರಲೂಬಹುದು. ಟಿ.ವಿ. ಯಲ್ಲಿಯೂ ಇತರ ಸಮೂಹ ಮಾಧ್ಯಮಗಳಲ್ಲಿಯೂ ಆ ಬಗ್ಗೆ ರೂಪಕಗಳು, ಚರ್ಚೆ-ಸಂವಾದಗಳು ಪ್ರಸಾರವಾಗುತ್ತಲೇ ಇರುತ್ತವೆ.

ಈಗಿನ ಕಾಲದಲ್ಲಿ, ಗಂಡುಮಕ್ಕಳಂತೆಯೇ ಹೆಣ್ಣುಮಕ್ಕಳನ್ನೂ ಶಾಲೆಗೆ ಕಳಿಸುವುದು ವಿಶೇಷವೇನಲ್ಲ. ನಗರಗಳಲ್ಲಂತೂ ಗಂಡು ಹುಡುಗರಿಗೆ ಸರಿಸಮಾನವಾಗಿ ಹುಡುಗಿಯರೂ ಬಿ.ಇ., ಎಂ.ಬಿ.ಬಿ.ಎಸ್., ಕಂಪ್ಯೂಟರ್ ಸೈನ್ಸ್‌ನಂತಹ ತಾಂತ್ರಿಕ ವಿದ್ಯಾಭ್ಯಾಸದಲ್ಲಿಯೂ ತೊಡಗಿರುತ್ತಾರೆ. ಶಾಲಾ ಕಛೇರಿಗಳಲ್ಲೂ, ಕಾರ್ಖಾನೆಗಳಲ್ಲೂ, ಬ್ಯಾಂಕುಗಳಲ್ಲೂ ಹೆಂಗಸರು ಬಗೆಬಗೆಯ ಹುದ್ದೆಗಳಲ್ಲಿ, ಕೆಲವೊಮ್ಮೆ ಅತ್ಯುನ್ನತ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವುದನ್ನು ಕಾಣುತ್ತೇವೆ. ಈಗ ೧೫-೨೦ ವರ್ಷಗಳಲ್ಲಿ ಇದು ಬಹಳಷ್ಟು ರೂಢಿಗೆ ಬಂದಿದೆ. ಅದನ್ನೇ ಉದಾಹರಿಸುತ್ತಾ ನಾವು, "ಈ ಕಾಲದಲ್ಲಿ ಹೆಂಗಸರು ಗಂಡಸರಿಗಿಂತ ಯಾವುದರಲ್ಲಿಯೂ ಕಡಿಮೆಯಿಲ್ಲ. ಇಬ್ಬರೂ ಸಮಾನರೇ" ಎನ್ನುತ್ತಿರುತ್ತೇವೆ. ಕೆಲವು ಸಲ ಈ ವಾದ ಎಷ್ಟು ಅತಿರೇಕವೆನಿಸುತ್ತದೆ ಎಂದರೆ, ಲೋಕಸಭೆಯ ಮಾತು ಹಾಗಿರಲಿ, ಬಸ್ಸಿನಲ್ಲಿ ತಾನೇ ಮಹಿಳೆಯರಿಗೇಕೆ ಮೀಸಲು ಸ್ಥಳ, ಗಂಡು ಹೆಣ್ಣುಗಳಿಬ್ಬರೂ ಸಮಾನರಲ್ಲವೇ, ಎಂದು ವಾದಿಸುವವರೂ ಉಂಟು. ಆದರೆ ನಿಜವಾಗಿಯೂ ನಮ್ಮ ಅಂತರ್ಯದಲ್ಲಿ, ಆಚರಣೆಯಲ್ಲಿ ಗಂಡುಮಕ್ಕಳು, ಹೆಣ್ಣುಮಕ್ಕಳು ಸರಿಸಮರೆಂದು ನಾವು ಭಾವಿಸಿದ್ದೇವೆಯೇ? ಒಂದೇ ಒಂದು ಉದಾಹರಣೆಯಾಗಿ ನಮ್ಮ ವಿವಾಹಪದ್ಧತಿಯನ್ನೇ ತೆಗೆದುಕೊಂಡರೆ ಸಾಕು, ಈ ಸ್ತ್ರೀ-ಪುರುಷ ಸಮಾನತಾವಾದ ಎಷ್ಟು ಪೊಳ್ಳು ಎಂದು ತಿಳಿಯುತ್ತದೆ.

ಈ ಹಿನ್ನೆಲೆಯಲ್ಲಿ ನಮ್ಮ ಮಧ್ಯಮವರ್ಗದವರಲ್ಲಿ ಪ್ರಚಲಿತವಿರುವ ವಿವಾಹದ ರೀತಿ-ರಿವಾಜುಗಳನ್ನು ಗಮನಿಸುವುದು ನನ್ನ ಉದ್ದೇಶ. ಮದುವೆಗಳು ಸರಳವಾಗಿರಬೇಕೇ, ಅದ್ದೂರಿಯದಾಗಿರಬೇಕೇ, ಸಾಂಪ್ರದಾಯಿಕವಾಗಿರಬೇಕೇ, ರಿಜಿಸ್ಟರ್ ಪದ್ಧತಿಯದೇ, ಎಂಬ ವಿಚಾರ ಹಾಗಿರಲಿ, ಅವುಗಳನ್ನು ಈಗಿರುವಂತೆಯೇ ವಿವೇಚಿಸೋಣ.

ಮೊದಲನೆಯದಾಗಿ, ವಿವಾಹವಯಸ್ಕ ಮಕ್ಕಳಿದ್ದರೆ, ಸಾಧಾರಣವಾಗಿ, ಹುಡುಗಿಯ ತಾಯ್ತಂದೆಯರೇ ವರಾನ್ವೇಷಣ ಮಾಡಬೇಕೆಂಬ ಹಳೇ ಸಂಪ್ರದಾಯವೇ ಇಂದಿಗೂ ನಡೆದುಬರುತ್ತಿದೆ. ಹುಡುಗನ ಅಪೇಕ್ಷೆಗೆ ಅನುಸಾರವಾಗಿ, ಹುಡುಗಿಯ ಅರ್ಹತೆ ಇರಬೇಕು ಎಂದರೆ, ಅವನ ಅನುಕೂಲತೆಗಾಗಿ ಹುಡುಗಿ ಇಂಜಿನಿಯರೋ, ಡಾಕ್ಟರೋ, ಕಂಪ್ಯೂಟರ್ ಪದವೀಧರಳೋ ಅಥವಾ ಉತ್ತಮ ವಿದ್ಯಾರ್ಹತೆಯ ಜೊತೆಗೆ, ಹೆಚ್ಚು ವೇತನವೂ, ಇತರ ಸೌಲಭ್ಯಗಳೂ ಇರುವಂತಹ, ಉದ್ಯೋಗಸ್ಥೆಯೋ ಆಗಿರಬೇಕು. ನಗರಗಳಲ್ಲಂತೂ ನೌಕರಿಯಲ್ಲಿಲ್ಲದ ಹುಡುಗಿಗೆ ಮದುವೆಯಾಗುವುದೇ ಕಷ್ಟ. ಎರಡನೆಯದಾಗಿ, ಹೀಗೆ ತೂಕಹಾಕಿ ನಡೆಸುವ ಮದುವೆಗಳಲ್ಲೂ ವಧೂವರರಿಗೆ ಸಮಾನ ಅರ್ಹತೆ ಇದ್ದರೂ, ಮದುವೆಯ ಪ್ರತಿಹಂತದಲ್ಲೂ ಹೆಣ್ಣು ಕಡಿಮೆ, ಗಂಡು ಹೆಚ್ಚು ಎಂಬುದು ಪ್ರತ್ಯಕ್ಷವಾಗುತ್ತ ಬರುತ್ತದೆ. ಮದುವೆಯ ಖರ್ಚು-ವೆಚ್ಚ ಎಲ್ಲವೂ ಹೆಣ್ಣಿನವರದೇ. ವಿಶೇಷ ಬಸ್ಸು, ಕಾರುಗಳನ್ನು ಗೊತ್ತುಮಾಡಿ, ಮದುವೆ ಗಂಡನ್ನೂ ಅವನ ಪರಿವಾರವನ್ನೂ, ಹೆಣ್ಣಿನವರೇ ಮದುವೆ ಮಂಟಪಕ್ಕೆ ಕರೆತರಬೇಕು. ಅದು ಹೆಣ್ಣಿನವರ ಕರ್ತವ್ಯ. ಮೂರನೆಯದಾಗಿ, ಈಗ ೬೦-೭೦ ವರ್ಷಗಳ ಹಿಂದಿನಂತೆ, ಇಂದು ಮದುವೆಗಳು ಮನೆಗಳಲ್ಲಿ ನಡೆಯುವುದಿಲ್ಲ; ಛತ್ರಗಳಲ್ಲೇ ನಡೆಯುವುದು. ಬೆಂಗಳೂರಿನಂತಹ ನಗರಗಳಲ್ಲಂತೂ ಈ ಛತ್ರಗಳ ಒಂದು ದಿನದ ಬಾಡಿಗೆಯೇ ಐದಂಕಿ ದಾಟುತ್ತದೆ. ಈ ಛತ್ರ ಗೊತ್ತುಮಾಡಿ, ಅದರ ಖರ್ಚಿನ ಹೊಣೆ ಹೊರಬೇಕಾದವರು ಹೆಣ್ಣಿನವರೇ. ಮತ್ತೆ, ಗಂಡಿನ ಕಡೆಯವರಿಗೆಲ್ಲ ಮದುವೆಯ ಹಿಂದಿನ ಸಂಜೆ, ಮದುವೆಯ ದಿನ ಎರಡು ಹೊತ್ತೂ, ತಿಂಡಿ, ಕಾಫಿ ಭೂರಿಭೋಜನದ ವ್ಯವಸ್ಥೆಯೆಲ್ಲ ಹೆಣ್ಣಿನವರದೇ. ಕೆಲವೊಮ್ಮೆ ಮದುವೆ ಮುಗಿದ ಮಾರನೇ ದಿನ, ಊಟಮಾಡಿ, ನಂತರ ಗಂಡಿನ ಮನೆಯವರು ಹೊರಡುತ್ತಾರೆ. ಅವರನ್ನು ಕಳಿಸಿಕೊಡುವುದೂ (ವಾಹನದ ಏರ್ಪಾಡಿನ ಖರ್ಚು), ಹೆಣ್ಣಿನವರ ಕರ್ತವ್ಯವೇ! ಇದಲ್ಲದೇ ಚಪ್ಪರ, ಓಲಗ, ಹಾರ, ಹೂವು, ಗಂಡಿನವರಿಗೆಲ್ಲ ಉಡುಗೊರೆ, ಇತ್ಯಾದಿ... ಇತ್ಯಾದಿ... ಹೇಳುವಂತೆಯೇ ಇಲ್ಲ.

ಗಂಡು ಹೆಣ್ಣು ಇಬ್ಬರೂ ಸಮಾನರೆನ್ನುವುದಾದರೆ, ಇಬ್ಬರೂ ಸಮಾನ ವಿದ್ಯಾರ್ಹತೆ, ಸಂಪಾದನೆಗಳಿದ್ದೂ, ಮದುವೆ ನಂತರವೂ ಹೆಣ್ಣು ಸಂಪಾದಿಸುತ್ತಿರುವಾಗ, ಮದುವೆಯ ಖರ್ಚನ್ನೆಲ್ಲ ಹೆಣ್ಣಿನವರು ಮಾತ್ರವೇ ಏಕೆ ಹೊರಬೇಕು? ಹೆಣ್ಣಿನಂತೆಯೇ ಗಂಡಿಗೂ ಮದುವೆ ಅಗತ್ಯವೇ ತಾನೇ? ಎರಡೂ ಕಡೆಯವರು ಮದುವೆಯ



ಖರ್ಚನ್ನು ಸಮಾನವಾಗಿ ಹೊರಬಾರದೇಕೆ? ಮದುವೆಯುದ್ದಕ್ಕೂ ''ಬೀಗರಿಗೆ ಎಲ್ಲಿ ಅಸಮಾಧಾನವಾಗಿಬಿಡುತ್ತೋ'' ಎಂದು ಆತಂಕಪಡುವ ಹೆಣ್ಣಿನ ತಾಯ್ತಂದೆಯರನ್ನು ನೋಡಿದರೆ ಅಯ್ಯೋ ಎನಿಸುತ್ತದೆ. ವೇದಿಕೆಗಳ ಮೇಲೆ ಸ್ತ್ರೀವಾದ ಮಂಡಿಸುತ್ತಾ, ಸ್ತ್ರೀ ಸಮಾನತೆ ಸಾರುತ್ತ, ರಭಸವಾಗಿ ಭಾಷಣ ಬಿಗಿಯುವ ಮಹಿಳೆಯರೂ ತಮ್ಮ ಮಗನ ಮದುವೆಯಲ್ಲಿ ಮಾತ್ರ ನಿಶ್ಚಿಂತೆಯಿಂದ ಬಂಧು-ಬಳಗ, ಬೀದಿ, ಕೇರಿಯವರನ್ನೆಲ್ಲ ಹೃತ್ಪೂರ್ವಕವಾಗಿ ಒತ್ತಾಯದಿಂದ ಆಹ್ವಾನಿಸುತ್ತಾರೆ (ಹೇಗೂ ಖರ್ಚಿಗೆ ಹೆಣ್ಣಿನವರು ತಾನೇ ಹೊಣೆ!) ಹ್ಞಾ! ಅಂದ್ಹಾಗೇ ಈ ಆಹ್ವಾನ ಪತ್ರಿಕೆಗಳನ್ನೂ ಸಹ ಗಂಡಿನವರಿಗೆ ಹೆಣ್ಣಿನವರೇ ಪ್ರಿಂಟ್ ಮಾಡಿಸಿ ಕೊಡಬೇಕೆಂದು 'ಡಿಮ್ಯಾಂಡ್' ಮಾಡುವ ಬೀಗರೂ ಉಂಟು!! ಈ ಎಲ್ಲಾ ವಿಷಯಗಳನ್ನೂ ಅಲಿಖಿತ ನಿಯಮವೂ ಎಂಬಂತೆ ಹೆಣ್ಣಿನವರೂ ಒಪ್ಪಿಕೊಂಡೇ ಮುಂದುವರಿಯುತ್ತಿದ್ದಾರೆ. ಕೇಳಿದರೆ ''ಎಷ್ಟಾದ್ರೂ ನಾವು ಹೆಣ್ಣು ಹೆತ್ತೋರುತಾನೇ, ಏನ್ಮಾಡೋಕೆ ಆಗುತ್ತೆ?'' ಅನ್ನುತ್ತಾರೆ. ಅನುಕೂಲಸ್ಥರು ಆಸೆಯಿಂದ ಇಂಥ ಖರ್ಚನ್ನೆಲ್ಲ ಉಬ್ಬುಬ್ಬಿ ಮತ್ತಷ್ಟು ಹೆಚ್ಚಿಸಿ ಮದುವೆ ಮಾಡುತ್ತಾರೆ. ಅನುಕೂಲವಿಲ್ಲದವರು ಏದುಸಿರು ಬಿಡುತ್ತ, ಸಾಲಸೋಲ ಮಾಡಿ, ''ಹೇಗಾದ್ರೂ ಮಾಡಬೇಕಲ್ಲ ಹುಡುಗಿ ಸರಿಯಾದ ಕಡೆ ಸೇರಬೇಕಾದ್ರೆ'' ಎಂದು ತಮ್ಮನ್ನು ತಾವೇ ಸಂತೈಸಿಕೊಳ್ಳುತ್ತಾರೆ.

ಇಲ್ಲಿ ಮುಖ್ಯವಾದ ಪ್ರಶ್ನೆ ಅನುಕೂಲ, ಅನಾನುಕೂಲ ಎಂಬುದಲ್ಲ. ಗಂಡುಹೆಣ್ಣಿನ ಸಮಾನತೆಯೇ ಮುಖ್ಯ ವಿಷಯ. ಆದರೆ ಈ ಬಗ್ಗೆ ಯಾರೂ ಆಲೋಚನೆ ಮಾಡುವುದಿಲ್ಲ. ಇಂಥ ಮಾತು ಬಂದಾಗಲೂ, ''ಏನ್ಮಾಡೋಕಾಗತ್ತೆ, ಅದು ಮೊದಲಿನಿಂದ ಬಂದ ನಮ್ಮ ಸಂಪ್ರದಾಯ, ನಮ್ಮ ಭಾರತೀಯ ಸಂಸ್ಕೃತಿ'' ಎಂದುಬಿಡುತ್ತಾರೆ. ಆದರೆ ಮೊದಲಿನಿಂದ ಬಂದ ಎಷ್ಟೋ ಪದ್ಧತಿ, ಸಂಪ್ರದಾಯಗಳನ್ನು ಇಂದು ತ್ಯಜಿಸಿಲ್ಲವೇ? ಈಗ ೭೦-೮೦ ವರ್ಷಗಳ ಹಿಂದೆ ಹೆಣ್ಣಿಗೆ ೮ ವರ್ಷಕ್ಕೋ ಅಥವಾ ಹೆಚ್ಚೆಂದರೆ ಅವಳು ದೊಡ್ಡವಳಾಗುವ ಮುಂಚೆಯೇ ಮದುವೆ ಮಾಡುತ್ತಿದ್ದರು.




ಬದುಕು ಬಣ್ಣವಾಗಿಸಲು ಕರೆದೆ ನೀ ನಡೆದೆ ದೂರ
ಪ್ರೇಮದ ಸಿಂಚನವ ಕೋರಿದೆ ನೀ ನಡೆದೆ ದೂರ

ಒಡತನವನೆ ಹಾಸಿ ಹೊದ್ದು ಒಲವಿನೊರತೆಯ ಕುಡಿದು
ಜಕ್ಕವಕ್ಕಿಗಳಾಗಲು ಬೇಡಿದೆ ನೀ ನಡೆದೆ ದೂರ

ಪ್ರೀತಿಗಾಗಿ ಹಂಬಲಿಸಿ ಮಣ್ಣಾದವರೆಷ್ಟೋ
ಆದರೂ ನಿನ್ನ ಜೊತೆ ಬಯಸಿದೆ ನೀ ನಡೆದೆ ದೂರ

ನಾನೀಗ ಏಕಾಂಗಿ ಭಗ್ನಹೃದಯಿ ನಿನ್ನ ಪದ
ತಲದ ದಾಸನೆಂದು ಗೋಗರೆದೆ ನೀ ನಡೆದೆ ದೂರ

ಮದಿರೆಯಲ್ಲಿ ಮುಳುಗಿದವನೆಂದು ಜಗವೆಂದರೂ
ಅದು ನಿನಗಾಗಿ ಎಂದು ಸಾರಿದೆ ನೀ ನಡೆದೆ ದೂರ

ಸಿದ್ಧರಾಮ ಹಿರೇಮಠ
ಬಾಪೂಜಿ ನಗರ, ಕೂಡ್ಲಿಗಿ, ಬಳ್ಳಾರಿ

ಈಗ ಹಾಗೆ ಮಾಡುತ್ತಾರೆಯೇ? ಆ ಕಾಲದಲ್ಲಿ ಹೆಣ್ಣುಮಕ್ಕಳು ಶಾಲೆ ಮೆಟ್ಟಿಲನ್ನು ಹತ್ತುತ್ತಿದ್ದುದೇ ಅಪರೂಪ. ಈಗ ಹಾಗಿರುತ್ತಾರೆಯೆ? ಇದರಲ್ಲೆಲ್ಲ ಅಡ್ಡಿಬರದೇ ಸಂಪ್ರದಾಯ, ಸಂಸ್ಕೃತಿ? ಆಹಾರ, ವೇಷಭೂಷಣ ಇಲ್ಲೆಲ್ಲ ಬದಲಾವಣೆ ಬಂದಿಲ್ಲವೇ? ಇದರಲ್ಲೆಲ್ಲ, 'ಸಂಪ್ರದಾಯ, ಸಂಸ್ಕೃತಿ'ಗಳನ್ನು ಬಿಡಲು ಸಾಧ್ಯವಿದ್ದರೆ, ಮದುವೆಯ ಖರ್ಚಿನ ವಿಷಯದಲ್ಲೇಕೆ ಸಾಧ್ಯವಿಲ್ಲ? ಆದರೆ ವಾಸ್ತವ ಹಾಗಿಲ್ಲ. ಸಮಾನತೆ ಇತ್ಯಾದಿ ಕುರಿತ ವಿಷಯ ಎತ್ತಿದರೆ ಹೆಣ್ಣುಮಕ್ಕಳಿಗೆ ಮದುವೆಯೇ ಆಗೊಲ್ಲ ಅಷ್ಟೆ, ಎನ್ನುತ್ತಾರೆ. ಅದೂ ನಿಜವೇ! ಆದ್ದರಿಂದ ಈ ಮದುವೆ ಮಾಡುವ ಹೊಣೆಗಾರಿಕೆಯನ್ನು ಎರಡು ಕಡೆಯವರೂ ಹೊರಬೇಕೆಂಬ ಹೊಸ ಪದ್ಧತಿಗೆ, ಮುಂದೊಡಗು ಗಂಡಿನ ತಾಯ್ತಂದೆಯರಿಂದಲೇ ಆರಂಭವಾಗಬೇಕು. ಖರ್ಚು ಮಾಡಬೇಕಾದ್ದು ಹೆಣ್ಣಿನ ತಾಯ್ತಂದೆಯರ ಹೊಣೆ, 'ಬೇಕಾದ್ದನ್ನು ಡಿಮ್ಯಾಂಡ್' ಮಾಡುವುದು ಗಂಡು ಹಾಗೂ ಅವನ ತಾಯ್ತಂದೆಯರ ಹಕ್ಕು' ಎಂಬ ಮನೋಭಾವವನ್ನು ಅವರು ಬದಲಾಯಿಸಿಕೊಳ್ಳಬೇಕು. ಇದು ಹೇಳುವಷ್ಟು ಸುಲಭವಲ್ಲ. ದಿಢೀರ್ ಎಂದು ಆಗಿಬಿಡುವುದೂ ಅಲ್ಲ. ಶಾಸನಗಳ ಬಲದಿಂದ ಸಾಧ್ಯವೂ ಇಲ್ಲ. ಆದರೂ ಸುಸಾಧ್ಯವಲ್ಲ. ಈ ಬಗ್ಗೆ ಗಂಭೀರ ಚಿಂತನೆ ಮಾಡಿ, ಮೊದಲ ಹೆಜ್ಜೆ ಇಡುವ ದಿಟ್ಟತನವನ್ನು ಗಂಡಿನವರು ಪ್ರದರ್ಶಿಸಬೇಕು. ಇದೇನೂ ಹೆಣ್ಣಿಗಾಗಿ, ಅವಳ ತಾಯ್ತಂದೆಯರಿಗಾಗಿ ಮಾಡುವ ಉಪಕಾರವಲ್ಲ ಮತ್ತು ಆ ಹೆಣ್ಣಿನವರು ಕೃತಜ್ಞತೆಯಿಂದ ಹೊರಬೇಕಾದ ಋಣಭಾರವೂ ಅಲ್ಲ. ಆದರೆ ನಾಗರಿಕ ಸಮಾಜದಲ್ಲಿ ಇರಬೇಕಾದ ಒಂದು ಸಾಮಾಜಿಕ ಪ್ರಜ್ಞೆ, ಅಷ್ಟೆ. ಗಂಡು ಹೆಣ್ಣಿನ ಸಮಾನತೆಯನ್ನು ಸಾಧಿಸುವಲ್ಲಿ, ಲಿಂಗಭೇದವನ್ನು ತೊಡೆದುಹಾಕುವಲ್ಲಿ ಇದೊಂದು ಪ್ರಮುಖ ಹೆಜ್ಜೆ, ಅಷ್ಟೆ.

ದಿನದಿನಕ್ಕೂ ಹೆಚ್ಚುತ್ತಿರುವ ಹೆಣ್ಣು ಭ್ರೂಣಹತ್ಯೆಗೆ ಹೆಣ್ಣಿನ ಮದುವೆ ಖರ್ಚು ಒಂದು ಮುಖ್ಯ ಕಾರಣ. ಯುಕ್ತ ವಯಸ್ಸಿಗೆ ಬರುವವರೆಗೂ ಹೆಣ್ಣನ್ನು ಸಾಕಿ ಸಲಹಬೇಕು. ಭಾವೀ ಅಳಿಯ, ಬೀಗರು ಬಯಸುವಂತಹ, ಹೆಚ್ಚು ಸಂಬಳ ಬರುವ ಉದ್ಯೋಗ ದೊರಕುವ ವಿದ್ಯಾಭ್ಯಾಸವನ್ನು ಕೊಡಿಸಬೇಕು. ಅನಂತರ, ಈಗಾಗಲೇ ತಿಳಿಸಿದಂತೆ, ಲಕ್ಷಾಂತರ ರೂಪಾಯಿ ಖರ್ಚುಮಾಡಿ ಮದುವೆ ಮಾಡಿಕೊಡಬೇಕು. ಮದುವೆಯ ನಂತರ, ಹೆಣ್ಣು ಹಾಗೂ ಅವಳ ಸಂಪಾದನೆಯ ಹಣ ಅವಳ ಗಂಡ ಹಾಗೂ ಗಂಡನ ಮನೆಯವರಿಗೇ ಸೇರತಕ್ಕದ್ದು, ಸೇರುತ್ತಿದೆ. ಈ ಒಂದು ಸಂಪ್ರದಾಯ ಇಂದು ಸರ್ವೇಸಾಧಾರಣ ಎಂಬಂತಾಗಿದೆ.

ಒಬ್ಬ ಬ್ಯಾಂಕ್ ಅಧಿಕಾರಿ ಗೃಹಸ್ಥ ಹೀಗೆ ಹೇಳುತ್ತಿದ್ದರು: ''ಗಂಡು ಕೂಸು ಒಂದು ನಿಧಿ, ಹೆಣ್ಣು ಕೂಸು ಒಂದು ಹೊರೆ.'' ಜೀವನದಲ್ಲಿ ನಿರಂತರ ಸಂತೋಷದ ಸೆಲೆ ಒಂದು ಮಗು – ಅದು ಹೆಣ್ಣಾಗಲೀ, ಗಂಡಾಗಲೀ ಅದೊಂದು ಆನಂದದ ಚಿಲುಮೆ. ಇಂತಹ ಮಗುವನ್ನು 'ನಿಧಿ', 'ಹೊರೆ' ಎಂದು ಭಾವಿಸುವುದು, ಆ ಮಗುವಿನಿಂದ ತಮಗೆ ಆದಾಯವಿದೆ ಅಥವಾ ವೆಚ್ಚ ಆಗುತ್ತದೆ ಎಂದು ಭಾವಿಸಿದಾಗ, ಲೆಕ್ಕಾಚಾರ ಹಾಕಿದಾಗ ತಾನೇ? ಹೀಗೆ ತಮ್ಮದೇ ಮಗುವನ್ನು ಆಯವ್ಯಯ ಎಂಬ ತಕ್ಕಡಿಯಲ್ಲಿ ತೂಗುವವರು ವ್ಯಯಕ್ಕೆ ಮೂಲವಾದ ಹೆಣ್ಣುಕೂಸನ್ನು ಹುಟ್ಟುವ ಮೊದಲೇ ಹೊಸಕಿಹಾಕುತ್ತಾರೆ, ಚಿಗುರಲ್ಲೇ ಚಿವುಟಿಹಾಕುತ್ತಾರೆ. ಗಂಡುಮಗುವಿಗಾಗಿ ಹಂಬಲಿಸುತ್ತ, ''ಮರಳಿ ಮರಳಿ ಯತ್ನಮಾಡುತ್ತ'' ಪುತ್ರ ಸಂತಾನ ಸಂವರ್ಧನೆಗಾಗಿ ಯಜ್ಞಯಾಗಾದಿಗಳಿಂದ ಹಿಡಿದು ವೈಜ್ಞಾನಿಕ ವಿಧಾನಗಳವರೆಗೆ ಸಕಲ ಪ್ರಯತ್ನ ಮಾಡುತ್ತಾರೆ. ಹೀಗಾಗಿ ದಿನೇ ದಿನೇ ಗಂಡು ಹೆಣ್ಣಿನ ಅನುಪಾತದಲ್ಲಿ ವಿಪರೀತ ಏರುಪೇರುಗಳಾಗುತ್ತಿವೆ. ಇದು ಮುಂದಿನ ದಿನಗಳಲ್ಲಿ ಅಪಾಯಕಾರಿಯಾದ ಸಾಮಾಜಿಕ ಸ್ಥಿತ್ಯಂತರಗಳಿಗೆ ಎಡೆಮಾಡಿಕೊಡುತ್ತದೆ. ಆದ್ದರಿಂದ ಮದುವೆ ಖರ್ಚೆಲ್ಲ ಹೆಣ್ಣಿನವರದೇ ಎಂಬ ಅನಿಷ್ಟ ಪದ್ಧತಿಯನ್ನು ಸಂಪ್ರದಾಯ, ಸಂಸ್ಕೃತಿ ಇತ್ಯಾದಿ ಆತ್ಮವಂಚನೆಯ ಸಂಕೋಲೆಗಳನ್ನು ಕಿತ್ತೊಗೆದು, ತೊಡೆದುಹಾಕಲೇಬೇಕು. ಇದಕ್ಕೆ ಯಾವ ಶಾಸನ, ಕಾನೂನು ಬೇಕಿಲ್ಲ. ಬೇಕಾಗಿರುವುದು, ನಿಷ್ಪಕ್ಷಪಾತ, ಸ್ವಾರ್ಥರಹಿತ ಚಿಂತನೆ, ಆಲೋಚಿಸಿದ್ದನ್ನು ಆಚರಿಸುವ ದಿಟ್ಟತನ, ಅಷ್ಟೆ. ಹೀಗಾದಾಗ ಹೆತ್ತವರಿಗೆ ಹೆಣ್ಣು ಹೊರೆಯಲ್ಲ, ಹೆಣ್ಣು, ಗಂಡು ಮಕ್ಕಳಿಬ್ಬರೂ ಸಮಾನರೇ ಎಂಬ ಭಾವನೆ ವ್ಯಾಪಿಸುತ್ತದೆ.

ಮದುವೆಯಾಗಲಿರುವ ಗಂಡುಗಳೇ, ಅವರ ತಾಯ್ತಂದೆಯರೇ, ಈ ಬಗ್ಗೆ ಇಂದಿನಿಂದಲೇ, ಈ ಕ್ಷಣದಿಂದಲೇ ಗಂಭೀರ ಚಿಂತನೆ ಮಾಡುತ್ತೀರಾ?

ಬಿ. ಜಿ. ಕುಸುಮಾ
ನಂ. ೧೯೪, ೫ನೇ ಮುಖ್ಯರಸ್ತೆ, ೪ನೇ ಬ್ಲಾಕ್, ೩ನೇ ಫೇಸ್, ಕತ್ರಿಗುಪ್ಪೆ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫



# ಸಣ್ಣ ಪತ್ರಿಕೆಗಳು, ಆಧುನಿಕತೆ ಮತ್ತು ಶ್ರೇಷ್ಠತೆಯ ವಕ್ತಾರಿಕೆ ಒಂದು ಸಿಂಹಾವಲೋಕನ

ಮನುಷ್ಯನು ಮುದ್ರಣ ತಂತ್ರ ಮತ್ತು ಯಂತ್ರವನ್ನು ಕಂಡುಕೊಂಡಾಗಿನಿಂದಲೂ ಸಮಾಜದ ಇತರೆ ಸದಸ್ಯರೊಂದಿಗೆ ನಡೆಸಬೇಕಾದ ದೈನಂದಿನ ವ್ಯವಹಾರವನ್ನು ಮತ್ತೂ ಸುಲಭಗೊಳಿಸಿಕೊಳ್ಳುವ ಕಾರಣ ಹಲವು ಸಾಧನಗಳನ್ನು ಹೊಂದಿದ್ದಾನೆ. ಅವುಗಳಲ್ಲಿ ಪತ್ರಿಕೆ ಕೂಡ ಒಂದು. ಆದರೆ ಮುದ್ರಣ-ಸಂಸ್ಕೃತಿ ಎಂಬುದು ಪ್ರಪಂಚದ ಬೇರೆಬೇರೆ ಭಾಗಗಳಲ್ಲಿ ಜನ ತಾವೇ ಸ್ಥಳೀಯವಾಗಿ ಮುದ್ರಿಸುವ, ಪ್ರಚುರಪಡಿಸುವ ತಂತ್ರಗಳನ್ನು ಕಂಡುಕೊಂಡಿದ್ದರು. ಆದರೆ ಯಾವಾಗ 'ಪ್ರಿಂಟ್ ಕಲ್ಚರ್' ಬಂಡವಾಳದ ಭಾಗವಾಯಿತೋ, ಅಂದರೆ 'ಪ್ರಿಂಟ್ ಕ್ಯಾಪಿಟಲ್' ಆಗಿ ಮಾರ್ಪಟ್ಟಿತೊ, ಆಗ ಮನುಷ್ಯ ಸಂಬಂಧಗಳ ಉದ್ದೇಶ ಮತ್ತು ಸಂವಹನದ ಧ್ಯೇಯ ಸಂಪೂರ್ಣ ಬದಲಾಯಿತು. ಆಗಲೇ ದಿನಪತ್ರಿಕೆ, ಪುಸ್ತಕ ಮತ್ತು ಕರಪತ್ರ ಸಾಧನಗಳು 'ಸರಕಾಗಿ' ಮಾರ್ಪಟ್ಟು ಮನುಷ್ಯರನ್ನು ಉಪಭೋಗದಾರರನ್ನಾಗಿಸಿದವು. ಕುತೂಹಲಕರ ವಿಷಯವೆಂದರೆ ಇವುಗಳು ಸಮುದಾಯಗಳ ಅಸ್ಮಿತೆಯನ್ನು ಕಲ್ಪಿಸಿಕೊಳ್ಳುವಲ್ಲಿ ಸಹಕಾರಿಯಾದುದು. ಈ ಪ್ರಕ್ರಿಯೆ ಕುರಿತು ಈಗಾಗಲೇ ಬೆನೆಡಿಕ್ಟ್ ಆ್ಯಂಡರ್‌ಸನ್ ಹೇಗೆ ದಿನಪತ್ರಿಕೆಗಳು ಚದುರಿದ ಭೂ-ಪ್ರದೇಶವೊಂದರ ಜನರು ಸಾಮಾನ್ಯ ಅಸ್ಮಿತೆಯನ್ನು ಕಲ್ಪಿಸಿಕೊಳ್ಳುವಲ್ಲಿ ಸಹಾಯಕವಾಗಿವೆಯೆಂದು ತನ್ನ 'ಇಮ್ಯಾಜಿನ್ಡ್ ಕಮ್ಯುನಿಟಿ' ಎಂಬ ಪುಸ್ತಕದಲ್ಲಿ ವಿವರಿಸಿದ್ದಾನೆ. ಮತ್ತು ಹೀಗೆ 'ಸಂಸ್ಕೃತಿ' 'ಬಂಡವಾಳ'ವಾಗಿ ರೂಪಾಂತರ ಹೊಂದಿದ ತರುವಾಯ ಸಮೂಹ ಮಾಧ್ಯಮಗಳು ವಹಿಸಬೇಕಾದ ಸಮುದಾಯಗಳ 'ಒಳಗೊಳ್ಳುವಿಕೆ' (inclusive)ಗೆ ಪ್ರತಿಯಾಗಿ 'ಹೊರಗುಳಿಸ' ಬಲ್ಲ (exclusive) ಅಥವಾ ಹಾಗೆ ನಿರ್ಣಯ ತೆಗೆದುಕೊಳ್ಳಬಹುದಾದ ಅಧಿಕಾರ ತಾನಾಗಿಯೇ ಹೂಡಿಕೆದಾರನಿಗೆ ಲಭಿಸಿತು. ಆಗ ಆ ಮಾರುಕಟ್ಟೆಯ ಸ್ವರೂಪ ಎಂತಹದ್ದು ಎಂದು ತಿಳಿಯಬೇಕೆನಿಸಿದಲ್ಲಿ ಮುದ್ರಿಸುವವನು ಯಾರು, ಮುದ್ರಿಸುತ್ತಿರುವುದೇಕೆ, ಮುದ್ರಿಸುತ್ತಿರುವುದು ಯಾರಿಗೆ ಮತ್ತು ಮುದ್ರಿಸಲ್ಪಡುತ್ತಿರುವುದೇನು, ಎಂಬ ಈ ಪ್ರಶ್ನೆಗಳಿಗೆ ಉತ್ತರಿಸಿಕೊಂಡಲ್ಲಿ ಒಂದು ಪತ್ರಿಕೆಯ ಧ್ಯೇಯ, ಧೋರಣೆ ಮತ್ತು ನಿಲುವು ಅರ್ಥವಾಗಬಹುದು. ಮುದ್ರಣ ತಂತ್ರವೆಂಬುದು ಸಂಸ್ಕೃತಿ, ಸಂವಹನ, ಜ್ಞಾನಾರ್ಜನೆ, ಸಾಹಿತ್ಯ, ಸೈದ್ಧಾಂತಿಕ ಸಂಘರ್ಷ ಮತ್ತು ಸಾಮಾಜಿಕ ಚಳುವಳಿಗಳ ಭಾಗವಾಗಿರುವುದರಿಂದ ಆಯಾ ಕಾಲಘಟ್ಟದಲ್ಲಿ ಅದರ ವಿವಿಧ ರೂಪಗಳ ಮೂಲಕ ಜನಸಮೂಹಗಳನ್ನು

**ರಮೇಶ ಅರೋಲಿ**

ಪ್ರಭಾವಿಸಿದೆ. ಒಮ್ಮೆ 'ಸಮೂಹ ಸಂಸ್ಕೃತಿ' (mass culture)ಗೆ ಪೂರಕವಾಗಿ ಬಳಕೆಯಾಗಿದ್ದರೆ ಮತ್ತೊಮ್ಮೆ 'ವರ್ಗ ಸಂಸ್ಕೃತಿ' (class culture)ಯ ದಾಳವಾಗಿ ಬಳಕೆಯಾಗಿದೆ. ಈ ಪುರೋಗಾಮಿ ಮತ್ತು ಪ್ರತಿಗಾಮಿ, ಎಡಪಂಥೀಯ ಮತ್ತು ಬಲಪಂಥೀಯ, ಹೊರಗಿನ ಒಳಗಿನ, ಸ್ವ ಮತ್ತು ಪರ ಎಂಬ ಎರಡು ವಿರುದ್ಧ ವಿಚಾರಧಾರೆಗಳ ನಡುವೆ ಸದಾ ನಡೆಯುವ ತಿಕ್ಕಾಟಕ್ಕೆ ಅವರವರು ತಮ್ಮದೇ ಮಾಧ್ಯಮ ಬಳಸಿಕೊಳ್ಳುತ್ತ ಬಂದಿದ್ದಾರೆ. ಇವೆರಡರ ತೀಕ್ಷ್ಣ ಅಥವಾ ಉಗ್ರ ಸ್ವರೂಪವನ್ನು ಒಪ್ಪದವರು ತಮ್ಮದೇ ಆದ ಮಧ್ಯಮ ಮಾರ್ಗವನ್ನು ರೂಪಿಸಿಕೊಂಡರು.

ಇಂಗ್ಲಿಷ್‌ನಲ್ಲಿ ಲಿಟ್ಲ್ ಮ್ಯಾಗಸೀನ್ (ಇದರ ಸೂಕ್ತ ಪದ Avant-Garde ಎಂತಲೂ ಹೇಳಲಾಗುತ್ತದೆ) ಎಂದು ಕರೆಯಲ್ಪಡುವ ಈ ಕಿರು ಪತ್ರಿಕೆಗಳ ವ್ಯಾಖ್ಯಾನ ಹೀಗಿದೆ: ''ಇವು ವ್ಯಾಪಾರೀಕರಣ ಪ್ರಕ್ರಿಯೆಯಿಂದ ಹೊರಗಿರುವ, ಒಂದು ನಿರ್ದಿಷ್ಟ ಸಂಖ್ಯೆಯ ಪ್ರಸಾರವುಳ್ಳ ನಿಯತಕಾಲಿಕಗಳು. ಜೊತೆಗೆ, ಸಾಮಾನ್ಯವಾಗಿ ಪ್ರಾಯೋಗಿಕತೆಗೆ ಒಗ್ಗಿಕೊಂಡ ಕಲೆ, ಸಾಹಿತ್ಯ ಮತ್ತು ಅಸಾಂಪ್ರದಾಯಿಕ ಸಾಮಾಜಿಕ ಚಿಂತನೆಗಳು ಮತ್ತು ರಾಜಕೀಯ ಸಿದ್ಧಾಂತಗಳಿಗೆ ಬದ್ಧವಾಗಿರುತ್ತವೆ.'' ಅಂದರೆ ಇವು ನಿರ್ದಿಷ್ಟ ಅವಧಿಗೆ ಸುದ್ದಿ ಪ್ರಕಟಿಸುವ ನಿಯತಕಾಲಿಕಗಳಲ್ಲ. ಐರೋಪ್ಯ ರಾಷ್ಟಗಳಲ್ಲಿ ಇವುಗಳ ಹುಟ್ಟು ಮತ್ತು ಪ್ರಸರಣವನ್ನು ಆಧುನಿಕತೆಯ ಪ್ರತೀಕ ಎಂದೇ ಗುರುತಿಸಲಾಗಿದೆ. ಈ ಸಣ್ಣ ಪತ್ರಿಕೆಗಳ ಹುಟ್ಟು ಮಾತ್ರ ಸಾಹಿತ್ಯದ ಹಿನ್ನೀರಿನಲ್ಲೆ ಎಂಬುದು ನಿರ್ವಿವಾದಿತ. ಹತ್ತೊಂಬತ್ತನೆಯ ಶತಮಾನದ ಅಂತ್ಯದ ವೇಳೆಗೆ ಈ ಪತ್ರಿಕೆಗಳು ಆರಂಭವಾಗಿದ್ದವು ಎಂದುಕೊಂಡರೂ, ಇಂತಹ ಪತ್ರಿಕೆಗಳು ಒಂದು ಚಳವಳಿಯ ರೂಪದಲ್ಲಿ 'ಲಿಟಲ್ ಮ್ಯಾಗಸೀನ್ ಮೂವ್‌ಮೆಂಟ್' ಎಂದು ಪರಿಗಣಿಸಲ್ಪಟ್ಟಿದ್ದು ಮಾತ್ರ ೧೯೧೨ರ ಆಸುಪಾಸಿನಲ್ಲಿ. ಆ ವೇಳೆಗಾಗಲೆ ಅಂದಾಜು ೫೪೦ ಪತ್ರಿಕೆಗಳು ಬ್ರಿಟನ್‌ನಿಂದ ಪ್ರಕಟವಾಗುತ್ತಿದ್ದರೆ, ಯುನೈಟೆಡ್ ಸ್ಟೇಟ್ಸ್, ಮೆಕ್ಸಿಕೊ, ಸ್ಪೇನ್, ಆಸ್ಟ್ರೇಲಿಯಾ ಮತ್ತು ಮಾಸ್ಕೋದಿಂದ ಪ್ರಕಟವಾಗುತ್ತಿದ್ದ ಪತ್ರಿಕೆಗಳ ಸಂಖ್ಯೆ ೯೬.



**ಈ ಲೇಖನದಲ್ಲಿ ಇತ್ತೀಚೆಗೆ ಕನ್ನಡದ ಸಣ್ಣ ಸಾಹಿತ್ಯಕ ಪತ್ರಿಕೆಯೊಂದರ ವಿಶೇಷ ಸಂಚಿಕೆ ಕುರಿತು ನಡೆದ/ನಡೆಯುತ್ತಿರುವ ಚರ್ಚೆಯನ್ನು ಗಮನದಲ್ಲಿಟ್ಟುಕೊಂಡು ಸಣ್ಣ ಪತ್ರಿಕೆಗಳ ಹುಟ್ಟು, ಬೆಳವಣಿಗೆ ಮತ್ತು ಅವು ತಾವಾಗಿಯೇ ವಹಿಸಿಕೊಳ್ಳುವ ಕೆಲ ಸಾಮಾಜಿಕ ಹೊಣೆಗಾರಿಕೆ ಕುರಿತು ಇಲ್ಲಿ ಚರ್ಚಿಸಲಾಗಿದೆ.**

ಹಾಗಾಗಿ ಯೂರೋಪಿನಲ್ಲಿ 'ದಿ ಮಾಸೆಸ್' (೧೯೧೧), 'ಪೊಯೆಟ್ರಿ' (೧೯೧೨), 'ಬ್ಲಾಸ್ಟ್' (೧೯೧೪), 'ದಿ ಲಿಟರೇಚರ್ ರಿವ್ಯೂ' (೧೯೧೪) ಮತ್ತು 'ದಿ ಮಿಡ್‌ಲ್ಯಾಂಡ್' (೧೯೧೫) ಪತ್ರಿಕೆಗಳು ಸಾಹಿತ್ಯ ವಲಯದ ಗಮನ ಸೆಳೆದವೋ ಆಗಲೇ ಈ ಪತ್ರಿಕೆಗಳ ಬಗ್ಗೆ ಗಂಭೀರ ಚರ್ಚೆ ಪ್ರಾರಂಭವಾಯಿತು. ಸಣ್ಣ ಪತ್ರಿಕೆಗಳ ಚಳುವಳಿ ಅಂತರರಾಷ್ಟ್ರೀಯ ಮಟ್ಟದ್ದಲ್ಲವೆಂದು ಹೇಳಿದರೂ ಅವುಗಳು ಹುಟ್ಟಿಕೊಂಡಿದ್ದು ಮಾತ್ರ ಮುದ್ರಣ ಯಂತ್ರಗಳು ಮತ್ತು ಬಂಡವಾಳ ಹೂಡಬಲ್ಲ ವ್ಯಕ್ತಿ/ಗುಂಪುಗಳ ಲಭ್ಯತೆಯನ್ನಾಧರಿಸಿ ಎಂಬುದಂತೂ ನಿಜ. ಕೆಲವೊಮ್ಮೆ ಸಾಹಿತ್ಯ, ಕಲೆ, ರಾಜಕೀಯ ಚಳುವಳಿಗಳ ಮುಖವಾಣಿಗಳಾಗಿಯೂ (ಉದಾಹರಣೆಗೆ: ರೊಮಾಂಟಿಸಿಸಂ ಕಾಲದ ಎಡಿನ್‌ಬರೋ ರಿವ್ಯೂ ಮತ್ತು ವಿಲಿಯಮ್ ಕಾಬೆಟ್‌ನ 'ಟೂ ಪೆನ್ನಿ ಟ್ರ್ಯಾಷ್' ಮತ್ತು ಇತರೆ ಚಳುವಳಿಗಳಾದ ಇಮೇಜಿಸಂ, ಸರ್‍ರಿಯಲಿಸಂ, ಸೋಷಲಿಸಂ, ಕಮ್ಯುನಿಸಂ, ಫೆಮಿನಿಸಂ ಕೊನೆಗೆ 'ಬ್ಲಾಕ್ ಲಿಟರೇಚರ್'ನ ಭಾಗವಾಗಿಯೂ ಪ್ರಕಟಗೊಂಡವು. ಕೆಲವೊಮ್ಮೆ ಪ್ರತಿಷ್ಠಿತ ಪ್ರಕಟಣಾ ಸಂಸ್ಥೆಗಳು ಕೂಡ ಸಣ್ಣ ಪತ್ರಿಕೆಗಳನ್ನು ನಡೆಸಿದ ಉದಾಹರಣೆಗಳುಂಟು.

ಆದರೆ ಅಂತಹ ಪತ್ರಿಕೆಗಳು ಮುಖ್ಯವಾಹಿನಿಯ ಸಾರಸ್ವತ 'ಲೋಕ'ದಿಂದ 'ಗುರುತಿಸಲ್ಪಟ್ಟ' ಬರಹಗಾರ ನೊಬ್ಬನ ಬರೆಹಕ್ಕಿರುವ ಬೇಡಿಕೆಯನ್ನಾಧರಿಸಿ ಆತನ ಕೃತಿ ಪ್ರಕಟಣೆಗೆ ಮುಂದಾಗುತ್ತಿದ್ದವು. ಹಾಗೆಯೇ ಒಮ್ಮೊಮ್ಮೆ 'ಗಂಭೀರ' ಸಾಹಿತ್ಯ ಪತ್ರಿಕೆಗಳು ಎಂದು ಗುರುತಿಸಿ ಕೊಂಡವು ಕೂಡ. ಇವು ಒಬ್ಬ ಬರಹಗಾರನ ಕೃತಿಯನ್ನು ತಮ್ಮದೇ ಸಾಂಪ್ರದಾಯಿಕ ವಿಮರ್ಶಾ ಭೂತಗನ್ನಡಿ ಯಿಂದ ಅಳೆಯುವ ಪರಿಪಾಠವನ್ನೂ ರೂಢಿಸಿಕೊಂಡಿದ್ದರ ಜೊತೆಗೆ ಆ ಕಾಲದ 'ಮೂರ್ತಿ'ಗಳನ್ನು ಕಟ್ಟುವ ಇಲ್ಲವೇ ಒಂದು ಗುಂಪಿನ ವಕ್ತಾರರಂತೆ ವರ್ತಿಸಿದ ಉದಾಹರಣೆಗಳೂ ಇವೆ. (ಉದಾಹರಣೆಗೆ, ವಿಲಿಯಂ ಫಾಕ್ನರ್‌ನ ಬರಹಗಳಿಗೆ 'ದಿ ಸಾಟರ್ಡೇ ಈವ್ನಿಂಗ್ ಪೋಸ್ಟ್' ಮತ್ತು 'ದಿ ಅಟ್ಲಾಂಟಿಕ್ ಮಂತ್ಲಿ' ಪತ್ರಿಕೆಗಳು ಕೊಟ್ಟ ಪ್ರಾಶಸ್ತ್ಯ). ಇದೆಲ್ಲದರ ಒಟ್ಟಿಗೆ ಸಮಕಾಲೀನ ಬರಹಗಾರರ ಕೃತಿ ಪರಿಚಯಿಸುವ, ಪ್ರಕಟವಾದುದರ ಕುರಿತು ಚರ್ಚಿಸುವ ಮೂಲಕ ಶ್ರೇಷ್ಠತೆ(?)ಯ ಗುರುತಿಸುವ ಪ್ರಯತ್ನಗಳೂ ಆಗಿವೆ. ಇನ್ನು ಯೂರೋಪಿನಲ್ಲಂತೂ ಸಣ್ಣ ಪತ್ರಿಕೆಗಳನ್ನು ಸಂಪಾದಿಸಿದ, ಚರ್ಚೆಗಳನ್ನು ಹುಟ್ಟುಹಾಕಿದ ಘಟಾನುಘಟಿಗಳಲ್ಲಿ ಟಿ. ಎಸ್. ಇಲಿಯೆಟ್, ಎಜ್ರಾ ಪೌಂಡ್, ಜೇಮ್ಸ್ ಜಾಯ್ಸ್, ಪೋ, ವೆಂಧಮ್ ಲೇವಿಸ್, ಸ್ಕಾಟ್ ಫಿಟ್ಜೆರಾಲ್ಡ್, ಥಾಮಸ್ ಉಲ್ಫ್, ಜಾನ್ ಓ'ಹಾರ, ದರೋತಿ ಪಾರ್ಕರ್ ಮತ್ತು ಬರ್ನಾರ್ಡ್ ಡೆ ವೊಟೊ ಮುಂತಾದವರ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಆದರೆ ೧೯೩೦-೪೦ರ ನಂತರ ಪ್ರಕಟವಾದ ಪತ್ರಿಕೆಗಳಲ್ಲಿ ಹೆಚ್ಚಿನವು ಪ್ರತಿಭಟಿಸುವ ಉದ್ದೇಶದಿಂದ ಇಲ್ಲವೇ ಪ್ರಯೋಗಾರ್ಥವಾಗಿ ಸಂಪಾದಿಸಿದವುಗಳಾಗಿವೆ. ಸಾಹಿತ್ಯ, ಚಳುವಳಿ ಅದರಲ್ಲೂ ಎಡಪಂಥೀಯ, ಬಲಪಂಥೀಯ, ವಿಮರ್ಶೆ, ಧಾರ್ಮಿಕ ಮತ್ತು ಪ್ರಾದೇಶಿಕ ಎಂದು ವಿಂಗಡಿಸಬಹುದಾದ ಸಮೂಹ ಪತ್ರಿಕೆಗಳು ಮತ್ತು ವರ್ಗ ಪತ್ರಿಕೆಗಳು ಭಾರಿ ಸಂಖ್ಯೆಯಲ್ಲಿ ಪ್ರಕಟಣೆ ಕಂಡವು.



### ಭಾರತೀಯ ಸಂದರ್ಭದಲ್ಲಿ

ನಮಗೆ ಆಧುನಿಕ ಮುದ್ರಣ ಯಂತ್ರ ಮತ್ತು ತಂತ್ರ ದೊರಕಿದ್ದು ಪಾಶ್ಚಾತ್ಯ ಕ್ರೈಸ್ತ ಮಿಶನರಿಗಳಿಂದ. ಹಾಗೆಯೆ ಅಲ್ಲಿಯ ಸೈದ್ಧಾಂತಿಕ, ಸಾಹಿತ್ಯಿಕ ಮತ್ತು ಸಾಮಾಜಿಕ ಚಳುವಳಿಗಳ ಪ್ರಭಾವ ಮತ್ತು ಕಾವು ಕೂಡ ಇಲ್ಲಿಯ ಚಳುವಳಿಗಳನ್ನು ತಟ್ಟಿವೆ. ಆಧುನಿಕ ವಿಚಾರಧಾರೆಗೆ ಸ್ವಲ್ಪ ಬೇಗ ತಮ್ಮನ್ನು ತೆರೆದುಕೊಂಡ, ಕನ್ನಡವೂ ಸೇರಿದಂತೆ ಇತರೆ ಭಾರತೀಯ ಭಾಷೆಗಳಾದ, ಬಂಗಾಲಿ, ಮರಾಠಿ, ಗುಜರಾತಿ, ಮಲಯಾಳಂ, ತಮಿಳು, ತೆಲುಗು ಮತ್ತು ಹಿಂದಿ ಭಾಷೆಗಳಲ್ಲಿ ಸಣ್ಣ ಪತ್ರಿಕೆಗಳು ಗುರುತಿಸಬಹುದಾದ ಪ್ರಮಾಣದಲ್ಲಿ ಹುಟ್ಟಿಕೊಂಡಿದ್ದು ೧೯೩೦-೬೦ರ ಇಸವಿಯಲ್ಲಿ, ಬಹುಶಃ ಬ್ರಿಟಿಷ್ ಆಡಳಿತದ ಅವಧಿಯಲ್ಲಿ ಭಾರತೀಯ ಪತ್ರಿಕೋದ್ಯಮಕ್ಕಿದ್ದ ಏಕೈಕ ಗುರಿ ಪರಕೀಯರನ್ನು ಈ ನೆಲದಿಂದ ಓಡಿಸುವುದಾಗಿತ್ತು. ಹೀಗಾಗಿ ಪತ್ರಿಕೆ ಸಂಪಾದನೆಯನ್ನು ರಾಷ್ಟ್ರೀಯ ಚಳುವಳಿಯ ಪ್ರಮುಖ ಭಾಗವೆಂದೂ ಮತ್ತು ಭಾರತೀಯ ಪತ್ರಿಕೋದ್ಯಮದ ಮೊದಲ ಘಟ್ಟ ಎಂದೂ ಪರಿಗಣಿಸಲಾಗಿದೆ. ತುರ್ತು ಪರಿಸ್ಥಿತಿ ಸಂದರ್ಭದಲ್ಲಿ ಭುಗಿಲೆದ್ದ ವಿದ್ಯಾರ್ಥಿ, ರೈತ, ಕಾರ್ಮಿಕ, ಮಹಿಳಾ ಮತ್ತು ದಲಿತ ಚಳುವಳಿಗಳಿಗೆ ಪೂರಕವಾಗಿ ಸಂಪಾದಿಸಲಾದ/ ಪ್ರಕಟಿಸಲಾದ ಪತ್ರಿಕೆಗಳ ಪಾತ್ರವನ್ನು ಎರಡನೆಯ ಘಟ್ಟ ಎಂದು ಗುರುತಿಸಲಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿ ಪ್ರಕಟವಾಗುತ್ತಿದ್ದ ಪತ್ರಿಕೆಗಳ ಯಾಜಮಾನ್ಯಕ್ಕಿದ್ದ ಸ್ಪಷ್ಟ ಉದ್ದೇಶ ಮತ್ತು ಬದ್ಧತೆಗೆ ಬದಲಾಗಿ ಪತ್ರಿಕಾ ವೃತ್ತಿ ಉದ್ಯಮವಾಗಿ ಮಾರ್ಪಟ್ಟು ಹೇಳಿಕೊಳ್ಳಲಿದ್ದ ಸಾಮಾಜಿಕ ಜವಾಬ್ದಾರಿಯು ಮಾರುಕಟ್ಟೆ ಸರಕಾಗಿ ಪರಿವರ್ತನೆ ಗೊಂಡಿದ್ದು ಒಂದು ಗಮನಾರ್ಹ ಬದಲಾವಣೆ.

ಬಂಡವಾಳ ಹೂಡಿಕೆಯಿಂದಾಗಿ ಬೃಹತ್ ಪತ್ರಿಕಾಲಯಗಳು (ಮುಖ್ಯವಾಗಿ ಸರಕಾರದ ಸಬ್ಸಿಡಿಗಾಗಿ) ಆಗತಾನೆ ಆರಂಭವಾದ ಸಾಮಾಜಿಕ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಳುವಳಿ ಸಂಬಂಧಿತ ಸುದ್ದಿಗಳನ್ನು ಪ್ರಕಟಿಸುವ ಕ್ರಮ ಮತ್ತು ಅಂತಹ ಚಳುವಳಿ, ಅವುಗಳ ನಾಯಕರೆಡೆಗಿನ ನಿಲುವು ತುಂಬ ಭಿನ್ನವಾಗಿತ್ತು. ಭಾರತದಲ್ಲಿ ಸಣ್ಣ ಪತ್ರಿಕೆಗಳ ಆರಂಭ ಬಂಗಾಲಿಯಲ್ಲಿ ೧೯೨೩ರಲ್ಲಿ ಪ್ರಕಟವಾದ 'ಕಲ್ಲೋಲ್' ಪತ್ರಿಕೆಯಿಂದ ಗುರುತಿಸಿದರೂ, ನಂತರ ೧೯೩೬ರಲ್ಲಿ ಆರಂಭವಾದ ಪ್ರಗತಿಪರ ಬರಹಗಾರರ ಚಳುವಳಿ ಸಂದರ್ಭದಲ್ಲಿ ಹೇಳಿಕೊಳ್ಳುವಷ್ಟು ಪ್ರಮಾಣದಲ್ಲಿ ಪ್ರಕಟವಾಗಲಿಲ್ಲ. ಆದರೆ ಅದೊಂದು ಚಳುವಳಿಯಾಗಿ ಹೊರಹೊಮ್ಮಿದ್ದು ೧೯೬೦ರ ದಶಕದಲ್ಲಿಯೆ. ಆದಾಗಲೇ ಅ-ಪ್ರತಿಷ್ಠಿತ ಸಮುದಾಯದ ಮೇಲೆ ಅಕ್ಷರಸ್ಥ ಜನಾಂಗ ಅಂಬೇಡ್ಕರ್, ಲೋಹಿಯಾ, ಜೆ.ಪಿ., ಮಾರ್ಕ್ಸ್ ಮತ್ತು ಮಾವೋ ಅವರ ವಿಚಾರಧಾರೆಯಿಂದ ಪ್ರಭಾವಿತರಾಗಿ ಕನಿಷ್ಠ ಸಾಂವಿಧಾನಾತ್ಮಕ ಮೂಲಭೂತ ಸವಲತ್ತು ಸಿಕ್ಕಾವು ಎಂದು ಆಶಾಭರಿತರಾಗಿ ಕಾಯುವವರ ಕುತ್ತಿಗೆ ಮೇಲೆ ಕತ್ತಿಯಿಟ್ಟ ಸರಕಾರದ ಧೋರಣೆ ಮತ್ತು ಆಗಿನ್ನೂ ಜಾರಿಯಲ್ಲಿದ್ದ ಜಾತಿ ಪದ್ಧತಿ, ಭೂಮಾಲಿಕತ್ವ, ಸಾಂಸ್ಕೃತಿಕ ಸಾಂಸ್ಥೀಕರಣಗಳ ವಿರುದ್ಧ ದನಿಯೆತ್ತುವ ಮೂಲಕ ತಮ್ಮನ್ನು 'ಹಸಿದ ಜನಾಂಗ' ಎಂದೇ ಘೋಷಿಸಿಕೊಂಡಿತ್ತು. ಪಶ್ಚಿಮ ಬಂಗಾಳದಲ್ಲಿ ಆರಂಭವಾದ ಈ ಚಳುವಳಿ 'ಹಂಗ್ರಿ ಜನರೇಶನ್ ಮ್ಯಾಗಸೀನ್' ಎಂಬ ಹೆಸರಿನ ಒಂದು ಸಣ್ಣ ಪತ್ರಿಕೆಯನ್ನು ಹೊರಡಿಸಿತು. ೧೯೭೦ರಲ್ಲಿ 'ಕೌರಬ್', ೧೯೮೦ರಲ್ಲಿ 'ನೂತನ್ ಕಬಿತಾ'ನಂತಹ ಪತ್ರಿಕೆಗಳ ಪ್ರಕಟಿಸುವುದರ ಜೊತೆಗೆ, ೧೯೭೮ರಲ್ಲಿ 'ಲಿಟ್ಲ್ ಮ್ಯಾಗಸೀನ್ ಅಂಡ್ ರಿಸರ್ಚ್ ಸೆಂಟರ್' ಎಂಬ ಅಧ್ಯಯನ ಸಂಸ್ಥೆಯನ್ನು ಸ್ಥಾಪಿಸಲಾಯಿತು.

ತೆಲುಗಿನಲ್ಲಿ ೧೯೩೬ರಲ್ಲಾಗಲೇ ಮುದ್ದುಕೃಷ್ಣ ಎಂಬ ಬರಹಗಾರ 'ಜ್ವಾಲಾ' ಪತ್ರಿಕೆ ಆರಂಭಿಸಿ ಆ ಕಾಲದ ಯುವ ಬರಹಗಾರರಿಗೆ ವೇದಿಕೆಯನ್ನೊದಗಿಸಿದ್ದರು. ೧೯೮೦ರಲ್ಲಿ ಪ್ರಕಟವಾಗುತ್ತಿದ್ದ 'ನಲುಪು', 'ಎದುರೀತ', 'ಗಬ್ಬಿಲಂ' ಮತ್ತು 'ಏಕಲವ್ಯ' ಪತ್ರಿಕೆಗಳು ಹೋರಾಟನಿರತ ಯುವಕರ ಮತ್ತು ಅಂತಹ ಸಂಘಟನೆಗಳ ಮುಖವಾಣಿಗಳಾಗಿದ್ದುವು. ಹಿಂದಿಯಲ್ಲಿ ಪ್ರಕಟವಾದ 'ಹನ್ಸ್', 'ಧರ್ಮಯುಗ್', 'ತದ್ಭವ್', 'ವಸುಧಾ', 'ಪ್ರತಿಮಾ', 'ಆವೇಶ್', 'ಸಾರಿಕಾ' ಮತ್ತು 'ಕದಂಬಿನಿ' ಪತ್ರಿಕೆಗಳು ಸಾಹಿತ್ಯಿಕ ಚರ್ಚೆಗಳನ್ನು ಹುಟ್ಟುಹಾಕುತ್ತಾ ತಮ್ಮ ಮಿತಿಯಲ್ಲೇ ದುಡಿಯುವ, ಕೆಳ ಮಧ್ಯಮವರ್ಗದ ಪರವಾಗಿದ್ದ ಬರಹಗಳ ಪ್ರಕಟಣೆಗೆ ಸ್ಥಳ ಮೀಸಲಿಡುತ್ತಿದ್ದವು.

ಇನ್ನು ಮರಾಠಿ, ಪಂಜಾಬಿಯಲ್ಲಿ ಪ್ರಕಟವಾದ ಸಣ್ಣ ಮತ್ತು ಸಾಹಿತ್ಯಿಕ ಪತ್ರಿಕೆಗಳು ಕೂಡ 'ಪ್ಯಾನ್ ಇಂಡಿಯನ್' ಸ್ವರೂಪ ಪಡೆದಿದ್ದು ಸುಳ್ಳಲ್ಲ. ಪಂಜಾಬಿನ 'ಪ್ರೀತ್ ಲಹರಿ' ಇತ್ತೀಚೆಗೆ ತನ್ನ ೭೫ನೆಯ ವರ್ಷವನ್ನು ಪೂರೈಸಿತು. ೧೯೩೩ರಲ್ಲಿ ನಿರುಪಮ್ ದತ್ ಆರಂಭಿಸಿದ ಈ ಪತ್ರಿಕೆಯೊಂದಿಗೆ ಪಂಜಾಬಿ ಸಾಹಿತ್ಯದ ಅತಿರಥ-ಮಹಾರಥರಾದ ಕರ್ತಾರ್ ಸಿಂಗ್ ದುಗ್ಗಲ್, ಬಲವಂತ್ ಗಾರ್ಗಿ, ಸಾಹೀರ್ ಲುಧಿಯಾನ್ವಿಯಂಥವರು ಭಾಗಿಯಾಗಿದ್ದರು. ೧೯೬೦-೭೦ರ ಕಾಲದಲ್ಲಿ ಅದೇ ತಾನೆ ಆರಂಭವಾದ ನಕ್ಸಲ್ ಚಳುವಳಿಯೊಂದಿಗೆ ಗುರುತಿಸಲ್ಪಟ್ಟಿದ್ದ ಈ ಪತ್ರಿಕೆಯು ನಂತರದ ದಿನಗಳಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯ ಕಾರಣ ಆ ಚಳುವಳಿಯಿಂದ ದೂರವಾಯಿತು. ಹಾಗೆಯೇ ಅಮೃತಾ ಪ್ರೀತಮ್, ಇಂದ್ರಜಿತ್ ಇಮ್ರೋಜ್ ದಂಪತಿಗಳು ಆರಂಭಿಸಿದ

(೫೮ನೇ ಪುಟಕ್ಕೆ)




# ಹೊರಜಗತ್ತಿನ ಸೂಕ್ಷ್ಮ ವಿವರಗಳನ್ನು ಕಲಾತ್ಮಕವಾಗಿ ದಾಖಲಿಸುವ 'ಅಟ್ಟುಂಬೊಳದ ಪಟ್ಟಾಂಗ'



ಲೇಖಕರು : **ಡಾ. ಮಹೇಶ್ವರಿ. ಯು.**
ಪ್ರಕಾಶನ : **ಕಾಸರಗೋಡು ಪ್ರಕಾಶನ**
ಪ್ರಕಟಣ ವರ್ಷ : ೨೦೦೯
ಬೆಲೆ : ರೂ. ೭೫/-
ಪುಟಗಳು : ೧೨೮

**ಒಂ**ದು ಇಂಪಾದ ಸುಂದರ ಜನಪದ ಗೀತೆಯಂತೆ ಓದುಗರಿಗೆ ಆಹ್ಲಾದಕರ ಅನುಭವ ನೀಡುವ 'ಅಟ್ಟುಂಬೊಳದ ಪಟ್ಟಾಂಗ' ಡಾ|| ಯು. ಮಹೇಶ್ವರಿಯವರ ಇತ್ತೀಚಿನ ಗದ್ಯಕೃತಿ. ಮೂಲತಃ ಕವಯಿತ್ರಿಯಾಗಿದ್ದು ಇಪ್ಪತ್ತು ವರ್ಷಗಳ ಹಿಂದೆ ತಮ್ಮ ಸೂಕ್ಷ್ಮ ಸಂವೇದನೆಗಳಿಗೆ 'ಮುಗಿಲ ಹಕ್ಕಿ' ಎಂಬ ತಮ್ಮ ಮೊದಲ ಕವನಸಂಕಲನದ ಮೂಲಕ ದನಿಯಿತ್ತ ಮಹೇಶ್ವರಿಯವರು ನಾಡಿನ ಪ್ರಸಿದ್ಧ ಪತ್ರಿಕೆಗಳು ಮತ್ತು ನಿಯತಕಾಲಿಕಗಳಲ್ಲಿ ಕವನ-ಲೇಖನಗಳನ್ನು ಪ್ರಕಟಿಸುತ್ತ ಬಂದವರು. ಪದ್ಯ ಗದ್ಯಗಳೆರಡರಲ್ಲೂ ಅದ್ಭುತ ಹಿಡಿತ ಸಾಧಿಸಿಕೊಂಡಿರುವ ಅಪೂರ್ವ ಲೇಖಕಿ. ಕಾಸರಗೋಡು ಗಡಿಪ್ರದೇಶದಲ್ಲಿ ತಣ್ಣಗೆ ಕುಳಿತು ಸಾಹಿತ್ಯಕೃಷಿ ನಡೆಸುತ್ತಿರುವ ಈಕೆ ಸ್ವಭಾವತಃ ಮೌನಿಯಾಗಿದ್ದು ಪ್ರಚಾರಕ್ಕಾಗಿ ಎಂದೂ ಯಾರ ಹಿಂದೆಯೂ ಸುತ್ತಿದವರಲ್ಲ. ತಮ್ಮ ಸುತ್ತಮುತ್ತಲ ಬದುಕಿನ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ಕುಸುರಿ ಕೆಲಸದ ಮೂಲಕ ಅಂದವಾಗಿ ನೇಯ್ದು, ಸಮಾಜದ ಓರೆಕೋರೆಗಳೆಡೆಗೆ ನಯವಾಗಿಯೇ ಬೊಟ್ಟುಮಾಡಿ ತೋರಿಸಿ ಓದುಗರ ದೃಷ್ಟಿಯನ್ನು ಆ ಕಡೆಗೆ ತಿರುಗಿಸಬಲ್ಲ ಅವರ ಜಾಣ್ಮೆಗೆ ಈ ಅಂಕಣ ಬರಹಗಳ ಸಂಕಲನ 'ಅಟ್ಟುಂಬೊಳದ ಪಟ್ಟಾಂಗ'ವೇ ಸಾಕ್ಷಿ.

ಅಚ್ಚ ದೇಸಿ ಪದಗಳನ್ನು ಹೊಂದಿರುವ ಶೀರ್ಷಿಕೆ 'ಅಟ್ಟುಂಬೊಳದ ಪಟ್ಟಾಂಗ'. 'ಅಟ್ಟು ಉಂಬ ಒಳ' ಅಂದರೆ ಅಡುಗೆ ಮಾಡಿ ಊಟ ಮಾಡುವ ಕೋಣೆ. ಕಾಸರಗೋಡು ಕಡೆಯ ಹವ್ಯಕರು ಬಳಸುವ ಪದವಿದು. ಹೆಚ್ಚು ಹೊತ್ತು ಹೆಂಗಸರದೇ ಸಾಮ್ರಾಜ್ಯವಾಗಿರುವ, ಹೆಚ್ಚು ಬೆಳಕಿಲ್ಲದ ಈ ಕೋಣೆಯಲ್ಲಿ ಊಟ ಮಾಡುವಷ್ಟು ಹೊತ್ತಾದರೂ ಗಂಡಸರೂ ಕೂರುವುದಿದೆ. ಮನೆಯೊಳಗಿನ ಎಲ್ಲರನ್ನೂ ದಿನದಲ್ಲಿ ನಾಲ್ಕಾರು ಬಾರಿಯಾದರೂ ಒಂದುಸೇರಿಸುವ ಅಟ್ಟುಂಬೊಳ ಅಲ್ಲಿ ನೆರೆಯುವ ಸಮಸ್ತರ ಪಟ್ಟಾಂಗಕ್ಕೂ ಸಾಕ್ಷಿಯಾಗುತ್ತದೆ. ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿದ್ದ ಅವಿಭಕ್ತ ಕುಟುಂಬದ ನೂರಾರು ಮಂದಿ ಪಡೆಯುತ್ತಿದ್ದ ಏಕೈಕ ಮನೋರಂಜನೆಯೆಂದರೆ ಈ ಪಟ್ಟಾಂಗವೇ. ಮಾತು ಎಲ್ಲಿಂದಲೋ ಬಂದು ಎಲ್ಲೋ ಸಾಗಿ ಎಲ್ಲೋ ಕೊನೆಸೇರುವುದೇ ಪಟ್ಟಾಂಗ. ಹೊರಜಗತ್ತಿನ ಎಲ್ಲ ಸುದ್ದಿಗಳನ್ನು ಕಲೆಹಾಕುವ ಒಂದು ಜಾಗ ಅಟ್ಟುಂಬೊಳ. ಮಹೇಶ್ವರಿಯವರ ಈ ಕೃತಿಯಲ್ಲಿ ಯೋಚನೆಗಳು ಹತ್ತಾರು ಶಾಖೆಗಳಾಗಿ ಒಡೆದು ಎಲ್ಲೆಲ್ಲೋ ಸಾಗಿದರೂ ಬದುಕಿನ ಏಕಸೂತ್ರದಿಂದ ಬಂಧಿಸಲ್ಪಟ್ಟು ಅಟ್ಟುಂಬೊಳದ ರೂಪಕವು ಯಶಸ್ವಿಯಾಗಿ ಮೂಡಿಬಂದಿದೆ.

ಇಲ್ಲಿ ಪುಟ್ಟ ಪುಟ್ಟ ೪೦ ಲೇಖನಗಳಿವೆ. ಮೊದಲ ಲೇಖನ 'ರಂಗ ಬರಿದಾಗುವುದಿಲ್ಲ' ಶೀರ್ಷಿಕೆಯ ಅರ್ಥವಿವರಣೆಯನ್ನು ನೀಡುತ್ತ ಎಳೆಯ ಮಕ್ಕಳ ಪ್ರತಿಭೆ, ಸಾಧನೆ, ಗುರಿ, ಭವಿಷ್ಯಗಳ ಬಗ್ಗೆ ಕಾಳಜಿ ವ್ಯಕ್ತಪಡಿಸುತ್ತದೆ. ಯಾರೂ ಗಮನಿಸದೆ, ಮೌನವಾಗಿ ತಮ್ಮ ಸೌಂದರ್ಯ ಬೀರುತ್ತ ಜೀವನ ಸಾರ್ಥಕ್ಯವನ್ನು ಕಾಣುವ ದಾರಿಬದಿಯ ಪುಟಾಣಿ ಹೂಗಳ ಬಗ್ಗೆ ಪ್ರೀತಿಯ ಮಾತುಗಳನ್ನಾಡುವ ಲೇಖನ 'ವಿನಮ್ರತೆಯ ಕಿರುಹಣತೆಗಳು' ಹೆಸರು-ಕೀರ್ತಿಗಳ ಸುತ್ತ ಗಿರಕಿ ಹೊಡೆಯುವ ಮೂರ್ಖರತ್ತ ಬೊಟ್ಟು ಮಾಡಿ ತೋರಿಸುತ್ತದೆ. ಅತಿಥಿ ಸತ್ಕಾರದಲ್ಲಿ ಅಪ್ಪಿತಪ್ಪಿ ಏನಾದರೂ ಲೋಪದೋಷಗಳಾಗಿಬಿಟ್ಟರೆ ಅದನ್ನೇ ದೊಡ್ಡದು ಮಾಡಿ ಗೊಣಗುವವರ ಸಂಕುಚಿತ ಮನೋಭಾವದ ಬಗ್ಗೆ 'ಉಪಚಾರ' ಎಂಬ ಲೇಖನದಲ್ಲಿ ಲೇಖಕಿ ವಿಷಾದ ವ್ಯಕ್ತಪಡಿಸುತ್ತಾರೆ. ತಾನು ಚಿಕ್ಕವಳಾಗಿದ್ದಾಗ ಶಾಲೆಯಲ್ಲಿ ಮಕ್ಕಳ ಹತ್ತಿರ ಸಣ್ಣಪುಟ್ಟ ಕೆಲಸಗಳನ್ನು ಮಾಡಿಸಿ ಸ್ವಾವಲಂಬನೆಯ ಪಾಠ ಕಲಿಸಿಕೊಟ್ಟ ಗಿರಿಜಾ ಟೀಚರ್ ಮತ್ತು ಇಂದು ತಮ್ಮ ಮಕ್ಕಳ ಕೈಯಲ್ಲಿ ಏನೂ ಕೆಲಸ ಮಾಡಿಸಬಾರದೆಂದು ಆಕ್ಷೇಪಿಸುವ ಹಿರಿಯರ ನಡುವಣ ವ್ಯತ್ಯಾಸವನ್ನು ಎತ್ತಿ ತೋರಿಸುವ ಲೇಖನವು ಇಂದು ಅತ್ಯಂತ ಪ್ರಸ್ತುತ.

**ಪಾರ್ವತಿ ಜಿ. ಐತಾಳ್**

ಹೆಂಡತಿಯಾದವಳು ತನ್ನ ಮನದೊಳಗಣ ಸಿಟ್ಟು, ಅಸಮಾಧಾನಗಳನ್ನು ಗಟ್ಟಿಯಾಗಿ ಹೇಳದೆ ಹಾಗೆಯೇ ಇಟ್ಟುಕೊಂಡರೆ ಹೇಗೆ, ಎನ್ನುವುದು ಲೇಖಕಿಯ ಪ್ರಶ್ನೆ. 'ಇಚ್ಛೆಯನರಿತು ನಡೆವ ಸತಿ'ಯರ ಬಗ್ಗೆಯೇನೋ ಸರ್ವಜ್ಞ ಹೇಳಿದ್ದಾನೆ. ಆದರೆ ಹಾಗೆಯೇ 'ಇಚ್ಛೆಯನರಿತು ನಡೆವ ಪತಿ'ಯೂ ಇದ್ದರೆ ಆಗಬಹುದಿತ್ತು ಎನ್ನುತ್ತಾರೆ. ಇವತ್ತು ಪರಿಸರ-ಪ್ರಾಣಿ ಸಂರಕ್ಷಣೆ ಎಂದು ಧ್ವನಿಯೇರಿಸಿ ಹೋರಾಟ ನಡೆಸಿ ಪ್ರಚಾರ ಗಿಟ್ಟಿಸಿಕೊಳ್ಳುವ 'ದೊಡ್ಡ ಮನುಷ್ಯರು' ನಮ್ಮ ಹಿರಿಯರ ಕಾಲದಲ್ಲಿ ತಾವು ಸಾಕಿದ ನಾಯಿ, ಬೆಕ್ಕು, ದನ, ಕರುಗಳನ್ನು ತಮ್ಮ ಮಕ್ಕಳಂತೆಯೇ ಪ್ರೀತಿಯಿಂದ ಕಾಣುತ್ತಿದ್ದ ನಮ್ಮ ಅಜ್ಜಿ-ಅಜ್ಜಂದಿರ ಮುಂದೆ ಏನೂ ಅಲ್ಲವೆಂಬುದು ಮಹೇಶ್ವರಿಯವರ ನಿಲುವು. ಪತ್ರ ಮೈತ್ರಿಯ ದಿನಗಳು ಮರೆಗೆ ಸರಿದು ವಿದ್ಯುನ್ಮಾನ ಮಾಧ್ಯಮಗಳ ಮೂಲಕವೇ ಎಲ್ಲ ಸಂಪರ್ಕಗಳೂ ನಡೆಯುತ್ತಿರುವ ಇಂದಿನ ಕಾಲದಲ್ಲಿ ಪ್ರೀತಿ, ಸ್ನೇಹ, ಕಾಳಜಿಗಳ ಪ್ರತೀಕವಾಗಿದ್ದ ಆ ಪತ್ರಗಳ ಮಾಧುರ್ಯ-ಪರಿಮಳಗಳಿಗೆ ಇಂದಿನ ಸಾಧನಗಳು ಸಾಟಿಯಾಗಬಲ್ಲವೇ ಎಂದು ಅವರು ಕೇಳುತ್ತಾರೆ. ಹಿಂದೆ ಗ್ರಾಮೀಣ ಪ್ರದೇಶದ ಎಳೆಯ ಮಕ್ಕಳು ಯಕ್ಷಗಾನ ಬಯಲಾಟಗಳನ್ನು ಒಮ್ಮೆ ನೋಡಿದರೆಂದರೆ ಸಾಕು, ತಿಂಗಳು ಗಟ್ಟಲೆ ಅದರ ನೆನಪಿನಲ್ಲಿ ಭೀಮ, ಬಕಾಸುರ, ಕರ್ಣ, ಅರ್ಜುನರ ಪಾತ್ರಗಳನ್ನು ಮಾವಿನ ತೋಪಿನಲ್ಲಿ ಪ್ರಕೃತಿಯಲ್ಲಿ ಲಭ್ಯ ಪರಿಕರಗಳನ್ನು ಬಳಸಿ ಅಭಿನಯಿಸಿ ಖುಷಿಪಡುತ್ತಿದ್ದ ಹಿಂದಿನ ದಿನಗಳು ಲೇಖಕಿಯ ನೆನಪಿನಲ್ಲಿ ಅರಳುತ್ತವೆ. ಮಕ್ಕಳು ಕೋಪ ಮಾಡಿಕೊಳ್ಳುತ್ತ, ಮರುದಿನವೇ ರಾಜಿ ಮಾಡಿಕೊಳ್ಳುತ್ತ ತಮ್ಮ ಮುಗ್ಧತೆಯನ್ನು ಪ್ರದರ್ಶಿಸುತ್ತಿದ್ದ ನೆನಪು, ಒಮ್ಮೆ ಕೋಪ ಮಾಡಿ ಸಾಯುವ ತನಕವೂ ರಾಜಿ ಮಾಡಿಕೊಳ್ಳಲಾರದ ಹಿರಿಯರ ಧೋರಣೆಗೆ ವಿರುದ್ಧ ನಿಲ್ಲುವುದನ್ನು ಲೇಖಕಿ 'ಕೋಪ ಮಾಡುವುದು' ಎಂಬ ಲೇಖನದಲ್ಲಿ ಚಿತ್ರಿಸುತ್ತಾರೆ.

ಮದ್ಯಪಾನದ ಚಟದಿಂದ ಕೌಟುಂಬಿಕ ಬದುಕು ಛಿದ್ರಗೊಳ್ಳುವುದು, ಅಜ್ಜಿ ಮತ್ತು ಆಕೆಯ ತಲೆಮಾರಿನವರಲ್ಲಿದ್ದ ತುಂಬು ಆತ್ಮವಿಶ್ವಾಸ, ಎಂತೆಂತಹ ಕಷ್ಟಗಳನ್ನೂ ಧೈರ್ಯದಿಂದ ಎದುರಿಸಿ ಬಂಡೆಕಲ್ಲಿನಂತೆ ಗಟ್ಟಿಯಾಗಿ ನಿಲ್ಲುತ್ತಿದ್ದ ಹಿರಿಯ ಜೀವಗಳು, ಉಂಡಲಕಾಳು ಉರುಟುವ ಕೂಟ ಕೆಲಸದಲ್ಲಿ ನಿರತರಾಗುವ ಅವಿದ್ಯಾವಂತ ಹೆಂಗಸರಿಂದ ಹುಟ್ಟಿ ಹರಿಯುತ್ತಿದ್ದ ಕಾವ್ಯಗಂಗೆ, ಯಾವುದೇ ಕೆಲಸವನ್ನು ಶ್ರದ್ಧೆಯಿಂದ ಮಾಡಬೇಕೆಂಬ ಅಜ್ಜಿಯ ಮಾತುಗಳು, ದೊಡ್ಡಣ್ಣನ ಸುಶ್ರಾವ್ಯ ಕಾವ್ಯವಾಚನದ ಮೂಲಕ ತೆರೆದುಕೊಳ್ಳುವ ರಾಮಾಯಣದ ಅನಲಾ ಪ್ರಸಂಗ, ಹೆಣ್ಣು ಮದುವೆಯಾಗುತ್ತಲೇ ತಾನು ಹುಟ್ಟಿದ ಮನೆಯನ್ನೂ, ತಂದೆ-ತಾಯಿ-ಒಡಹುಟ್ಟಿದವರನ್ನು ಒಮ್ಮೆಲೇ ಬಿಟ್ಟುಹೋಗಿ, ತೀರಾ ಅಪರಿಚಿತವಾದ ವಾತಾವರಣದಲ್ಲಿರಬೇಕಾದ ಪ್ರಸಂಗ ಬಂದಾಗ ಅವಳ ಪಾಡು, ಶಾಲೆಯ ದಾರಿಯ ನೆನಪಿನಲ್ಲಿ ತಾನು ಬಾಲ್ಯದಲ್ಲಿ ಎದುರಿಸಿದ ಕಷ್ಟ-ಸಂಕಟಗಳು ತನ್ನನ್ನು ಗಟ್ಟಿಮಾಡಿದ್ದು, ಶಿಸ್ತೆಂದರೆ ಏನೆಂದೇ ತಿಳಿಯದೆ ಬದುಕಿನ ಬಂಡಿಯನ್ನು ಹೇಗೋ ಎಳೆಯುವ ಗೋಸ್ಪಾರಿ ಸ್ವಭಾವದವರು, ತಲೇಮ ಇನ್ನಿತರ ನೂರಾರು ಗ್ರಾಮೀಣ ಆಟಗಳನ್ನು ಮರೆತು ಕ್ರಿಕೆಟ್ ಹುಚ್ಚಿನಲ್ಲಿ ಜೀಳುವ ಮಕ್ಕಳಲ್ಲಿ ಇಂದು ಮಾಯವಾದ ಸೃಜನಶೀಲತೆ, ಹಿಂದಿನ ಕಾಲದ ಜಾತ್ರೆಗಳಲ್ಲಿ ಕಂಡುಬರುತ್ತಿದ್ದ ಅಪ್ಪಟ ದೇಸಿ ನೋಟ, ಅನ್ನದಾತನಾದ ರೈತನ

ಸುಖದುಃಖಗಳ ಬಗ್ಗೆ ಕಿಂಚಿತ್ತೂ ಯೋಚಿಸದೆ ತಮ್ಮ ಪಾಡಿಗೆ ತಾವಿರುವ ಅಧಿಕಾರಿವರ್ಗ, ಆಧುನಿಕ ತಿಂಡಿಗಳ ಮಾಯಾಜಾಲದಲ್ಲಿ ಇಂದು ಮೂಲೆಗುಂಪಾಗಿರುವ 'ನೀರುಂಡೆ' ಎಂಬ ದೇಸಿ ತಿಂಡಿಯ ರುಚಿ, ಜಾಗತೀಕರಣದ ದುಷ್ಪರಿಣಾಮವಾಗಿ ಭಾರತೀಯರು ತಮ್ಮ ಸರಳ ಜೀವನವನ್ನು ಮರೆತು ಕೊಳ್ಳುಬಾಕರಾಗಿ ಮಾರ್ಪಟ್ಟ ಬಗೆಗಿನ ವಿಷಾದ, ಮನೆಮನೆಗಳಲ್ಲಿ ಹೆಂಗಸರು ಮುಂಜಾನೆ ಎದ್ದು ಮೊಸರು ಕಡೆಯುತ್ತಲೋ ಅಕ್ಕಿ ಅರೆಯುತ್ತಲೋ ಹಾಡುತ್ತಿದ್ದ ಉದಯರಾಗ ಮತ್ತು ಸುಪ್ರಭಾತಗಳು ಜನಪದರ ಬದುಕಿನಲ್ಲಿ ವಹಿಸುತ್ತಿದ್ದ ಸಕ್ರಿಯ ಪಾತ್ರ, ಬಾಲ್ಯದಲ್ಲಿ ಹಿರಿಯರು ತಮ್ಮ ಮಕ್ಕಳ ಆರೋಗ್ಯದ ಬಗ್ಗೆ ಅಪಾರ ಕಾಳಜಿವಹಿಸಿ 'ರೋಗ ಬಂದಮೇಲೆ ಗುಣಮಾಡುವುದಕ್ಕಿಂತ ಬಾರದಂತೆ ತಡೆಗಟ್ಟುವುದೇ ಮೇಲು' ಎಂಬ ತತ್ವದೊಂದಿಗೆ ಪ್ರತಿದಿನವೆಂಬಂತೆ ಒತ್ತಾಯಿಸಿ ತಿನ್ನಿಸುತ್ತಿದ್ದ ಮದ್ದು, ಕುಡಿಸುತ್ತಿದ್ದ ಕಷಾಯಗಳು – ಹೀಗೆ ವೈವಿಧ್ಯಮಯ ವಸ್ತುಗಳನ್ನು ಹೆಣೆದು ಒಂದು ಪುಟ್ಟ ಜಗತ್ತನ್ನೇ ಮಹೇಶ್ವರಿಯವರು ಇಲ್ಲಿ ಸೃಷ್ಟಿಸಿದ್ದಾರೆ.

ಪಟ್ಟಾಂಗವೆಂಬ ಪರಿಕಲ್ಪನೆಗನುಸಾರವಾಗಿ ಮಹೇಶ್ವರಿಯವರು ಇಲ್ಲಿ ಬರೆದ ಎಲ್ಲ ಲೇಖನಗಳು ಕಾಲದಲ್ಲಿ ಹಿಂದಕ್ಕೂ ಮುಂದಕ್ಕೂ ಚಲಿಸುತ್ತ ಹಿಂದಿನ ಜನಪದರ ಜೀವನಕ್ರಮದಲ್ಲಿದ್ದ ಸರಳತೆ ಮತ್ತು ನಿರಾಡಂಬರತೆಗಳಿಗೆ ವಿರುದ್ಧವಾಗಿ ನಿಲ್ಲುವ ಆಧುನಿಕ ಜೀವನದ ಕೃತಕತೆ ಮತ್ತು ಟೊಳ್ಳುತನಗಳ ಬಗ್ಗೆ ವಿಷಾದವನ್ನು ವ್ಯಕ್ತಪಡಿಸುತ್ತವೆ. ಗ್ರಾಮೀಣ ಬದುಕಿನ ಹಸಿಹಸಿಯಾದ ವಿವರ-ವರ್ಣನೆಗಳು, ಲೇಖಕಿಯ ಬಾಲ್ಯದ ನೆನಪುಗಳು, ಘಟನಾವಳಿಗಳು, ಹಿಂದಿನ ಮತ್ತು ಇಂದಿನ ಕಾಲದ ಸಮಾಜದ ವಿವಿಧ ವರ್ಗಗಳ ಜನರ ಸರಳತೆ, ಮುಗ್ಧತೆ, ಜೀವನಪ್ರೀತಿ, ಹಾಗೆಯೇ ಒಣಜಂಬ, ಅಹಂಕಾರ, ಆಲಸ್ಯ ಮುಂತಾದ ವಿಭಿನ್ನ ಗುಣ-ಸ್ವಭಾವಗಳು – ಹೀಗೆ ಎಲ್ಲವನ್ನೂ ಕಟ್ಟಿಕೊಡುವ ಮಹೇಶ್ವರಿಯವರ ಬರಹದ ಶೈಲಿ ಆಪ್ತವಾದುದು. ಇವರ ರಚನಾ ಬಂಧದಲ್ಲಿ ಗಟ್ಟಿತನವಿದೆ ಮತ್ತು ಪ್ರಸ್ತುತಿಯಲ್ಲಿ ಕಲಾತ್ಮಕತೆಯಿದೆ. ಉದ್ದಕ್ಕೂ ಬಳಸುವ ತಿಳಿಹಾಸ್ಯದ ಲೇಪನವು ಬರೆಹಗಳ ಸೌಂದರ್ಯವನ್ನು ಹೆಚ್ಚಿಸಿದೆ. ಒಟ್ಟಿನಲ್ಲಿ ಖುಷಿಯಿಂದ ಓದಿಸಿಕೊಂಡು ಹೋಗುವ ಮತ್ತು ಬದುಕಿನ ಧನಾತ್ಮಕ ಮೌಲ್ಯಗಳ ಬಗ್ಗೆ ಚಿಂತಿಸಲು ಓದುಗರಿಗೆ ಪ್ರೇರಣೆ ನೀಡುವ ಲೇಖನಗಳ ಸಂಕಲನ 'ಅಟ್ಟುಂಬೊಳದ ಪಟ್ಟಾಂಗ.'

**ಪಾರ್ವತಿ ಜಿ. ಐತಾಳ್**
ಸುರಗಂಗಾ, ಬಸ್ರೂರು ಕ್ರಾಸ್ ರಸ್ತೆ, ಕುಂದಾಪುರ - ೫೭೬ ೨೦೧

---

ಸಣ್ಣ ಪತ್ರಿಕೆಗಳು, ಆಧುನಿಕತೆ ಮತ್ತು ಶ್ರೇಷ್ಠತೆಯ ವಕ್ತಾರಿಕೆ... *(೫೬ನೇ ಪುಟದಿಂದ)*

'ನಾಗಮಣಿ' ತುಂಬ ಕಲಾತ್ಮಕವಾಗಿ ಆ ಕಾಲದ ಪಂಜಾಬಿ ಸಾಹಿತ್ಯದ ತಾಜಾತನವನ್ನು ಹೊತ್ತು ಹೊರಬರುತ್ತಿತ್ತು. ಆದರೆ ಪ್ರೀತಮ್ ಅವರ ಅನಾರೋಗ್ಯದ ಕಾರಣ ಈ ಪತ್ರಿಕೆ ಮುಚ್ಚಲ್ಪಟ್ಟು ಇದರಿಂದುಂಟಾದ ಖಾಲಿ ಜಾಗವನ್ನು ತುಂಬಲು ಹುಟ್ಟಿಕೊಂಡದ್ದು 'ಶಂಖ್'. ಜೊತೆಗೆ 'ಅಣು', 'ಅಖರ್' ಮತ್ತು 'ಕಹಾನಿ' ಎಂಬ ಪಂಜಾಬಿ ಭಾಷೆಯ ಪತ್ರಿಕೆಗಳು ಸ್ವಲ್ಪಮಟ್ಟಿಗೆ ಆ ಕೊರತೆ ತುಂಬಿವೆ. ದಲಿತ ಮತ್ತು ಕಮ್ಯುನಿಸ್ಟ್ ಚಳುವಳಿಯ ಏರುಕಾಲದಲ್ಲಿ, ಮರಾಠಿಯಲ್ಲಿ ಹತ್ತು ಹಲವು ಸಣ್ಣ ಪತ್ರಿಕೆಗಳು ಪ್ರಕಟವಾದುವು. ೧೯೫೪ರಲ್ಲಿ ದಿಲೀಪ್ ಚಿತ್ರೆ, ಅರುಣ್ ಕೋಲಟ್ಕರ್, ಬಂದು ವಾಜೆ ಮತ್ತು ರಮೇಶ ಸಮರ್ಥ್ ಆರಂಭಿಸಿದ 'ಶಬ್ದ್' ಪತ್ರಿಕೆಯು ಪರ್ಯಾಯ ಸಾಹಿತ್ಯ, ಸಂಸ್ಕೃತಿ ಮತ್ತು ಚಿಂತನೆಗೆ ಮೀಸಲಿತ್ತು.

**ಕನ್ನಡ ಸಂದರ್ಭದಲ್ಲಿ**

ಇನ್ನು ಕನ್ನಡ ಸಂದರ್ಭಕ್ಕೆ ಬಂದರೆ ಬೇರೆಬೇರೆ ಕಾಲಘಟ್ಟದಲ್ಲಿ ಭಾರಿ ಸಂಖ್ಯೆಯ ಸಣ್ಣ ಪತ್ರಿಕೆಗಳು ಪ್ರಕಟವಾಗಿವೆ. ನವೋದಯ ಘಟ್ಟದಲ್ಲಿ ಮಾಸ್ತಿಯವರು ಆರಂಭಿಸಿದ 'ಜೀವನ', ಬೆಟಗೆರೆ ಕೃಷ್ಣಶರ್ಮರು ಸಂಪಾದಿಸುತ್ತಿದ್ದ 'ಜಯಂತಿ' ಪ್ರಮುಖ ಪಾತ್ರವಹಿಸಿವೆ. ಇನ್ನು ನವ್ಯ ಸಾಹಿತ್ಯದ ಕಾಲಘಟ್ಟದಲ್ಲಂತೂ ಇಡೀ ಸಾಹಿತ್ಯ ಹೊಲವನ್ನು ಹರಗಿದ್ದು ಸಣ್ಣ ಪತ್ರಿಕೆಗಳು ಎಂದರೆ ತಪ್ಪಾಗಲಾರದು. ೧೯೬೫ರಲ್ಲಿ ಚಂದ್ರಶೇಖರ ಪಾಟೀಲ, ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಗಿರಡ್ಡಿ ಗೋವಿಂದರಾಜ ಸೇರಿ ಆರಂಭಿಸಿದ 'ಸಂಕ್ರಮಣ' ಮತ್ತು ''ಇದು ಯಾವ ಒಂದು ವ್ಯಕ್ತಿಯ, ಗುಂಪಿನ ಅಥವಾ ಪಂಥದ ಮುಖವಾಣಿಯಾಗಲು ಬಯಸುವುದಿಲ್ಲ, ಎಲ್ಲ ಬಗೆಯ ವಿಚಾರಗಳಿಗೂ ಸಿದ್ಧಾಂತಗಳ ಮಂಡನೆಗೂ ಇಲ್ಲಿ ಯಾವಾಗಲೂ ಅವಕಾಶ ಉಂಟು'' (ಕನ್ನಡದಲ್ಲಿ ಕಲೆ ಮತ್ತು ಸಾಹಿತ್ಯ ಪತ್ರಿಕೆಗಳು, ಪು. ೧೫೩) ಎಂಬ ಘೋಷಣೆಯೊಂದಿಗೆ ಆರಂಭವಾದ 'ಸಾಕ್ಷಿ'ಯಂತಹ ಪತ್ರಿಕೆಗಳು ನಿರ್ವಹಿಸಿದ ಪಾತ್ರ ದಾಖಲಾಗುವಂತಹುದು.

ಹಾಗೆಯೇ, ದಲಿತ, ಶೂದ್ರ, ಶೋಷಿತ, ಪಂಚಮ, ಸಂವಾದದಂತಹ ಪತ್ರಿಕೆಗಳು ಚಳುವಳಿಗಾರರ ಮಾರ್ಗಸೂಚಿಗಳಷ್ಟೆ ಅಲ್ಲದೆ ಸಾಹಿತ್ಯ, ಸಾಂಸ್ಕೃತಿಕ ರಾಜಕಾರಣದಲ್ಲಿ ಸದಾ ದಮನಿತ ಸಮುದಾಯಗಳ ಪರ ದನಿಯೆತ್ತಿದ್ದವು. ಕವಿತಾ, ಅಲೋಕ, ಅಂಕಣ, ಗಾಂಧಿ ಬಜಾರ್, ಸುದ್ದಿಸಂಗಾತಿ, ಹೊಸದಿಕ್ಕು, ಪ್ರಜ್ಞೆ, ಸಾಹಿತ್ಯ-ಸಂಘರ್ಷ, ಸಮೀಕ್ಷಕ, ಸಂಕೀರ್ಣ, ಸಮನ್ವಯ ಮತ್ತು ಸಂಚಯದಂತಹ (ಈಗಲೂ ಸಾಹಿತ್ಯ ಸ್ಪರ್ಧೆಗಳನ್ನು ಏರ್ಪಡಿಸುತ್ತಾ ಯಶಸ್ವಿಯಾಗಿ ಪ್ರಕಟವಾಗುತ್ತಿವೆ) ಸಣ್ಣ ಪತ್ರಿಕೆಗಳು ಕೂಡ ಪುಸ್ತಕ ಪರಿಚಯ, ವಿಮರ್ಶೆ ಮತ್ತು ಹೊಸ ಬರಹಗಾರರಿಗೆ ಆದ್ಯತೆ ನೀಡುತ್ತ ಪ್ರಕಟವಾಗಿವೆ. ನೀನಾಸಂ ರಂಗ ಶಿಕ್ಷಣ ಸಂಸ್ಥೆಯಿಂದ ಪ್ರಕಟವಾಗುತ್ತಿರುವ 'ಮಾತುಕತೆ' ಕಲೆ, ಸಾಹಿತ್ಯ ಮತ್ತು ರಂಗ ಪ್ರಯೋಗಗಳ ಕುರಿತಾದ ಸಂವಾದಕ್ಕೆ ಮೀಸಲಾಗಿದೆ. ೧೯೭೨ರಲ್ಲಿ ಆರಂಭವಾದ 'ಮುಂಗಾರು' ಪತ್ರಿಕೆ ಪ್ರಕಟವಾಗಿದ್ದು ಕಡಿಮೆ ಕಾಲಾವಧಿಯದಾದರೂ ಅದರ ಪ್ರಭಾವ ಮಾತ್ರ, ''ಈ ಪೂರ್ವಗ್ರಹ, ಪಕ್ಷಪಾತಗಳ ಶನಿದೊಗಲನ್ನು ಹರಿದೊಗೆದು ಶುದ್ಧ ಸಾಹಿತ್ಯ ವಿಚಾರಗಳ ವೇದಿಕೆಯಾಗುವ ಹಂಬಲವನ್ನು ಹೊತ್ತು 'ಮುಂಗಾರು' ಜನ್ಮ ತಾಳಿದೆ'', ಎಂಬ ಸಂಪಾದಕರ ಮಾತು ಆಗಿನ ಸಣ್ಣ ಪತ್ರಿಕೆಗಳಲ್ಲೂ ಗುಂಪುಗಾರಿಕೆ, ಪಕ್ಷಪಾತವಿದ್ದವು ಎಂಬುದಕ್ಕೆ ನಿದರ್ಶನ. ಆದರೆ ಇವೆಲ್ಲದರ ನಡುವೆಯೂ 'ಶೂದ್ರ'ದಂತಹ ಪತ್ರಿಕೆ ದಶಕಗಳನ್ನು ಪೂರೈಸುವುದು ಯು. ಆರ್. ಅನಂತಮೂರ್ತಿಯವರು ಹೇಳುವಂತೆ, ''ಇದು ಸಾಧ್ಯವಾದುದು ಶ್ರೀನಿವಾಸರ ಶ್ರದ್ಧೆ ಮತ್ತು ಇಂಥ ಕೆಲಸದಲ್ಲಿ ಎಲ್ಲರಿಗೂ ಆಶ್ಚರ್ಯ ಹುಟ್ಟಿಸುವಂತೆ ಅವರಲ್ಲಿರುವ ಆಶಾವಾದಗಳಿಂದ. ಮನುಷ್ಯನಿಗೆ ಪ್ರೀತಿಸುವುದು ಸಾಧ್ಯವಾಗಲು ಧೈರ್ಯಬೇಕು, ಧಾರಾಳಬೇಕು, ತುಸು ಭೋಳೆತನವೂ ಅವನಲ್ಲಿರಬೇಕು (ಶ್ರೀನಿವಾಸ) ಎನ್ನುತ್ತಾರೆ. ಈ ಮೂರೂ ಶ್ರೀನಿವಾಸರಲ್ಲಿದೆ; ಅಲ್ಲದೆ ಕಿರು ಪತ್ರಿಕೆಯೊಂದನ್ನು ಸುಸ್ತಿಲ್ಲದಂತೆ ಪ್ರತಿ ತಿಂಗಳೂ ಸಂಪಾದಿಸಿ ಪ್ರಕಟಿಸುವುದು, ಪ್ರೀತಿಯನ್ನು ಅನವರತ ನವೀಕರಿಸಿಕೊಳ್ಳುತ್ತ ಹೋಗುವಂಥ ಹೃದಯವಂತಿಕೆಯ ಕ್ರಿಯೆಯೇ'' (ಪೂರ್ವಾಪರ, ಪು. ೧೪೪). ಇದೇ ಸಣ್ಣ ಪತ್ರಿಕೆಯೊಂದರ ಯಶಸ್ಸಿನ ಗುಟ್ಟು.

ಇನ್ನು ೧೯೮೨ರಲ್ಲಿ ಆರಂಭವಾದ ರುಜುವಾತು, ''ಸೃಜನಶೀಲ ಹೊಸ ಪ್ರಯೋಗಗಳಿಗಾಗಿ ಹೊಸ ದಿಕ್ಕಿನ ಹುಡುಕಾಟಕ್ಕಾಗಿ, ನಮ್ಮ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದ ಶೋಧಕ್ಕಾಗಿ'' (ಕನ್ನಡದಲ್ಲಿ ಕಲೆ ಮತ್ತು ಸಾಹಿತ್ಯ ಪತ್ರಿಕೆಗಳು, ಪು. ೧೩೬) ಎಂಬ ನಿಲುವಿನೊಂದಿಗೆ ಪ್ರಕಟವಾಗುತ್ತಾ ಕೆಲ ಕಾಲ ಸಾಹಿತ್ಯಿಕ ಚರ್ಚೆಗಳನ್ನು ಜೀವಂತವಾಗಿಟ್ಟಿತ್ತು.

ಹಾಗೆಯೇ ಸಾಂಸ್ಕೃತಿಕ ಅಧ್ಯಯನಕಾರರು ಹೇಳುವಂತೆ ಒಮ್ಮೊಮ್ಮೆ ಸಣ್ಣ ಮತ್ತು ಟ್ಯಾಬ್ಲಾಯಿಡ್ ಪತ್ರಿಕೆಗಳು ಒಂದು ನಿರ್ದಿಷ್ಟ ಓದುಗ ವಲಯದಲ್ಲಿ 'ಮೇಲು ಸಂಸ್ಕೃತಿ' ಮತ್ತು 'ಕೀಳು ಸಂಸ್ಕೃತಿ' ಎಂಬ ಭಿನ್ನತೆಯನ್ನು ಹೋಗಲಾಡಿಸುವ ಮೂಲಕ ಸದಾ ಅಧಿಕಾರ ಕೇಂದ್ರಿತ ಮುಖ್ಯವಾಹಿನಿ ಮಾಧ್ಯಮಗಳು ನಿರ್ಮಿಸುವ ಬೂರ್ಷ್ವಾ ಪಬ್ಲಿಕ್ ಸ್ಫಿಯರ್‌ಗೆ ಬದಲಾಗಿ ರ್‍ಯಾಷನಲ್, ಕ್ರಿಟಿಕಲ್ ಆದ ಮತ್ತೊಂದು ಪರ್ಯಾಯ ಸಾರ್ವಜನಿಕ ವಲಯವೊಂದನ್ನು ಕಟ್ಟಬಯಸುತ್ತವೆ. ಇನ್ನೂ ಸ್ಪಷ್ಟಗೊಳಿಸುವುದಾದರೆ ಅನಂತಮೂರ್ತಿಯವರು ಹೇಳುವ ಹಾಗೆ, ''ಇರುವುದನ್ನು ಹೊರಹಾಕುವ ಅನಿವಾರ್ಯ ಕೆಲಸದ ನಡುವೆ ನಮ್ಮ ಸಂಸ್ಕೃತಿಯಲ್ಲಿ ಇನ್ನೂ ಇರದದ್ದನ್ನು ಹೇಗೆ ಮೊಳೆಯಿಸಬೇಕೆಂದು ಕಿರು ಪತ್ರಿಕೆಯ ಸಂಪಾದಕ ಹೊಂಚುಹಾಕುತ್ತಿರುತ್ತಾನೆ'' (ಪೂರ್ವಾಪರ, ಪು. ೧೪೪). ಹೀಗೆ ಹೊಂಚುಹಾಕುವ ಸಂಪಾದಕ/ಬರಹಗಾರ ಕನಿಷ್ಠ ಸಮಕಾಲೀನ ಸಾಮಾಜಿಕ ಸಮಸ್ಯೆಗಳ ಕುರಿತು ಮಾತನಾಡದೆ ಕೇವಲ ಶ್ರೇಷ್ಠತೆಯ ತಕ್ಕಡಿ ಹಿಡಿದು ನಗರವಾಸಿ ಓದುಗವರ್ಗವೊಂದನ್ನು ಗಮನದಲ್ಲಿಟ್ಟುಕೊಂಡು ಕೇವಲ ಮೂರ್ತಿಗಳನ್ನು ಕಟ್ಟುತ್ತಾ ಶ್ರೇಷ್ಠತೆಯ ವಕ್ತಾರನಂತೆ ವರ್ತಿಸಿದರೆ ಆತ ನಿಜವಾಗಿಯೂ ಸಾರಸ್ವತ ಲೋಕದ ವಂಚಕನಾಗುತ್ತಾನೆ.

**ರಮೇಶ ಅರೋಲಿ**
ಸಂಶೋಧನಾ ವಿದ್ಯಾರ್ಥಿ, ಎಸ್. ಎನ್. ಸ್ಕೂಲ್ (ಕಮ್ಯುನಿಕೇಷನ್), ಕೇಂದ್ರೀಯ ವಿಶ್ವವಿದ್ಯಾಲಯ
ಹೈದರಾಬಾದ್ ವಿಶ್ವವಿದ್ಯಾಲಯ, ಗಚ್ಚಿಬೌಲಿ, ಹೈದರಾಬಾದ್ - ೫೦೦ ೦೪೬

೧೯೪೭ರ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ ಮೈಸೂರು ಸಂಸ್ಥಾನದಲ್ಲಿ ರಾಜಪ್ರಭುತ್ವವನ್ನು ಉಳಿಸಿಕೊಳ್ಳುವ ಪ್ರಯತ್ನ ನಡೆಯಿತು. ಇದಕ್ಕೆ ವಿರುದ್ಧವಾಗಿ ಮೈಸೂರು ಜನತೆ ಜವಾಬ್ದಾರಿ ಸರ್ಕಾರ ರಚನೆಗೆ ಒಂದು ಚಳವಳಿಯನ್ನು ಹಮ್ಮಿಕೊಂಡಿತು. ಅದೇ 'ಮೈಸೂರು ಚಲೋ ಚಳವಳಿ'. ಈ ಚಳವಳಿಯು ರಾಜಪ್ರಭುತ್ವವನ್ನು ದಿಟ್ಟತನದಿಂದ ಪ್ರಶ್ನಿಸಿತು. ರಾಜನನ್ನು ರಾಜಸತ್ತೆಯಿಂದ ಕೆಳಗಿಳಿಸಲು ಮತ್ತು ಅವನ ಅಧಿಕಾರವನ್ನು ಮೊಟಕುಗೊಳಿಸಲು ಪ್ರಯತ್ನಿಸಿದರು. ವರ್ಗ, ಭಾಷೆ, ಬುಡಕಟ್ಟು, ಸಂತತಿ, ಜಾತಿಗಳಂಥ ಅಂಶಗಳ ಭೇದವಿಲ್ಲದೆ ಪ್ರಜೆಗಳೆಲ್ಲರ ಸಮಾನತೆಯನ್ನು ಒಳಗೊಂಡ ಜನ ಪ್ರಭುತ್ವವೆಂಬ ನೀತಿಯನ್ನು ಅಳವಡಿಸಿಕೊಂಡಿದ್ದರು. ರಾಜಪ್ರಭುತ್ವವು ಮೈಸೂರು ಸಂಸ್ಥಾನದಲ್ಲಿ ಉಗಮದಿಂದ ಕೊನೆಯವರೆಗೂ ಒಂದಿಲ್ಲ ಒಂದು ಪ್ರಜಾಪ್ರಭುತ್ವಾತ್ಮಕವಾದ ವಿರೋಧಗಳನ್ನು ಎದುರಿಸುತ್ತಲೇ ಇತ್ತು. ಕೊನೆಗೆ ಜನತೆಯು ಹಮ್ಮಿಕೊಂಡಿದ್ದ ಚಳವಳಿಯಿಂದ ರಾಜಪ್ರಭುತ್ವವು ಪತನಗೊಂಡು ಪ್ರಜಾಪ್ರಭುತ್ವವು ಮೈಸೂರು ರಾಜ್ಯದಲ್ಲಿ ಸ್ಥಾಪಿತವಾಯಿತು.

ರಾಕೇಶ್ ಎಚ್. ಎಸ್.

**ಭಾ**ರತದಲ್ಲಿ ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ಆರಂಭಗೊಂಡ ಸ್ವಾತಂತ್ರ್ಯ ಹೋರಾಟವು ಆರಂಭದಲ್ಲಿ ಕೆಲವೇ ಪ್ರದೇಶಗಳಿಗೆ ಹಾಗೂ ಸಂಸ್ಥಾನಗಳಿಗೆ ಸೀಮಿತವಾಗಿದ್ದರೂ, ಕ್ರಮೇಣ ಅದು ವಿಸ್ತಾರಗೊಂಡು ರಾಷ್ಟ್ರೀಯತೆಯ ನೆಲೆಗಟ್ಟಿನಲ್ಲಿ ಭಾರತೀಯರ ಹೋರಾಟವಾಗಿ ರೂಪುಗೊಂಡಿತು. ಬ್ರಿಟಿಷ್ ಸಾಮ್ರಾಜ್ಯಶಾಹಿ ಧೋರಣೆಗೆ ಭಾರತದಲ್ಲಿ ಪ್ರಬಲ ಪ್ರತಿರೋಧಗಳು ಕಂಡುಬಂದರೂ, ಕೆಲವು ಸಂಸ್ಥಾನಗಳು ಬ್ರಿಟಿಷ್ ಆಳ್ವಿಕೆಯನ್ನು ಒಪ್ಪಿಕೊಂಡು ಆಶ್ರಿತ ಸಂಸ್ಥಾನಗಳಾಗುವುದರ ಮೂಲಕ ತಮ್ಮ ರಾಜತ್ವದ ಅಸ್ತಿತ್ವವನ್ನು ಉಳಿಸಿಕೊಂಡವು. ಇಲ್ಲಿ 'ಸಂಸ್ಥಾನ' ಎಂದರೆ ರಾಜರು ಆಳುತ್ತಿದ್ದು, ಬ್ರಿಟಿಷರ ನೇರ ಆಡಳಿತ ಪ್ರದೇಶವಲ್ಲ ಎಂದು ತಿಳಿಯಬೇಕು. ಇಂಥ ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವೂ ಒಂದು. ಇಂಥಲ್ಲಿ ರಾಜನ ಹಾಗೂ ಬ್ರಿಟಿಷ್ ಪ್ರಭುತ್ವದ ಎರಡೂ ಪ್ರಭುತ್ವಗಳ ದಬ್ಬಾಳಿಕೆ ಸಂಸ್ಥಾನಗಳ ಜನತೆಯ ಮೇಲೆ ಜರುಗಿತ್ತು. ಈ ಎರಡೂ ಪ್ರಭುತ್ವಗಳನ್ನು ಮಟ್ಟಹಾಕಲು ಸಂಸ್ಥಾನಗಳ ಜನತೆ ಮುಂದಾದರು. ಮೈಸೂರಿನ ಜನತೆಯೂ ಇಂಥದೆ ಹೋರಾಟಗಳಲ್ಲಿ ತೊಡಗಿಕೊಂಡರು. ಅವರ ಉದ್ದೇಶ ಪ್ರಜಾಪ್ರಭುತ್ವ ಸ್ಥಾಪನೆ.

ರಾಜತಾಂತ್ರಿಕ ಸಂಸ್ಥೆಗಳು, ಅಧಿಕಾರದ ಹಂಚುವಿಕೆಯ ನಿಯಮಾವಳಿಗಳು ಹಾಗೂ ರಾಜನೀತಿಯ ಚಟುವಟಿಕೆಗಳು ಆಯಾ ಸಮಾಜಗಳಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಹೊಂದಿರುತ್ತವೆ. ಆದರೆ ರಾಜಕೀಯ ಪ್ರಕ್ರಿಯೆಯು ಮಾತ್ರ ವಿಶ್ವವ್ಯಾಪಿಯಾಗಿ ಸಾಮಾನ್ಯ ಗುಣಲಕ್ಷಣ ಪಡೆದಿರುತ್ತವೆ. ಇತಿಹಾಸದ ವಿವಿಧ ಕಾಲಗಳ ಸಂದರ್ಭ ಮತ್ತು ಪರಿಸ್ಥಿತಿಗಳನ್ನು ಅನುಸರಿಸಿ ಅನೇಕ ಬಗೆಯ ಆಡಳಿತ ವ್ಯವಸ್ಥೆಗಳನ್ನು ಕಾಣಬಹುದು. ಒಂದು ಕಾಲದಲ್ಲಿ ರಾಜಪ್ರಭುತ್ವವೆಂಬ ನಿರಂಕುಶ ಆಡಳಿತ ವ್ಯವಸ್ಥೆ ಇತ್ತೆಂದು ಚರಿತ್ರೆಯಲ್ಲಿ ಕಂಡುಬರುತ್ತದೆ. ಇದಕ್ಕೆ ಮೈಸೂರು ಸಂಸ್ಥಾನ ಹೊರತಲ್ಲ.

ಮೈಸೂರು ಸಂಸ್ಥಾನ ೧೭೯೯ ರಿಂದ ಬ್ರಿಟಿಷರ ಕೈಸೇರಿದ ಮೇಲೆ, ವಸಾಹತುಶಾಹಿಯ ಮಾದರಿಯಲ್ಲಿ ಬೆಳೆದು ೧೯೪೭ರವರೆಗೂ ಹಾಗೆಯೇ ಉಳಿಯಿತು. ಬ್ರಿಟಿಷ್ ಪ್ರಭುತ್ವದ ಅಧೀನದಲ್ಲಿ ರಾಜಪ್ರಭುತ್ವವಿದ್ದು, ಇವೆರಡರ ಕೆಳಗೆ ಜನತೆ ಸಿಲುಕಿದ್ದರು. ಬ್ರಿಟಿಷ್ ವಸಾಹತು ಆಡಳಿತಗಾರರಿಗೆ ಮೈಸೂರಿನ ಅರಸರ ವಿರುದ್ಧ ದಬ್ಬಾಳಿಕೆ ನಡೆಸುವ ಪ್ರಮೇಯವೇ ಇರಲಿಲ್ಲ. ಕಾರಣ ವಸಾಹತುಶಾಹಿಗಳು ಮಾಡಬಯಸಿದ್ದನ್ನು ಮೈಸೂರಿನ ಅರಸರೇ ಮಾಡುತ್ತಿದ್ದರು. ಹೀಗಾಗಿ ಮೈಸೂರಿನ ರಾಜರ ನಿರಂಕುಶ ಆಳ್ವಿಕೆಯನ್ನು ಬ್ರಿಟಿಷರು ಬಹಳ ಹುಮ್ಮನಸ್ಸಿನಿಂದಲೇ ಪ್ರೋತ್ಸಾಹಿಸಿದರು. ಮೈಸೂರು ರಾಜಶಾಹಿಯು ಬ್ರಿಟಿಷ್ ಸರ್ವಾಧಿಕಾರದ ಮಾದರಿಯಲ್ಲಿ ತನ್ನದೇ ಎಂಬ ನೀತಿ-ನಿಯಮಗಳನ್ನು ಜಾರಿಗೊಳಿಸಿತು. ವಸಾಹತುಶಾಹಿಗೆ ರಾಜ್ಯಾಧಿಕಾರವನ್ನು ನಿಯಂತ್ರಿಸುವುದು ನೀತಿಯಾದರೆ ರಾಜನು ಅಪರಿಮಿತ ಅಧಿಕಾರ ಪಡೆದಿದ್ದನು. ಅಂತೆಯೇ ಆಡಳಿತ, ವರ್ಗವಾದ ದಿವಾನರೂ, ಅಧಿಕಾರಿಗಳೂ ಪ್ರಜಾಪೀಡಕ ಲಕ್ಷಣ ಪಡೆದಿದ್ದರು. ಜನತಾಂತ್ರಿಕ ಶಕ್ತಿಯ ವಿಕಾಸಕ್ಕೆ ಪ್ರತಿರೋಧ ಒಡ್ಡುವ ಸ್ವರೂಪ ಪಡೆಯುತ್ತಿತ್ತು. ಪ್ರಜಾಪ್ರಭುತ್ವದ ಬೆಳವಣಿಗೆಗೆ ವಿರೋಧ ಒಡ್ಡುವುದು ಅದರ ಮುಖ್ಯ ಲಕ್ಷಣ. ಮೈಸೂರು ಸಂಸ್ಥಾನದ ಆಡಳಿತ ೧೮೩೧ರಿಂದ ೧೮೮೦ರವರೆಗೆ ಬ್ರಿಟಿಷರ ಸ್ನೇಹ ಹಾಗೂ ಹಿತವನ್ನು ಪೋಷಿಸುತ್ತಾ ಅವರೊಡನೆ ಹೊಂದಿಕೊಂಡು ಬದುಕಿತ್ತು. ಸರ್ ಮಾರ್ಕ್ ಕಬ್ಬನ್ ಹೇಳಿದಂತೆ, ''೧೮೫೭ರ ಕಷ್ಟ ಕಾಲದಲ್ಲಿಯೂ ಬ್ರಿಟಿಷ್ ರಾಜಭಕ್ತಿಗೆ ಪ್ರತಿರೋಧವೆನಿಸುವ ಯಾವುದನ್ನೂ ಸಹಿಸದೆ, ಇಂಗ್ಲಿಷರ ರಾಜ್ಯಾಡಳಿತ ಸುಭದ್ರತೆಯ ವಿಷಯದಲ್ಲಿ ತಮ್ಮ ಪೂರ್ಣ ವಿಶ್ವಾಸವನ್ನು ಘೋಷಿಸುವ ಎಲ್ಲ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತ ವಿಧೇಯತೆಯಿಂದ ಇದ್ದರು.'' ೧೮೮೧ರಲ್ಲಿ ೧೦ನೇ ಚಾಮರಾಜ ಒಡೆಯರ್ ಸಿಂಹಾಸನಾರೂಢರಾದಾಗ, ಮತ್ತೆ ಉಚ್ಚರಿಸಿದ ರಾಜ್ಯಾಧಿಕಾರ ವರ್ಗಾವಣೆ ಪತ್ರದ ಷರತ್ತುಗಳಿಗನುಗುಣವಾಗಿ



ಬ್ರಿಟಿಷರ ಪರಮಾಧಿಕಾರ ಕ್ಷೀಣವಾಗಿತ್ತು. ಇಬ್ಬರು ಸಲಹೆಗಾರರ ನೆರವಿನೊಡನೆ ದಿವಾನರು ರಾಜ್ಯದ ಆಡಳಿತಾಂಗದ ಮುಖ್ಯರಾಗಿ ಕೆಲಸಮಾಡಲು ಅವಕಾಶವಾಯಿತು. ಆಗ ದಿವಾನರಾಗಿ ರಂಗಾಚಾರ್ಲು ಅವರು ನೇಮಿಸಲ್ಪಟ್ಟರು.

ಐತಿಹಾಸಿಕವಾಗಿ. ರಾಜಪ್ರಭುತ್ವ ಅಸ್ತಿತ್ವದಲ್ಲಿದ್ದ ಸಂದರ್ಭದಲ್ಲಿಯೇ, ಅಲ್ಲಲ್ಲೆ ಉದಾರವಾದಿ, ಸಂವಿಧಾನಾತ್ಮಕ ಹಾಗೂ ಪ್ರಜ್ಞಾವಂತ ರಾಜಪ್ರಭುತ್ವವೆನ್ನುವ ಸರಕಾರದ ಹೊಸ ಮಾದರಿಗಳೂ ಕಾಣಿಸಿಕೊಂಡಿರುವುದನ್ನು ಯೂರೋಪಿನ ಇತಿಹಾಸದಿಂದ ತಿಳಿಯಬಹುದಾಗಿದೆ. ರಾಜಪ್ರಭುತ್ವವು ಸಂದರ್ಭಕ್ಕನುಗುಣವಾಗಿ ಜನತಾಂತ್ರಿಕ ಮಾರ್ಪಾಡು ಮಾಡಿಕೊಳ್ಳುತ್ತಾ ಮುಂದುವರಿದದ್ದು ಕಂಡುಬರುತ್ತದೆ.

ಮೈಸೂರು ಸಂಸ್ಥಾನದಲ್ಲಿಯೂ ಸಹ, ೧೮೮೧ರಿಂದ ಈಚೆಗೆ ಇಂತಹ ಬೆಳವಣಿಗೆಗಳು ಹಣಕಿಹಾಕಿದುವು. ಈ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಜನಪ್ರತಿನಿಧಿ ಸಭೆಯೊಂದನ್ನು ದಿವಾನರು ಸ್ಥಾಪಿಸಿದರು. ಇದು ಶಾಸನಬದ್ಧ ಸಂಸ್ಥೆಯಲ್ಲದಿದ್ದರೂ ಪ್ರಾತಿನಿಧಿಕ ಪ್ರಭುತ್ವ ಬೆಳೆಯುವ ದಿಸೆಯಲ್ಲಿ ಪ್ರಥಮ ಹೆಜ್ಜೆಯಾಗಿತ್ತು. ಇದು ನಾವು ಇಂದು ಅರ್ಥೈಸುವ ರೀತಿಯಲ್ಲಿ ಪ್ರಜಾಪ್ರಭುತ್ವವಾದಿ ಸಂಸ್ಥೆಯಾಗಿರಲಿಲ್ಲ. ಇದನ್ನು ಪ್ರಾಯೋಗಿಕ ಎಂದಷ್ಟೇ ಕರೆಯಬಹುದು. ಪ್ರಜಾಪ್ರಭುತ್ವ ವ್ಯವಸ್ಥೆಗೆ, ಅದನ್ನು ಹುಟ್ಟುಹಾಕಿದವರ ಮೂಲ ಉದ್ದೇಶವೇನೇ ಇರಲಿ, ಅದರಲ್ಲಿ ಪ್ರಜಾಪ್ರಭುತ್ವದ ತಾರ್ಕಿಕ ಬೆಳವಣಿಗೆಯ ಅಂಶ ಇರುತ್ತದೆ ಎನ್ನುವುದು ಸ್ಪಷ್ಟ. ಆದರೆ ಈ ಮಾರ್ಪಾಡು ಜನಸಾಮಾನ್ಯರ ಆಶಯದ ಫಲವಾಗಿರದಿದ್ದುದರಿಂದ ನಾವು ಕಾಣುವ ಸಾಂವಿಧಾನಿಕ ಬದಲಾವಣೆ ಕೇವಲ ತೋರಿಕೆಯ ಬದಲಾವಣೆ ಮಾತ್ರವಾಗಿದ್ದು, ಇದರಿಂದ ರೂಢಮೂಲ ಹಿತಾಸಕ್ತಿಗಳಿಗೆ ಯಾವ ಧಕ್ಕೆಯೂ ಉಂಟಾಗಲಿಲ್ಲ. ಈ ತೋರಿಕೆಯ ಬದಲಾವಣೆಗೆ ಕಾರಣರಾದವರೂ ಸ್ಥಳೀಯರಲ್ಲ. ಮುಂದೆ ಈ ಪ್ರಾತಿನಿಧಿಕ ಸಭೆಯ ಸದಸ್ಯರಾದ ಯೂರೋಪಿನ ಪ್ಲ್ಯಾಂಟರ್ಸ್ ಎಂಬುವರು ಈ ಮಿತಿಯೊಳಗಿದ್ದ ಬದಲಾವಣೆಯನ್ನೂ ಒಪ್ಪಿಕೊಳ್ಳದೆ ಯಥಾಸ್ಥಿತಿವಾದವನ್ನು ಬೆಂಬಲಿಸಿದವರು, ಹಳೆಯ ವ್ಯವಸ್ಥೆಯ ಲಾಭಪಡೆದಿದ್ದ ಸಂಸ್ಥಾನಿಕರು ಎಂಬುದು ಗಮನಾರ್ಹ.

ಪ್ರಜಾಪ್ರಭುತ್ವದ ಹೋರಾಟದ ದೀರ್ಘ ಇತಿಹಾಸವಿದ್ದ ಯೂರೋಪಿನ ಜನಸಾಮಾನ್ಯರಲ್ಲಿ ತಮ್ಮ ಹಿತರಕ್ಷಣೆಗೆ ವ್ಯವಸ್ಥೆಯನ್ನೇ ಬದಲಾಯಿಸುವ ರಾಜಕೀಯ ಪ್ರಜ್ಞೆ ಆಳವಾಗಿ ಬೇರೂರಿದಂತೆ, ನಮ್ಮ ಸಂಸ್ಥಾನಿ ಜನರಲ್ಲಿ ಆಗಲಿಲ್ಲ. ತಮಗೆ ಈಗಷ್ಟೆ ದೊರೆತ ಅಧಿಕಾರ ಮತ್ತು ಸವಲತ್ತು ತಮ್ಮ ಸ್ವಾಭಾವಿಕ ಹಕ್ಕು ಎನಿಸದೆ, ಅದು ಮಹಾರಾಜರ ಕೃಪೆ ಎನ್ನುವ ಭಾವನೆಯನ್ನೆ, ಪ್ರತಿನಿಧಿ ಸಭೆಯ ಸ್ಥಳೀಯ ಸದಸ್ಯರು ಹೊಂದಿದ್ದರು. ಈ ಪರಿಸ್ಥಿತಿಯಲ್ಲಿ ಸಂಸ್ಥಾನಿಗರಿಗೆ ಉಳಿದಿದ್ದ ಮಾರ್ಗವೆಂದರೆ ಇಡೀ ವ್ಯವಸ್ಥೆಯನ್ನೇ ಪ್ರಶ್ನಿಸದೆ ಅದರೊಳಗೆ ತಮಗೆ ಮತ್ತು ತಮ್ಮವರಿಗೆ ಹೆಚ್ಚು ಸೌಲಭ್ಯ, ಸವಲತ್ತುಗಳ ಮೀಸಲನ್ನು ಬೇಡುವುದು. ಆಳುವ ವರ್ಗದವರಿಗೂ ಸಹ ಎಲ್ಲಿಯವರೆಗೆ ಸದಸ್ಯರ ಬೇಡಿಕೆಗಳು ವ್ಯವಸ್ಥೆಯ ಮೂಲವನ್ನೇ ಪ್ರಶ್ನಿಸುವುದಿಲ್ಲವೊ ಅಲ್ಲಿಯವರೆಗೆ ಅಂತಹ ಬೇಡಿಕೆಗಳನ್ನು ಮಾನ್ಯಮಾಡುವುದರಲ್ಲಿ ಯಾವ ಆತಂಕವೂ ಇರುವುದಿಲ್ಲ. ಸಂಸ್ಥಾನಿ ಜನರಿಗೆ ತಮ್ಮ ಸೀಮಿತ ಬೇಡಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕೆ ಮಾತ್ರ ಈ ಸಂಸ್ಥೆ ಉಪಯುಕ್ತವಾಯಿತು. ಆಳುವವರಿಗೂ ಜನರ ಅಸಂತೃಪ್ತಿ, ವ್ಯವಸ್ಥೆಯ ಮೂಲಕ್ಕೆ ಪೆಟ್ಟು ಕೊಡುವುದನ್ನು ತಪ್ಪಿಸುವುದಕ್ಕೆ ಇದು ಸಹಾಯವಾಯಿತು.

ಹೀಗೆ ತೋರಿಕೆಗೆ ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರಭುತ್ವ ಮಾದರಿ ಎಂದು ಗುರುತಿಸಲ್ಪಡುತ್ತಿರುವ ಮೈಸೂರು ಪ್ರಜಾಪ್ರತಿನಿಧಿ ಸಭೆಯಂತಹ ರಾಜಕೀಯ ಸಂಸ್ಥೆಗಳ ಉಗಮ ಮತ್ತು ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಕೆಲವು ಪ್ರಮುಖ ಅಂಶಗಳು ಕಂಡುಬರುತ್ತವೆ. ೧೭೯೯ರ ನಂತರ ಮೈಸೂರನ್ನು ಒಡೆಯರ ಮನೆತನದ ಉಸ್ತುವಾರಿಗೆ ವಹಿಸುವಾಗ ಮುಖ್ಯವಾಗಿ ಭೂಕಂದಾಯವನ್ನು ವ್ಯವಸ್ಥಿತವಾಗಿ ವಸೂಲಿ ಮಾಡಿಕೊಡುವ ಆಡಳಿತವನ್ನು ರೂಪಿಸುವುದಷ್ಟೆ ಬ್ರಿಟಿಷರ ಉದ್ದೇಶವಾಗಿತ್ತು. ಇದು ನಿರಂಕುಶ ಪ್ರಭುತ್ವವನ್ನು ಕೊನೆಗಾಣಿಸುವ ಉದ್ದೇಶವುಳ್ಳದ್ದಲ್ಲ. ಮಾರ್ಕ್ಸ್ ಮತ್ತು ಏಂಗಲ್ಸ್‌ರಂತೆ, ''ನಿರಂಕುಶ ಪ್ರಭುತ್ವ ಒಂದು ರಾಜಕೀಯ ಪದ್ಧತಿ ಅಥವಾ ಬಂಡವಾಳದ ಪ್ರಾಬಲ್ಯತೆ'' ಎನ್ನುವುದನ್ನು ಇಲ್ಲಿ ಸ್ಮರಿಸಬಹುದು. ಈ ಉದ್ದೇಶಕ್ಕೆ ಬೆಂಬಲ ಕೊಡುವ ಆಡಳಿತ ವ್ಯವಸ್ಥೆಯನ್ನು ನೋಡಿಕೊಳ್ಳುವ ಜವಾಬ್ದಾರಿ ಮಾತ್ರ ಮಹಾರಾಜರ ಅಧಿಕಾರದ ಪರಿಮಿತಿಯಾಗಿರಬೇಕಾದ್ದು ಅವರಿಗೆ ಅಗತ್ಯವಾಗಿತ್ತು. ಮಹಾರಾಜರ ಅಧಿಕಾರ ಈ ಮಿತಿಯೊಳಗಿರುವಂತೆ ನೋಡಿಕೊಳ್ಳಲು ಸ್ವಲ್ಪಮಟ್ಟಿನ ಪ್ರಜಾಪ್ರಭುತ್ವ ಆಡಳಿತದ ಪ್ರಯೋಗಕ್ಕೆ ಅವರ ಅನುಮತಿ ಇತ್ತೇ ಹೊರತು ಜನರ ಹಿತಾಸಕ್ತಿಯನ್ನು ರಕ್ಷಿಸುವ ಪ್ರಜಾಪ್ರಭುತ್ವ ರಾಜಕೀಯ ಸಂಸ್ಥೆಯನ್ನು ಹುಟ್ಟುಹಾಕುವುದಕ್ಕಲ್ಲ.



ಪ್ರಜಾಪ್ರಭುತ್ವ ಎಂಬ ಆಡಳಿತ ವ್ಯವಸ್ಥೆಯು ಪಶ್ಚಿಮದ ರಾಜಕೀಯ ಸಂದರ್ಭದಲ್ಲಿ ಹುಟ್ಟಿಕೊಂಡದ್ದು. ಇದನ್ನು ಅಬ್ರಹಾಂ ಲಿಂಕನ್, ''ಜನರೇ, ಜನರಿಗಾಗಿ, ಜನರಿಂದ, ರಚಿಸಿಕೊಳ್ಳುವ ಆಡಳಿತ ವ್ಯವಸ್ಥೆಯೆಂದು'' ವ್ಯಾಖ್ಯಾನಿಸಿದ್ದಾನೆ. ಇಂತಹ ಆಡಳಿತ ವ್ಯವಸ್ಥೆಯನ್ನು ಮೈಸೂರು ಜನತೆ ಪಡೆಯಲು ಅನೇಕ ಕಷ್ಟಕಾರ್ಪಣ್ಯಗಳನ್ನು ಎದುರಿಸಿದರು. ಪ್ರಾಯೋಗಿಕ ಪ್ರತಿನಿಧಿ ಸಭೆಯು ಮುಂದುವರಿದು ಒಂದು ರೀತಿಯಲ್ಲಿ ಪ್ರಜಾಪ್ರಭುತ್ವಕ್ಕೆ ವೇದಿಕೆಯಾಯಿತು. ೧೯೩೮ರಲ್ಲಿ ಸ್ಥಾಪನೆಯಾದ ಮೈಸೂರು ಕಾಂಗ್ರೆಸ್ ಸಂಸ್ಥೆ ಎಲ್ಲ ರಾಜಕೀಯ ಬಣಗಳನ್ನು ಒಳಗೊಂಡಿದ್ದ ಬಲಿಷ್ಠ ಸಂಸ್ಥೆಯಾಗಿ ನಿರಂಕುಶ ಪ್ರಭುತ್ವವನ್ನು ದಮನಮಾಡುವ ಕಾರ್ಯಾಚರಣೆಯಲ್ಲಿ ತೊಡಗಿತು. ಅವರ ನೇತೃತ್ವದಲ್ಲಿ ಸಂಸ್ಥಾನಿ ಜನರು ಅನೇಕ ರೀತಿಯ ಹೋರಾಟದಲ್ಲಿ ಪಾಲ್ಗೊಂಡಿದ್ದರು. ರಾಜರ ವಿರುದ್ಧ ಅನೇಕ ಸತ್ಯಾಗ್ರಹ, ಚಳವಳಿಗಳನ್ನು ಮಾಡಲು ಸಾಧ್ಯವಾಯಿತು.

೧೯೪೭ರ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ, ಮೈಸೂರು ಸಂಸ್ಥಾನದಲ್ಲಿ ರಾಜಪ್ರಭುತ್ವವನ್ನು ಉಳಿಸಿಕೊಳ್ಳುವ ಪ್ರಯತ್ನ ನಡೆಯಿತು. ಇದಕ್ಕೆ ವಿರುದ್ಧವಾಗಿ ಮೈಸೂರು ಜನತೆ ಜವಾಬ್ದಾರಿ ಸರ್ಕಾರ ರಚನೆಗಾಗಿ ಚಳವಳಿಯೊಂದನ್ನು ಹಮ್ಮಿಕೊಂಡರು. ಅದೇ 'ಮೈಸೂರು ಚಲೋ ಚಳವಳಿ'. ಈ ಚಳವಳಿಯು ರಾಜಪ್ರಭುತ್ವವನ್ನು ದಿಟ್ಟತನದಿಂದ ಪ್ರಶ್ನಿಸಿತು. ರಾಜನನ್ನು ರಾಜಸತ್ತೆಯಿಂದ ಕೆಳಗಿಳಿಸಲು ಮತ್ತು ಅವನ ಅಧಿಕಾರವನ್ನು ಮೊಟಕುಗೊಳಿಸಲು ಪ್ರಯತ್ನಿಸಿದರು. ವರ್ಗ, ಭಾಷೆ, ಬುಡಕಟ್ಟು, ಸಂತತಿ, ಜಾತಿಗಳಂಥ ಭೇದವಿಲ್ಲದೆ ಪ್ರಜೆಗಳೆಲ್ಲರ ಸಮಾನತೆಯನ್ನು ಒಳಗೊಂಡ ಜನಪ್ರಭುತ್ವವೆಂಬ ನೀತಿಯನ್ನು ಅಳವಡಿಸಿಕೊಂಡಿದ್ದರು. ರಾಜಪ್ರಭುತ್ವವು ಮೈಸೂರು ಸಂಸ್ಥಾನದಲ್ಲಿ ಉಗಮದಿಂದ ಕೊನೆಯವರೆಗೂ ಒಂದಲ್ಲ ಒಂದು ಪ್ರಜಾಪ್ರಭುತ್ವಾತ್ಮಕವಾದ ವಿರೋಧಗಳನ್ನು ಎದುರಿಸುತ್ತಲೇ ಇತ್ತು. ಕೊನೆಗೆ ಜನತೆಯು ಹಮ್ಮಿಕೊಂಡಿದ್ದ ಚಳವಳಿಯಿಂದ ರಾಜಪ್ರಭುತ್ವವು ಪತನಗೊಂಡು ಪ್ರಜಾಪ್ರಭುತ್ವವು ಮೈಸೂರು ರಾಜ್ಯದಲ್ಲಿ ಸ್ಥಾಪಿತವಾಯಿತು. ಸ್ವಾತಂತ್ರ್ಯಾನಂತರ ಪ್ರಜೆಗಳಿಗೆ ಲಭಿಸಿದ ರಾಜಕೀಯ ಸ್ವಾತಂತ್ರ್ಯ ತಮಗೆ ಬೇಕಾದ ಪ್ರಭುತ್ವವನ್ನು ಆರಿಸುವ ಹಾಗೂ ಅಧಿಕಾರಕ್ಕೆ ತರುವ ಹಕ್ಕನ್ನು ನೀಡಿತು. ಆದರೆ ಇಂದು ನಮ್ಮಲ್ಲಿ ಪ್ರಜಾಪ್ರಭುತ್ವದ ಆಡಳಿತವಿದ್ದರೂ, ಪ್ರಜಾಪ್ರತಿನಿಧಿಗಳು ಸಾಮಾನ್ಯ ಪ್ರಜೆಗಳ ಹಿತಾಸಕ್ತಿಗಳನ್ನು ಕಡೆಗಣಿಸಿ, ತಮ್ಮದೇ ವರ್ಗದ ಪ್ರಭುತ್ವದ ಆಡಳಿತ ನಡೆಸುತ್ತಿಲ್ಲವೆ ಎಂಬುದು ಬೇರೆ ಪ್ರಶ್ನೆ.

**ರಾಕೇಶ್ ಎಚ್. ಎಸ್.**
ಇತಿಹಾಸ ಸಂಶೋಧನಾರ್ಥಿ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು - ೫೭೦ ೦೦೬

ರಾಜನ ಹೆಂಡತಿ ರಮಾ ನನಗೆ ಸಂಬಂಧದಲ್ಲಿ ತಂಗಿಯಾಗಬೇಕು. ಅಲ್ಲದೇ ರಾಜ ನನ್ನ ಒಳ್ಳೆಯ ಮಿತ್ರನೂ ಹೌದು. ಅವನು ೩೦ ಹಾಗೂ ೪೦ ಅಡಿಯ ಒಂದು ಸೈಟನ್ನು ಕೊಂಡಿದ್ದಾನೆ. ಸೈಟು ಚಿಕ್ಕದಾದುದರಿಂದ ಮನೆಯ ಸುತ್ತಲಿನ ಜಾಗವನ್ನು ಕಬಳಿಸುವ ಹುನ್ನಾರ ಅವನದು. ಆದರೆ ಇಡೀ ಸೈಟನ್ನು ಆಪೋಶನ ತೆಗೆದುಕೊಂಡು ನಂತರ ಒದ್ದಾಡಿದ ನಾಗಪ್ಪನಷ್ಟು ಧೈರ್ಯ ಇವನಿಗಿಲ್ಲ, ಆದರೂ ಆಸೆ. ಮನೆಯ ಪಕ್ಕಗಳಲ್ಲಿ ಜಾಸ್ತಿ ಜಾಗ ಏಕೆ ಬಿಡಬೇಕು, ೨ ಅಡಿ ಬಿಟ್ಟರೆ ಸಾಕು ಎಂದು ಅವನ ಹವಣಿಕೆ. ಹಾಗೆಯೇ ಮನೆಯ ಹಿಂದೆ ಹಾಗೂ ಮುಂದೆಯೂ ಸಹ ೨ ಅಡಿ ಬಿಟ್ಟರೆ ಸಾಕು ಎಂದು ಹುನ್ನಾರ ನಡೆಸಿದ್ದಾನೆ. ಸುತ್ತಲೂ ಜಾಗ ಬಿಡುವಿಲ್ಲವಾದರೆ ಸುಮ್ಮನೆ ತೊಂದರೆಗೆ ಸಿಲುಕಿಕೊಳ್ಳುವೆ ಎಂದರೆ ಹೇಳಿದ ಮಾತನ್ನು ಕೇಳಲೊಲ್ಲ.



# ಎಡಬಿಡಂಗಿ ಸೆಟ್‌ಬ್ಯಾಕ್

ಒಂದು ರಜೆಯ ದಿನ ಅವನು ತುರ್ತಾಗಿ ಬೇರೆ ಊರಿಗೆ ಹೋಗಬೇಕಾಗಿ ಬಂತು. ಆಗ ಅವನ ಅಮ್ಮನಿಗೆ ಮೈ ಸರಿ ಇರಲಿಲ್ಲ, ಆಕೆಗೆ ಏನಾದರೂ ಹೆಚ್ಚುಕಮ್ಮಿಯಾದರೆ ಮನೆಗೊಬ್ಬ ಗಂಡಸಿರಲಿ ಎಂದು ನನ್ನನ್ನು ಅವನ ಮನೆಯಲ್ಲಿ ಒಂದು ದಿನದ ಮಟ್ಟಿಗೆ ಬಂದು ಇರಲು ಕೇಳಿಕೊಂಡ. ಜೊತೆಗೆ ನನ್ನ ಹೆಂಡತಿ ಮಕ್ಕಳೂ ಇರುತ್ತಾರೆ, ತೊಂದರೆಯೇನೂ ಆಗಲಾರದು ಎಂದು ಧೈರ್ಯ ಹೇಳಿದ. ಸರಿ ನಾನು ಅವನ ಮನೆಗೆ ಹೋದೆ. ಹೋದ ಕೂಡಲೇ ನನ್ನ ದ್ವಿಚಕ್ರ ವಾಹನವನ್ನು ಪಕ್ಕದಲ್ಲಿ ನಿಲ್ಲಿಸಲು ಹೋದೆ, ಕೂಡಲೆ ರಮಾ ನಗುತ್ತಾ ಹೊರಬಂದು ಅಲ್ಲಿ ನಿಲ್ಲಿಸಲು ಆಗುವುದಿಲ್ಲ ಮನೆಯೊಳಗೆ ನಿಲ್ಲಿಸಬೇಕು, ಇಲ್ಲಿರುವ ಸಾಮಾನೆಲ್ಲವನ್ನೂ ಪಕ್ಕಕ್ಕಿಟ್ಟು ರಾತ್ರಿ ನಿಲ್ಲಿಸಲು ಅನುವು ಮಾಡಿಕೊಡುತ್ತೇನೆ ಎಂದಳು. ಓಹೋ ಇದು ಇವನ ಎರಡು ಅಡಿಜಾಗದ ಮಹಿಮೆ ಎಂದುಕೊಂಡೆ. ಹಾಗೆಯೇ ಆ ಜಾಗವನ್ನು ಏನು ಮಾಡಿರುವನೋ ಎಂದು ಬಗ್ಗಿ ನೋಡಿದೆ. ಅವನ ಪಕ್ಕದ ಮನೆಯವರೂ ಇವನಂತೆಯೇ ಎರಡು ಅಡಿ ಬಿಟ್ಟಿದ್ದರು. ನಡುವೆ ಕಾಂಪೌಂಡ್ ಇತ್ತು. ಆ ಕತ್ತಲ ಓಣಿಯಲ್ಲಿ ಏನೂ ಇರಲಿಲ್ಲ, ಓಡಾಡುವುದೂ ಕಷ್ಟವಾಗಿತ್ತು. ಎರಡೂ ಮನೆಯ ಮಕ್ಕಳು ಅಲ್ಲಿ ಚಾಕಲೇಟಿನ ಕಾಗದ, ಬಿಸ್ಕತ್ ರ್‍ಯಾಪರ್ ಮೊದಲಾದ ಕಸಗಳನ್ನು ಕಿಟಕಿಯಿಂದ ಎಸೆದಿದ್ದರು. ಗಿಡವನ್ನು ಬೆಳೆಸಲು ಅಲ್ಲಿ ಜಾಗವೂ ಇರಲಿಲ್ಲ, ಬೆಳಕಂತೂ ಮೊದಲೇ ಇರಲಿಲ್ಲ, ಏನಾದರೂ ಗಿಡಗಂಟೆ ಹಾಕಿದ್ದರೂ ಅಲ್ಲಿ ಅಡ್ಡಡ್ಡವಾಗಿ ಓಡಾಡಬೇಕಿತ್ತು. ಹಾಗಿದ್ದ ಮೇಲೆ ಗಿಡಕ್ಕೆ ನೀರಾದರೂ ಹೇಗೆ ಹಾಕುವುದು ? ಅದಕ್ಕೆ ಬೆಳಕು ?! ಇದೇ ಗತಿ ಅವನ ಮನೆಯ ಇನ್ನೊಂದು ಪಕ್ಕದಲ್ಲೂ ಆಗಿತ್ತು. ಹೀಗೆ ಮಾಡಿ ಅವನು ಏನು ಸಾಧಿಸಿದನೋ ಎಂದೆನ್ನಿಸಿತು.

ಮನೆಯ ಒಳಗೆ ಹೋದೆ. ಮನೆಯೊಳಗೆ ಪರವಾಗಿಲ್ಲವೆನಿಸಿದರೂ ಯಾಕೋ ಕತ್ತಲು ಕತ್ತಲು ಅನ್ನಿಸಿತು. ಕಿಟಕಿಗಳಿದ್ದರೂ ಅವುಗಳಿಂದ ಬೆಳಕೇ ಬರುತ್ತಿರಲಿಲ್ಲ, ಸರಿ ಉಸ್ಸಪ್ಪ ಎಂದು ಅಲ್ಲಿಯೆ ಆರಾಮ ಕುರ್ಚಿಯ ಮೇಲೆ ಕುಳಿತೆ. ಇದ್ದಕ್ಕಿದ್ದಹಾಗೆ ಯಾರೋ ಜೋರಾಗಿ ಕೂಗಾಡತೊಡಗಿದರು. ಬೆಚ್ಚಿಬಿದ್ದು ಎದ್ದು ಕುಳಿತೆ. ಇವನ ಮನೆಯಲ್ಲಿ ಯಾರು ಗಂಡಸರು ಹೀಗೆ ಜೋರಾಗಿ ಕೂಗಾಡುತ್ತಿದ್ದಾರೆ ಎಂದು ಎದ್ದು ನೋಡಿದರೆ ಬಲ ಪಕ್ಕದ ಮನೆಯಲ್ಲಿ ಗಂಡ ಹೆಂಡತಿಯ ನಡುವೆ ಜಗಳ ನಡೆಯುತ್ತಿತ್ತು. ರಮಾ ಕೂಡಲೆ ಓಡಿ ಬಂದು ಅಲ್ಲಿನ ಕಿಟಕಿ ಮುಚ್ಚಿ ನಮಗೆ ಇದೆಲ್ಲವೂ ಸಾಮಾನ್ಯ ಎಂದು ನಕ್ಕಳು. ಆದರೂ ಅವರ ಜಗಳ ಕೇಳುತ್ತಲೇ ಇತ್ತು.

ಇದರ ನಡುವೆಯೇ ಇದ್ದಕ್ಕಿದ್ದ ಹಾಗೆ ನಾಯಿಯೊಂದು ಜೋರಾಗಿ ಬೊಗಳಿ ನನ್ನನ್ನು ಬಡಿದೆಬ್ಬಿಸಿತು. ನಾಯಿ ಬೇರೆ ಸಾಕಿದ್ದೀರಾ ಎಂದು ರಮೆಯನ್ನು ಕೇಳಿದಾಗ ಅದು ನಮ್ಮ ಮನೆಯವರದಲ್ಲ ಆ ಬಲ ಪಕ್ಕದ ಮನೆಯವರದೇ ಎಂದಳು. ಅಲ್ಲಿ ಜನ, ನಾಯಿ ಎಲ್ಲರೂ ಬೊಗಳುತ್ತಲೇ ಇರುತ್ತಾರೆ ಎಂದು ಪಿಸುಮಾತಿನಲ್ಲಿ ಹೇಳಿದಳು. ನಾಯಿ ಬೊಗಳುವದಂತೂ ನನ್ನ ಕಿವಿಯಲ್ಲೇ ಕೊರೆದಂತಾಗುತ್ತಿತ್ತು. ಇದನ್ನೆಲ್ಲಾ ಹೇಗೆ ಸಹಿಸಿ ಕೊಂಡಿದ್ದೀರಿ, ಅವರಿಗೆ ಸ್ವಲ್ಪ ಹೇಳಬಾರದಾ ಎಂದಾಗ, ನೆರೆಹೊರೆ ಎಂದರೆ ಇದೇನೆ ಎಂದಳು.

ಅಲ್ಲಿಯೇ ಕುಳಿತು ಪೇಪರನ್ನು ಮುಖದ ಮುಂದೆ ಹಿಡಿದು ಓದುತ್ತಿದ್ದಾಗ ಇದ್ದಕ್ಕಿದ್ದಂತೆ ಹೆಣ್ಣು ಧ್ವನಿಯೊಂದು, ಲೇ ರಮಾ ಇದೇನೆ ಪೇಪರ್ ಓದುತ್ತಾ ಕುಳಿತಿದ್ದೀ, ಕೆಲಸವೆಲ್ಲಾ ಆಗಲೇ ಮುಗಿಯಿತೇನೆ ಎಂದಿತು. ಪೇಪರನ್ನು ಮುಖದಿಂದ ಸರಿಸುತ್ತಲೇ, ಅಯ್ಯೋ ಸಾರಿ ಎಂದು ಆ ಧ್ವನಿ ಕ್ಷೀಣವಾಯಿತು. ಅದು ಎಡಪಕ್ಕದ ಮನೆಯ ಒಡತಿಯ ಧ್ವನಿ. ಆಕೆ ಕಿಟಕಿಯಿಂದಲೇ ರಮೆಯನ್ನು ಮಾತನಾಡಿಸಿದ್ದಳು. ಹೀಗೆಯೇ ಅವರ ಮನೆಯಲ್ಲಿದ್ದಷ್ಟೊತ್ತೂ, ನಾಯಿ ಬೊಗಳುವುದು, ಮಗು ಅಳುವುದು, ಕಿರಿಚುವುದು, ಗಂಡ ಹೆಂಡಿರು ಮಾತನಾಡುವುದು, ಜಗಳವಾಡುವುದು, ಪಾತ್ರೆ ಬಿದ್ದ ಸದ್ದು, ಕುಕ್ಕರ್ ಕೂಗಿದ ಸದ್ದು, ಕಿಟಕಿಯಿಂದಲೇ ಮಾತನಾಡುವುದು ಮೊದಲಾದ ಒಂದಲ್ಲಾ ಒಂದು ಘಟನೆಗಳು ನಡೆಯುತ್ತಲೇ ಇದ್ದವು. ಅವೆಲ್ಲಾ ಅಕ್ಕಪಕ್ಕದ ಮನೆಯಲ್ಲಿ ನಡೆದರೂ ಇವರ ಮನೆಯಲ್ಲೇ ನಡೆಯುತ್ತಿದೆಯೇನೋ ಎಂಬಷ್ಟು ಸ್ಪಷ್ಟವಾಗಿ ಕೇಳುತ್ತಿದ್ದವು. ಹೀಗಿದ್ದರೆ ನೀವು ಹೇಗೆ ಇರುತ್ತೀರಾ ? ಎಂದರೆ ಇಲ್ಲಿ ಮನೆಯೆಲ್ಲವೂ ಹತ್ತಿರ ಹತ್ತಿರ ಇರುವುದರಿಂದ ಹೀಗೆ, ಮೊದಲು ನಮಗೂ ಕಷ್ಟವಾಯಿತು ಈಗ ಎಲ್ಲವೂ ಅಭ್ಯಾಸವಾಗಿದೆ ಎಂದು ರಮೆ ಹೇಳಿದಳು.

ಈ ಗಲಾಟೆಯ ನಡುವೆಯೇ ರಾಜನ ತಾಯಿಯು ಸಂಕಟಪಡುತ್ತಾ ಕತ್ತಲೆಯ ಕೋಣೆಯೊಂದರಲ್ಲಿ ಹಾಸಿಗೆಯ ಮೇಲೆ ಮಲಗಿದ್ದರು. ಅವರ ಸ್ಥಿತಿ ನೋಡಿ ಅಯ್ಯೋ ಎನ್ನಿಸಿತು. ಹೊರಗೆ ಜಾಗವಿದ್ದೂ ನಿಲ್ಲಿಸಲಾಗದೇ, ಮನೆಯೊಳಗೆ ಜಾಗ ಮಾಡಿಸಿ, ರಾತ್ರಿಯ ವೇಳೆ ಮಾತ್ರ ವಾಹನವನ್ನು ನಿಲ್ಲಿಸಬೇಕಾಗಿ ಬಂದ ಪರಿಸ್ಥಿತಿಯನ್ನು ನೋಡಿ ಮನಸ್ಸಿಗೆ ಕಸಿವಿಸಿಯಾಯಿತು.

ಅಕ್ಕ ಪಕ್ಕದ ಎಲ್ಲರೂ ಸರಿಯಾಗಿ ಮನೆಯ ಸುತ್ತಲೂ ನಿಗದಿಪಡಿಸಿದಂತೆ ಜಾಗ ಬಿಟ್ಟು ಕಟ್ಟಿದ್ದರೆ ಹೀಗಾಗುತ್ತಿರಲಿಲ್ಲ ಅಲ್ಲವೇ ? ಕೇವಲ ಹೆಸರಿಗೆ ಓಡಾಡಲೂ ಆಗದಂತೆ ಜಾಗ ಬಿಟ್ಟು, ಆ ಜಾಗವನ್ನು ತಿಪ್ಪೆಗುಂಡಿ ಮಾಡಿಕೊಂಡಿದ್ದ ಆ ಮನೆಗಳವರನ್ನು ನೋಡಿದರೆ ನಿಮಗೇನನ್ನಿಸುತ್ತದೆ ? ಹಾಗೆಯೇ ಕಡಿಮೆ ಅಗಲವುಳ್ಳ ನಿವೇಶನಗಳಿದ್ದಾಗ ಅಲ್ಲಿ ಒಂದಕ್ಕೊಂದು ಅಂಟಿಕೊಂಡಿರುವಂತಹ ಸಾಲುಮನೆಗಳನ್ನು ಕಟ್ಟಿದರೆ ಜಾಗವೂ ಹೆಚ್ಚು ಸಿಗುತ್ತದೆ, ಹಿಂದಿನಿಂದ ಹಾಗೂ ಮುಂದಿನಿಂದ ಗಾಳಿ ಬೆಳಕೂ ಸಿಗುತ್ತದೆ, ಸೆಟ್‌ಬ್ಯಾಕ್ ಎಂಬ ಕತ್ತಲ ಓಣಿಗಳ ನಿವಾರಣೆಯೂ ಆಗುತ್ತದೆ.

**ಪ್ರೊ|| ಜಗದೀಶ್ ಚಂದ್ರ ಬಿ. ಎಸ್.**

ಲ್ಯಾಂಡ್‌ಸ್ಕೇಪ್ ಆರ್ಕಿಟೆಕ್ಟ್, ನಂ. ೪೪೨, ೧ನೇ ಮಹಡಿ, ೩೮ನೇ ಕ್ರಾಸ್, ೫ನೇ ಬ್ಲಾಕ್, ಜಯನಗರ

ಬೆಂಗಳೂರು - ೫೬೦ ೦೪೧

# ಸಂತೋಷಕ್ಕೆ ಏನು ಬೇಕು ?



ಜೀವನದ ವಿವಿಧ ಕಾಲಘಟ್ಟಗಳಲ್ಲಿ ವ್ಯಕ್ತಿ ಅನುಭವಿಸುವ ಸಂತೋಷದ ಸ್ವರೂಪ ಹಾಗೂ ಗುಣಮೌಲ್ಯ ಒಂದೇ ರೀತಿಯಾಗಿರುವುದಿಲ್ಲ. ಬಾಲ್ಯದಲ್ಲಿ ಬೆಲ್ಲ ತಿಂದು ಮಗು ಸಂತೋಷ ಕಂಡುಕೊಂಡರೆ, ತಾರುಣ್ಯದಲ್ಲಿ ಯುವಕ ಯುವತಿಯರು ಪರಸ್ಪರ ಅನುರಾಗದಲ್ಲಿ ಸಂತೋಷವನ್ನು ಅನುಭವಿಸಿದರೆ, ವಾರ್ಧಕ್ಯದಲ್ಲಿ ಪಾರಮಾರ್ಥಿಕ ಸುಖವೇ ಮೇಲುಗೈ ಸಾಧಿಸಬಹುದು. ವ್ಯಕ್ತಿಯಿಂದ ವ್ಯಕ್ತಿಗೆ ಸಂತೋಷದ ಪರಿಕಲ್ಪನೆ ಬೇರೆಬೇರೆಯಾಗಿರಬಹುದು.

ಮನಃಶಾಸ್ತ್ರಜ್ಞರ ಪ್ರಕಾರ ವ್ಯಕ್ತಿಯು ವಿಕಾಸದ ವಿವಿಧ ಹಂತಗಳಲ್ಲಿ ಸಂತೋಷವನ್ನು ಅನುಭವಿಸುತ್ತಾನೆ. ಸಂತೋಷವನ್ನು ಅನುಭವಿಸಬೇಕಾದರೆ ವ್ಯಕ್ತಿಗೆ ಇಂಗ್ಲಿಷ್‌ನ ಮೂರು 'A'ಗಳ ಅಗತ್ಯವಿದೆ: Acceptance, Affection and Achievement. ಇವು ವ್ಯಕ್ತಿಗೆ ಧಾರಾಳ ಲಭಿಸಬೇಕು. ಅಂದರೆ ವ್ಯಕ್ತಿಯ ವಿಕಾಸದ ಪ್ರಕ್ರಿಯೆಯಲ್ಲಿ ಸ್ವೀಕಾರ, ಪ್ರೀತಿ ವಾತ್ಸಲ್ಯ ಹಾಗೂ ಸಾಧನೆಯ ಭಾವನೆಗಳು ಬಲಗೊಳ್ಳಬೇಕು.

ಪ್ರತಿಯೊಬ್ಬ ವ್ಯಕ್ತಿಯೂ ತನ್ನನ್ನು ಇತರರು ಸ್ವೀಕರಿಸಬೇಕು, ತನ್ನನ್ನು ಗುಂಪಿನ ಸದಸ್ಯನನ್ನಾಗಿ ಸ್ವೀಕರಿಸಬೇಕು ಎಂದು ಹಂಬಲಿಸುತ್ತಾನೆ. ಇತರರು ಅವನನ್ನು ಹಾಗೆ ಸ್ವೀಕರಿಸಿದಾಗ ಸಂತೋಷ ಅನುಭವಿಸುತ್ತಾನೆ. ಆದರೆ ಕಾರಣಾಂತರಗಳಿಂದ ನಿರಾಕರಿಸಲ್ಪಟ್ಟಾಗ ಹತಾಶೆಗೆ ಒಳಗಾಗುತ್ತಾನೆ. ಮಗು ಹೇಗೇ ಇರಲಿ, ''ಇದು ನಮ್ಮ ಮಗು, ನಮ್ಮ ಮನೆಯ ದೀಪ'' ಎಂಬ ಭಾವನೆ ಕುಟುಂಬದಲ್ಲಿ ಕಂಡುಬಂದಾಗ, ತಂದೆತಾಯಿಯರು ಮಗುವನ್ನು ಅದು ಇರುವ ಸ್ಥಿತಿಯಲ್ಲೇ ಸ್ವೀಕರಿಸಿದಾಗ ಅದರಲ್ಲಿ ಆತ್ಮಸಂಮಾನದ, ಧೈರ್ಯದ ಭಾವನೆಗಳು ಬಲಿಯುತ್ತವೆ. ಆದರೆ, ''ನೀನು ಚಂದವಿಲ್ಲ, ನೀನು ಹುಟ್ಟಿದ ಮೇಲೆ ನಾವು ದರಿದ್ರರಾದೆವು. ನೀನು ನನ್ನ ಮಗುವೇ ಅಲ್ಲ'' ಎಂದೆಲ್ಲ ತಂದೆಯೋ ತಾಯಿಯೋ ಅಥವಾ ಇಬ್ಬರೂ ತೆಗಳಿದಾಗ ಮಗುವಿನಲ್ಲಿ ಕೀಳರಿಮೆ ಭಾವನೆಗಳು, ಪರಕೀಯ ಪ್ರಜ್ಞೆ ಹಾಗೂ ಅನಾಥ ಪ್ರಜ್ಞೆ ಬೆಳೆಯುತ್ತವೆ. ಇದೇ ಮಗು ಮುಂದೆ ಎಲ್ಲ ಕಡೆಗಳಲ್ಲಿ ಎಲ್ಲರಿಂದ ತಿರಸ್ಕರಿಸಲ್ಪಟ್ಟಾಗ ಅದರ ವ್ಯಕ್ತಿತ್ವ ಛಿದ್ರಗೊಳ್ಳುತ್ತದೆ. ಆತಂಕದ ಭಾವನೆಗಳು ಹೆಚ್ಚುತ್ತವೆ. ಸಮಾಜ ವಿದ್ರೋಹದ ಯೋಚನೆಗಳು ಸುಳಿಯುತ್ತವೆ.

ಬೆಳೆಯುವ ಮಗುವಿನ ಮುಂದೆ ನೂರೆಂಟು ಆಟಿಕೆಗಳನ್ನು ರಾಶಿ ಹಾಕಿ ಫಲವಿಲ್ಲ, ಸಕಲ ಸಂಪತ್ತನ್ನೂ ಮಗುವಿನ ಕಾಲ ಬುಡದಲ್ಲಿ ಸುರಿದು ಫಲವಿಲ್ಲ. ಬಾಹ್ಯ ಪರಿಕರಗಳು ಹಾಗೂ ಸೌಕರ್ಯಗಳಿಗಿಂತಲೂ ಅಧಿಕತರವಾದುದು ತಾಯ್ತಂದೆಯರ, ಬಂಧುಬಳಗದ, ಮಿತ್ರವೃಂದದ ಪ್ರೀತಿವಾತ್ಸಲ್ಯ. ಬಡತನದ ನಡುವೆಯೂ ಪ್ರೀತಿಪ್ರೇಮದ ಸಿರಿತನವರಳಿದಾಗ ಮಗುವಿನ ಆತ್ಮವಿಶ್ವಾಸ ವರ್ಧಿಸುತ್ತದೆ. ''ನೀನು ನಿಷ್ಪ್ರಯೋಜಕ'' ಎಂದು ತಂದೆತಾಯಿಗಳಾಗಲಿ ಅಥವಾ ಇತರರಾಗಲಿ ದಿನನಿತ್ಯ ದೂಷಿಸುತ್ತಿದ್ದರೆ ಬೆಳೆಯುವ ಮಗು ಕುಬ್ಜವಾಗುತ್ತದೆ. ವಿಕೃತರೂಪ ತಳೆಯುತ್ತದೆ. ಶಿಕ್ಷಕರು ವಿದ್ಯಾರ್ಥಿಗಳನ್ನು ಪ್ರೀತಿ ಗೌರವಗಳಿಂದ ನಡೆಸಿಕೊಳ್ಳದೆ ಶತ್ರುಗಳಂತೆ ನೋಡಿಕೊಂಡಲ್ಲಿ ಮಕ್ಕಳಿಗೆ ಶಾಲೆ ಸೆರೆಮನೆಯಾಗಿಬಿಡುತ್ತದೆ. ಭಯ, ಭೀತಿ, ಹಿಂಜರಿಕೆ, ಸೋಲಿನ ಭಯ, ಶಿಕ್ಷೆಯ ಭೀತಿ ಕಾಡುತ್ತವೆ. ಪ್ರೀತಿ ತೋರುವ, ಸಾಂತ್ವನ ಹೇಳುವ ಸ್ನೇಹಿತರಿಲ್ಲದಿದ್ದರೆ ಬದುಕು ನರಕಸದೃಶವಾಗುತ್ತದೆ. ಪ್ರೀತಿ ಪ್ರೇಮಗಳಿಂದ ವಂಚಿತರಾದ ಮಕ್ಕಳೂ ಸಾಂಸಾರಿಕ ಜೀವನದಲ್ಲೂ, ಉದ್ಯೋಗರಂಗದಲ್ಲೂ, ಸಮಾಜ ಜೀವನದಲ್ಲೂ ಸ್ನೇಹದಿಂದ ವಂಚಿತರಾದರೆ ಬಾಳಿನಲ್ಲಿ ಘೋರ ನೈರಾಶ್ಯ ಕವಿದು ಆತ್ಮಹತ್ಯೆಗೆ ಮೊರೆಹೋಗಬಹುದು.

ಸಾಧನೆಯ ಹಂಬಲ ಹಲವರಲ್ಲಿ ತೀವ್ರವಾಗಿದ್ದರೆ ಮತ್ತೆ ಕೆಲವರಲ್ಲಿ ಮಸುಕಾಗಿರುತ್ತದೆ. ತಂದೆತಾಯಿಯರು ಹಾಗೂ ಗುರುಹಿರಿಯರು ಮಕ್ಕಳಿಗೆ ಸಾಧನೆಯ ಅಭಿಪ್ರೇರಣೆಯನ್ನು ಒದಗಿಸಬೇಕು. ಮಾಡುವ ಕೆಲಸಗಳನ್ನು ಇನ್ನೂ ಚೆನ್ನಾಗಿ ಮಾಡುವುದು, ಉತ್ಕೃಷ್ಟತೆಯನ್ನು ಸಾಧಿಸಲು ಹವಣಿಸುವುದು, ತನ್ನ ಗುಣಮಟ್ಟವನ್ನು ಎತ್ತರಿಸಿಕೊಳ್ಳುವುದು ಅಥವಾ ತನ್ನನ್ನು ತಾನು ಮೀರುವ ಬಯಕೆಯೇ ಸಾಧನೆಯ ಅಭಿಪ್ರೇರಣೆ. ''ನಿನ್ನಿಂದ ಇದು ಸಾಧ್ಯ. ನಿನ್ನ ಮೇಲೆ ನನಗೆ ಭರವಸೆ ಇದೆ'' ಎಂಬ ಮಾತುಗಳ ಮೂಲಕ ಹೆತ್ತವರು ಮಕ್ಕಳಲ್ಲಿ ಯಶಸ್ಸಿನ ಭರವಸೆಯನ್ನು ಹೆಚ್ಚು ಹೆಚ್ಚಾಗಿ ಮೂಡಿಸಿ ಅವರ ಸಣ್ಣಪುಟ್ಟ ಸಾಧನೆಗಳನ್ನು ಗುರುತಿಸಿ ಮಾನ್ಯ ಮಾಡಿದರೆ ಆಗ ಅವರಲ್ಲಿ ಸಂತೋಷದ ಪ್ರಮಾಣ ಹೆಚ್ಚುತ್ತದೆ. ಶಾಲೆಗಳಲ್ಲಿ ಶಿಕ್ಷಕರು, ಸಂಸಾರದಲ್ಲಿ ಸಹವರ್ತಿಗಳು, ಉದ್ಯೋಗ ರಂಗದಲ್ಲಿ ಸಹೋದ್ಯೋಗಿಗಳು ಹಾಗೂ ಆಡಳಿತಗಾರರು ವ್ಯಕ್ತಿಗಳ ಸಾಧನೆಗಳನ್ನು ಗುರುತಿಸಿ ಗೌರವಿಸಿದಾಗ ಇನ್ನಷ್ಟು ಸಾಧನೆ ಮಾಡಬೇಕೆಂಬ ಹಂಬಲ ಮೂಡುತ್ತದೆ. ಸಾಧನೆ ತರುವ ಸಂತೋಷದಿಂದ ವ್ಯಕ್ತಿ ಮಾನಸಿಕವಾಗಿ ಬಲಿಷ್ಠನಾಗುತ್ತಾನೆ. ಬದುಕನ್ನು ಆಶಾವಾದಿ ಕಂಗಳಿಂದ ವೀಕ್ಷಿಸುತ್ತಾನೆ. ಇದಕ್ಕೆ ಬದಲಾಗಿ, ''ನೆಲದಲ್ಲಿ ತೆವಳುವ ಬಸವನಹುಳು ಆಕಾಶದಲ್ಲಿ ಹಾರಾಡುವ ಗರುಡನಂತಾಗಲು ಬಯಸಬಾರದು'' ಎಂಬಂಥ ಕುತ್ಸಿತ ಟೀಕೆಗಳಿಂದ ಸಾಧನೆಯ ಹಂಬಲ ಕುಸಿಯುತ್ತದೆ. ಏನನ್ನೂ ಮಾಡಲಾಗದ ಮೌಢ್ಯ ಕವಿಯುತ್ತದೆ. ಸಾಧನೆಯ ಹಂಬಲವನ್ನು ಪೋಷಿಸುವ ವಾತಾವರಣವಿದ್ದರೆ ಮೂಕನೂ ವಾಚಾಲನಾಗಬಹುದು. ಭಿನ್ನ ಸಾಮರ್ಥ್ಯದವರೂ ಗಿರಿಯನ್ನೇರಬಹುದು. ಆದುದರಿಂದ ವ್ಯಕ್ತಿಯ ವಿಕಾಸದ ಕ್ರಿಯೆಯಲ್ಲಿ 'ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರ ಪೂಜನಂ' ಎಂಬ ಮಾತಿಗೆ ವಿಶೇಷ ಮೌಲ್ಯವಿದೆ.


ಡಾ।। ಮಹಾಬಲೇಶ್ವರ ರಾವ್

ಪ್ರಾಂಶುಪಾಲರು, ಡಾ।। ಟಿ. ಎಂ. ಎ. ಪೈ ಕಾಲೇಜ್ ಆಫ್ ಎಜುಕೇಷನ್, ಕುಂಜಿಬೆಟ್ಟು

ಉಡುಪಿ - ೫೭೬ ೧೦೨


ಬೆಂದ ನೆಲದಲ್ಲಿ
ನೊಂದವನ ಹಾಡು !

ಜೋಡೆತ್ತುಗಳ ಕಟ್ಟಿ
ಉತ್ತಿದ ಹಾಡು
ರಂಟೆ – ಕುಂಟೆಗಳ ಹೊಡೆದು
ಬೆಳೆದ ಪಾಡು !

ಸೂರ್ಯ – ಚಂದ್ರರು ತಿರುಗಿ
ತೂಗಿದ ಜೋಗುಳದ ಹಾಡು
ಹಗಲ ಚಿಂತೆಯಲಿ ಚಿತೆಯೇರಿದವಗೆ
ನಿದ್ದೆ ಬಾರದ ರಾತ್ರಿಗಳ ಪಾಡು !

ಮುಂಗಾರ ಮಿಂಚು : ಹಿಂಗಾರ ಸಂಚಿನಲಿ
ಸರಿದು – ಸುರಿದ ಮಳೆಯ ಹಾಡು




ಬಿತ್ತಿದ ಮುತ್ತು ತುತ್ತಾಗುವ ಮೊದಲೇ
ಕೋಡಿಬಿದ್ದ ಕಣ್ಣೀರ ಪಾಡು !

ಬೆಳ್ಳನೆಯ ಹತ್ತಿ ಕೆಂಪನೆಯ ಖಾರಕ್ಕೆ
ಮರುಳಾದ ಮರುಳನ ಹಾಡು
ಕಣ್ಣಿಗೆ ಮಣ್ಣೆರಚುವ ಬಿಳಿಯಂಗಿಯವರ
ಬರಿ ಮಾತಿಗೆ ಬೆರಗಾದ ಪಾಡು !

ಹಸಿರು ಬೆಳೆದು ಉಸಿರಾದರೂ ದೇಶಕ
ಹೆಸರಾಗದ ಹಾಡು
ಸಾಲದಿ ಹುಟ್ಟಿ ಸಾಲದಿ ಸಾಯುವ
ಮಣ್ಣ ಮಗನ ಪಾಡು !


ವಿ. ಹರಿನಾಥ ಬಾಬು

ಸದಾಶಿವ ನಗರ, ಸಿರುಗುಪ್ಪ - ೫೮೩ ೧೨೧



# ಸಾಮಾಜಿಕ ಬದ್ಧತೆಯ ಚಿತ್ರಗಳು

ಯು. ಎಸ್. ವೆಂಕಟರಾಮನ್ ಅವರ ಪ್ರತಿ ಚಿತ್ರವೂ ಸಾಮಾಜಿಕ ಸಮಸ್ಯೆ – ಆಡಳಿತದ ಅವಗುಣ – ಧರ್ಮದ ದುರ್ಬಳಕೆ – ಪರಿಸರ ಹಾನಿ – ಸಾವಿರಾರು ಜನಕ್ಕೆ, ಜಾನುವಾರಿಗೆ ಅನ್ನ ನೀಡುವ ಕೆರೆಯ ಹೂಳೆತ್ತದಿರುವಿಕೆ, ಒಡೆದ ಕಟ್ಟೆಗಿಲ್ಲದ ಕಾಯಕಲ್ಪ – ಶಾಲೆಗಳಿಗಿಲ್ಲದ ಶೌಚಾಲಯ – ಇವುಗಳಿಗೆ ಅಲ್ಪಹಣ ಖರ್ಚು ಮಾಡಲು ತಯಾರಿಲ್ಲದ ಸರ್ಕಾರ ಕೋಟಿಗಟ್ಟಲೆ ಹಣವನ್ನು ಮೇಲ್ ಸೇತುವೆಗೆ (ಫ್ಲೈಓವರ್) ವ್ಯಯಿಸಿ ಕೆಲವೇ ಜನರ ಹಿತಕಾಯ್ದು ಬಹುಜನರಿಗೆ ಬಾಧೆ ನೀಡುತ್ತಿರುವ ಆಡಳಿತ ವೈಖರಿ – ಇವೆಲ್ಲವನ್ನು ಬಿಂಬಿಸುತ್ತವೆ. ಒಂದೊಂದು ಚಿತ್ರವನ್ನು ಗಂಭೀರವಾಗಿ ನೋಡುತ್ತಾ ಹೋದಂತೆ, ಸದಿಚ್ಛಾ ಕಾರ್ಯಶಕ್ತಿ ಇರದ ರಾಜಕೀಯದಿಂದ ಉಲ್ಬಣಗೊಂಡ ರಾಷ್ಟ್ರೀಯ ಸಮಸ್ಯೆಗಳನ್ನು ದೃಶ್ಯವನ್ನಾಗಿಸುವಲ್ಲಿ ವೆಂಕಟ ರಾಮನ್ ಅವರ ಪಾತ್ರ ಹಿರಿದಾದುದು.

ಎಲ್. ಶಿವಲಿಂಗಪ್ಪ
ನಂ. ೯, ಕಲಾಮನೆ, ೧೨ನೇ ಕ್ರಾಸ್
ರಾಮಾನುಜ ರಸ್ತೆ, ಮೈಸೂರು - ೪



ಪರಿಸರನಾಶ - ಕಾಂಕ್ರೀಟ್ ಅರಣ್ಯಗಳು



ಅಣುಬಾಂಬ್ ಸ್ಫೋಟದ ನಂತರ ನಾಗರಿಕತೆ




ನೈಜ ಯೋಧರು - ಕ್ರಿಕೆಟ್ ಆಟಗಾರರೆಂಬ ಠಕ್ಕ ವೀರರು



ತುರ್ತು ಪರಿಸ್ಥಿತಿ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

